

# "ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಶೈಕ್ಷಣಿಕ ಗುಣಮಟ್ಟ ಒಂದು ಅಧ್ಯಯನ"

(ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ, ಇವರಿಗೆ ಪಿ.ಎಚ್.ಡಿ
ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು:

ಶ್ರೀ ಕಾಶಿನಾಥರಾವ ಎಂ. ಚೆಲ್ವಾ
ಶಿಕ್ಷಣ ಸಂಯೋಜಕರು
ಕ್ಷೇ.ಶಿ.ಅಧಿಕಾರಿಗಳ ಕಾರ್ಯಾಲಯ
ಭಾಲ್ಕಿ ಜಿ: ಬೀದರ


*******


ಮಾರ್ಗದರ್ಶಕರು:

ಡಾ: ಜಗನ್ನಾಥ ಹೆಬ್ಬಾಳೆ
ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ
ಕನ್ನಡ ಸಂಶೋಧನ ಕೇಂದ್ರ ಬೀದರ.







ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ – 583276
2011



# "ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಶೈಕ್ಷಣಿಕ ಗುಣಮಟ್ಟ ಒಂದು ಅಧ್ಯಯನ"

(ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ, ಇವರಿಗೆ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)


*ಸಂಶೋಧಕರು:*

**ಶ್ರೀ ಕಾಶಿನಾಥರಾವ ಎಂ. ಚೆಲ್ವಾ**
ಶಿಕ್ಷಣ ಸಂಯೋಜಕರು
ಕ್ಷೇ.ಶಿ.ಅಧಿಕಾರಿಗಳ ಕಾರ್ಯಾಲಯ
ಭಾಲ್ಕಿ ಜಿ: ಬೀದರ

*******

*ಮಾರ್ಗದರ್ಶಕರು:*

ಡಾ: ಜಗನ್ನಾಥ ಹೆಬ್ಬಾಳೆ
ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ
ಕನ್ನಡ ಸಂಶೋಧನ ಕೇಂದ್ರ ಬೀದರ.





ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ – 583276
2011

## ಪ್ರಮಾಣ ಪತ್ರ

*"ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಶೈಕ್ಷಣಿಕ ಗುಣಮಟ್ಟ ಒಂದು ಅಧ್ಯಯನ"*

ಎಂಬ ಸಂಶೋಧನಾ ಮಹಾಪ್ರಬಂಧವನ್ನು ***ಡಾ॥ ಜಗನ್ನಾಥ ಹೆಬ್ಬಾಳೆ*** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿ.ಎಚ್.ಡಿ ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಅವರಿಗೆ ಸಲ್ಲಿಸುತ್ತಿದ್ದೇನ. ಪ್ರಸ್ತುತ ಮಹಾ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಭಾಲ್ಕಿ
ದಿನಾಂಕ : ೧೧-೦೪-೨೦೧೧

**ಕಾಶಿನಾಥರಾವ.ಎಂ.ಚೆಲ್ವಾ**
ಸಂಶೋಧನ ವಿದ್ಯಾರ್ಥಿ
ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ
ಕನ್ನಡ ಸಂಶೋಧನ ಕೇಂದ್ರ
ಬೀದರ.

# ಮಾರ್ಗದರ್ಶಕರ ಪ್ರಮಾಣ ಪತ್ರ

"ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಶೈಕ್ಷಣಿಕ ಗುಣಮಟ್ಟ ಒಂದು ಅಧ್ಯಯನ ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿ.ಎಚ್.ಡಿ. ಪದವಿಗಾಗಿ ಶ್ರೀ ಕಾಶಿನಾಥರಾವ ಎಂ. ಚೆಲ್ವಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಬೀದರ
ದಿನಾಂಕ:

ಡಾ: ಜಗನ್ನಾಥ ಹೆಬ್ಬಾಳೆ
ಮಾರ್ಗದರ್ಶಕರು
ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ
ಕನ್ನಡ ಸಂಶೋಧನಾ ಕೇಂದ್ರ ಬೀದರ

# ಪರಿವಿಡಿ

**ಅಧ್ಯಯ ೪) :-** ೧೫೮-೧೮೦

1. ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಒಂದು ಸ್ಥೂಲನೋಟ.
2. ಜಿಲ್ಲೆಯ ಜನಸಂಖ್ಯೆ ಅಂಕಿ ಸಂಖ್ಯೆಗಳು.
3. ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರ ಹಾಜರಾತಿ.
4. ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ವಿವರಗಳು.
5. ಖಾಸಗಿ, ಸರ್ಕಾರಿ, ಕನ್ನಡ ಆಂಗ್ಲ, ಮರಾಠಿ, ಉರ್ದು ಶಾಲೆಗಳ ಸಂಖ್ಯೆ.

**ಅಧ್ಯಯ ೫) :-** ೧೮೧-೨೦೨

1. ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳಲ್ಲಿನ ಮೂಲಭೂತ ಸೌಲಭ್ಯಗಳು.
2. ಶಾಲಾ ಕಟ್ಟಡದ ವ್ಯವಸ್ಥೆ.
3. ಗ್ರಂಥಾಲಯ ಮತ್ತು ಸುತ್ತುಗೋಡೆ.
4. ಶಾಲಾ ಕೋಣೆಗಳ ವ್ಯವಸ್ಥೆ.
5. ವಿದ್ಯುತ್, ರಸ್ತೆ, ಕುಡಿಯುವ ನೀರು.
6. ಪಾಠೋಪಕರಣ ಮತ್ತು ಪಿಠೋಪಕರಣಗಳು.
7. ಪ್ರಯೋಗಾಲಯ ಹಾಗೂ ಕಂಪ್ಯೂಟರ್ ವ್ಯವಸ್ಥೆ.
8. ನೈರ್ಮಲ್ಯ ಹಾಗು ಶೌಚಾಲಯಗಳು
9. ಬಿಸಿ ಊಟದ ವ್ಯವಸ್ಥೆ.

# ಬೀದರ ಜಿಲ್ಲೆಯ ನಕ್ಷೆ



# ಪ್ರವೇಶ

ಕರ್ನಾಟಕ ರಾಜ್ಯದ ಭೂಪಟದಲ್ಲಿ ಉತ್ತರ ದಿಕ್ಕಿನ ತುತ್ತತುದಿಯಲ್ಲಿ ಬೀದರ ಜಿಲ್ಲೆ ಇದೆ. ಈ ಜಿಲ್ಲೆಯು ಹೈದ್ರಾಬಾದ ಕರ್ನಾಟಕದಲ್ಲಿ ಒಂದು ವಿಶಿಷ್ಟ ಜಿಲ್ಲೆ ಇದರಲ್ಲಿ 5 ತಾಲ್ಲೂಕಗಳಿವೆ. ಬೀದರ, ಭಾಲ್ಕಿ, ಔರಾದ, ಹುಮನಾಬಾದ ಹಾಗೂ ಬಸವಕಲ್ಯಾಣ ಈ 5 ತಾಲ್ಲೂಗಳಲ್ಲಿ ಸರ್ಕಾರಿ ಖಾಸಿಗೆ ಅನುದಾನಿತ, ಅನುದಾನರಹಿತ ಪ್ರಾಥಮಿಕ ಶಾಲೆಗಳು ನಡೆಯುತ್ತಲಿವೆ. ಕನ್ನಡ, ಮರಾಠಿ, ಉರ್ದು, ಹಿಂದಿ, ಇಂಗ್ಲೀಷ ಮಾಧ್ಯಮದ ಶಾಲೆಗಳು ಇಲ್ಲಿವೆ. ಬಸವಕಲ್ಯಾಣ, ಭಾಲ್ಕಿ ಹಾಗೂ ಔರಾದ ತಾಲ್ಲೂಕಿನ ಗಡಿಭಾಗದಲ್ಲಿ ಮರಾಠಿ ಮಾಧ್ಯಮದ ಶಾಲೆಗಳಿವೆ. ಬೀದರ ಮತ್ತು ಹುಮನಾಬಾದ ತಾಲ್ಲೂಕಿನಲ್ಲಿ ಕೆಲವು ಗ್ರಾಮಗಳು ಆಂಧ್ರ ಪ್ರದೇಶದ ಗಡಿಭಾಗದ ವ್ಯಾಪ್ತಿಯಲ್ಲಿ ಬರುತ್ತವೆ.

ಬೀದರ ಜಿಲ್ಲೆಯ ಭಾಲ್ಕಿ, ಔರಾದ, ಬಸವಕಲ್ಯಾಣ ತಾಲ್ಲೂಕಗಳಲ್ಲಿ ಜನರು ಆಡುವ ಭಾಷೆ ಮರಾಠಿ ಮಾತೃ ಭಾಷೆಯಾಗಿದ್ದು ಕೆಲವರು ಕನ್ನಡ ಕೆಲವರು ಮರಾಠಿ ಮಾಧ್ಯಮ ಕಲಿಯಲು ಆಸಕ್ತರಾಗಿರುತ್ತಾರೆ. ಕೆಲವು ಗ್ರಾಮಗಳಲ್ಲಿ ಮನೆಯಲ್ಲಿ ಮರಾಠಿ ಭಾಷೆ ಮಾತನಾಡುತ್ತಾರೆ. ಮಕ್ಕಳಿಗೆ ಕಲಿಯಲು ಕನ್ನಡ ಮಾಧ್ಯಮದಲ್ಲಿ ಕಲಿಯಲು ಪ್ರವೇಶ ಮಾಡಿಸಿರುತ್ತಾರೆ. ಬೀದರ ಮತ್ತು ಹುಮನಾಬಾದ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ತೆಲಗು ಮಾತೃ ಭಾಷೆಯಿದ್ದು ಕನ್ನಡ ಮಾಧ್ಯಮದ ಶಾಲೆಗಳಿಗೆ ಪ್ರವೇಶ ಮಾಡಿರುತ್ತಾರೆ.

ಹಿಂದೊಮ್ಮೆ ನಿಜಾಮನ ಆಡಳಿತಕ್ಕೆ ಒಳಪಟ್ಟಿದ್ದರಿಂದ ಉರ್ದು ಭಾಷೆಯ ಪ್ರಭಾವ ಗಡಿಭಾಗದ ಭಾಷೆಗಳಾದ ತೆಲಗು, ಮರಾಠಿ, ಪ್ರಭಾವ ಕುರಿತು. ವಿವರಿಸಲಾಗಿದೆ. ಈ 5 ತಾಲ್ಲೂಕುಗಳಲ್ಲಿ ಒಂದೊಂದು ತಾಲ್ಲೂಕದಿಂದ 5 ಸರ್ಕಾರಿ ಪ್ರಾಥಮಿಕ ಶಾಲೆಗಳು, 5 ಖಾಸಗಿ ಪ್ರಾಥಮಿಕ ಶಾಲೆಗಳು ಆಯ್ಕೆ ಮಾಡಿಕೊಳ್ಳಲಾಗಿದೆ. ಹೀಗಾಗಿ ಒಂದೊಂದು ತಾಲ್ಲೂಕುದಿಂದ 10 ಪ್ರಾಥಮಿಕ ಶಾಲೆಗಳನ್ನು ಗುರುತಿಸಿ ಆಯ್ಕೆ ಮಾಡಿಕೊಳ್ಳಲಾಗಿದೆ. 5 ತಾಲ್ಲೂಕುಗಳು ಸೇರಿ ಒಟ್ಟು 50 ಶಾಲೆಗಳನ್ನು ಜಿಲ್ಲೆಯಲ್ಲಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಜಿಲ್ಲೆಯಲ್ಲಿ ಸರ್ಕಾರಿ, ಖಾಸಗಿ ಪ್ರಾಥಮಿಕ ಶಾಲೆಗಳು ನಡೆಯುತ್ತಿವೆ, ಸರ್ಕಾರಿ ಮತ್ತು ಖಾಸಗಿ ಪ್ರಾಥಮಿಕ ಶಾಲೆಗಳ ಶೈಕ್ಷಣಿಕ ಗುಣಮಟ್ಟ ಮೂಲಭೂತ ಸೌಕರ್ಯ ಶಿಕ್ಷಕರ ಪಾಠ ಬೋಧನೆ, ಮಕ್ಕಳ ಕಲಿಕೆ, ಗ್ರಾಮಸ್ಥರ ಮತ್ತು ಮಕ್ಕಳ ಪಾಲ್ಗೊಳ್ಳುವಿಕೆ, ಎಸ್.ಡಿ.ಎಂ.ಸಿ. ಯವರ ಸಹಕಾರ ಇತ್ಯಾದಿ ವಿಷಯಗಳ ಕುರಿತು ವಿವರಿಸಲಾಗಿದೆ. ಬೀದರ ಜಿಲ್ಲೆಯ ಕುರಿತು ಶ್ರೀ ಎನ್.ಎಚ್.ನಾಗೂರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಲಿಂಗಸೂಗೂರ, ರಾಯಚೂರ ಜಿಲ್ಲೆ ಇವರು ಬರೆದ ಬೀದರಿನ ಐತಿಹಾಸಿಕ ಬೆಡಗು ಮತ್ತು ಬೀದರಿನ ಭೌಗೋಳಿಕ ಬೆಡಗು ಬೀದರ ಜಿಲ್ಲೆಯ ಕುರಿತು ಸಂಪೂರ್ಣ ಚಿತ್ರಣ ನೀಡಿದ್ದಾರೆ.

ಶೈಕ್ಷಣಿಕವಾಗಿಯೂ ಅಂಕಿ ಅಂಶದೊಂದಿಗೆ ಮಾಹಿತಿ ನೀಡಿದ್ದಾರೆ. ಬೀದರ ಜಿಲ್ಲೆಯು ರಾಜ್ಯದ ಉತ್ತರ ಭಾಗದಲ್ಲಿ ಸ್ಥಾಪಿತವಾಗಿದೆ, ಜಿಲ್ಲೆಯ ಕೇಂದ್ರದಿಂದ ವಾಯುವ್ಯಕ್ಕೆ ಮಹಾರಾಷ್ಟ್ರ ರಾಜ್ಯ ಮತ್ತು ನೈರುತ್ಯಕ್ಕೆ

ಆಂಧ್ರ ಪ್ರದೇಶ ರಾಜ್ಯಗಳು ಮತ್ತು ದಕ್ಷಿಣಕ್ಕೆ ಗುಲಬರ್ಗಾ ಜಿಲ್ಲೆಯು ಗಡಿಭಾಗಗಳಾಗಿವೆ. ಜಿಲ್ಲೆಯು ಸಮುದ್ರದ ಪಾತಳಿಯಿಂದ 2330 ಅಡಿಗಳಷ್ಟು ಮೇಲಿದೆ. ಜಿಲ್ಲೆಯ ಸುಮಾರು 5458 ಚ.ಕಿ.ಮೀ. ಭೂ ಪ್ರದೇಶದಲ್ಲಿ 2001 ರ ಜನಗಣತಿಯಂತೆ ಒಟ್ಟು 1502996 ಜನಸಂಖ್ಯೆಯನ್ನು ಹೊಂದಿದೆ. ಶೇ. 19.55 ದರದಲ್ಲಿ ಜನಸಂಖ್ಯೆ ಬೆಳವಣಿಗೆಯಾಗಿದೆ. ಜಿಲ್ಲೆಯಲ್ಲಿ ಲಿಂಗ ಅಂತರದಲ್ಲಿ 1000 ಪುರುಷರಿಗೆ 949 ಸ್ತ್ರೀಯರಿದ್ದಾರೆ.

ಜಿಲ್ಲೆಯಲ್ಲಿ ಸಾಕ್ಷರತಾ ಪ್ರಮಾಣವು ರಾಷ್ಟ್ರ ಮತ್ತು ರಾಜ್ಯದ ಪ್ರಮಾಣಕ್ಕಿಂತಲೂ ಕಡಿಮೆ ಅಂದರೆ ಶೇ 61.98 ಇದೆ. ಔರಾದ, ಬಸವಕಲ್ಯಾಣ, ಭಾಲ್ಕಿ, ಬೀದರ, ಹುಮನಾಬಾದ ಎಂಬ 5 ಕಂದಾಯ ಪ್ರಕಾರ 30 ಹೋಬಳಿಗಳನ್ನು, 900 ಜನ ವಸತಿ ಹಳ್ಳಿಗಳನ್ನು, 14 ಜನವಸತಿ ರಹಿತ ಗ್ರಾಮಗಳನ್ನು, 5 ಪಟ್ಟಣ ಪ್ರದೇಶಗಳನ್ನು ಹೊಂದಿದೆ. ಜಿಲ್ಲೆಯ ವರ್ಷದಾದ್ಯಂತ ಸಮತೋಲಿತ ಒಣ ಮತ್ತು ಮಿಶ್ರಿತ ಹವೆಯನ್ನು ಹೊಂದಿರುತ್ತದೆ. ಜಿಲ್ಲೆಯಲ್ಲಿ ಸರಾಸರಿಯಾಗಿ 902 ಮಿ.ಮೀ. ರಷ್ಟು ಮಳೆಯಾಗುತ್ತದೆ. ಮಾಂಜರಾ ಮತ್ತು ಕಾರಂಜಾ ಜಿಲ್ಲೆಯ ಪ್ರಮುಖ ನದಿಗಳು, ಮಹಾರಾಷ್ಟ್ರ, ಆಂಧ್ರ ಪ್ರದೇಶ ರಾಜ್ಯಗಳ ಮೇರೆಯಲ್ಲಿರುವವರು ಗಡಿ ಭಾಗದಲ್ಲಿ ಉರ್ದು, ತೆಲಗು ಮತ್ತು ಮರಾಠಿ ಭಾಷೆಯನ್ನು ಜಿಲ್ಲೆಯಲ್ಲಿ ಮಾತನಾಡುತ್ತಾರೆ.

ಉಳಿದ ಬಹುಸಂಖ್ಯಾತ ಜನರು ಕನ್ನಡ ಮಾತನಾಡುತ್ತಿದ್ದು, ಅವರ ಮಾತೃ ಭಾಷೆ ಕನ್ನಡವಾಗಿವೆ. ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿ ನಂ. 9 ಹಾದು ಹೋಗಿದೆ. ಸುಮಾರು 90 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿಯಿದೆ. ಜಿಲ್ಲೆಯಲ್ಲಿ ಶೇ. 70 ರಷ್ಟು ಜನ ವ್ಯವಸಾಯವನ್ನು ಅವಲಂಭಿಸಿದ್ದಾರೆ. ಉತ್ತಮ ಫಲವತ್ತಾದ ಕೆಂಪು ಬಣ್ಣ ಮಿಶ್ರಿತ ಭೂಮಿ ಇದೆ. ರಾಜ್ಯದ ಆದಾಯಕ್ಕೆ ಅತಿ ಕಡಿಮೆ ಪ್ರಮಾಣದ ಆದಾಯವನ್ನು ಜಿಲ್ಲೆ ಹೊಂದಿದೆ. ಆಧುನಿಕರಣದ ನೀರಿನ ಸೌಲಭ್ಯವನ್ನು ಬಳಸಿಕೊಂಡು ಉದ್ದು, ಸಜ್ಜೆ, ತೋಗರಿ, ಶೇಂಗಾ, ಕಬ್ಬು, ಸೂರ್ಯಕಾಂತಿ, ಜೋಳ, ಗೋಧಿ ಪ್ರಮುಖ ಬೆಳೆಗಳನ್ನು ಜಿಲ್ಲೆಯಲ್ಲಿ ಬೆಳೆಯುತ್ತಾರೆ.

ಬೀದರ ಜಿಲ್ಲೆಯಲ್ಲಿ ಬಿದರಿ ಕುಸರಿ ಕೆಲಸದಲ್ಲಿ ಜಗತ್ಪ್ರಸಿದ್ಧ ಕಲಾವಿದರು ಇಲ್ಲಿದ್ದಾರೆ. ಬಿದಿರುಗಾರರು, ಬಡಿಗರು, ಅಕ್ಕಸಾಲಿಗರು, ಕಲ್ಲುಕುಟಿಗಾರರು. ಈ ಕಾರ್ಯದವರು ವಂಶ ಪರಂಪರಾಗತವಾಗಿ ತಮ್ಮ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಜಿಲ್ಲೆಯಲ್ಲಿ ಕಾಣುತ್ತೇವೆ. ಜಿಲ್ಲೆಯ ಶೈಕ್ಷಣಿಕ ಅಂಕಿ ಅಂಶಗಳು ಅಂಗನವಾಡಿ ಕೇಂದ್ರಗಳು 1479, ಕಿರಿಯ ಪ್ರಾಥಮಿಕ ಶಾಲೆಗಳು 721, ಹಿರಿಯ ಪ್ರಾಥಮಿಕ ಆಶಲೆಗಳು 1083, ಪ್ರೌಢ ಶಾಲೆಗಳು 295, ಪದವಿಪೂರ್ವ ಕಾಲೇಜುಗಳು 46, ಆಯುರ್ವೇದಿಕ, ಮೇಡಿಕಲ್ ಕಾಲೇಜು 03, ಡೆಂಟಲ್ ಕಾಲೇಜು 03, ಪಶುವೈದ್ಯಕೀಯ ಕಾಲೇಜು 01, ಸ್ನಾತಕೋತ್ತರ ಕಾಲೇಜು 03, ಬಿ.ಪಿ.ಇಡಿ. ಕಾಲೇಜು 03, ಐ.ಟಿ.ಐ. ಕಾಲೇಜುಗಳು 07, ಪಶುವೈದ್ಯಕೀಯ ವಿಶ್ವವಿದ್ಯಾಲಯ 01, ಸರಕಾರಿ ವೈದ್ಯಕೀಯ ಕಾಲೇಜು 01 ಈ ಜಿಲ್ಲೆಯಲ್ಲಿವೆ. ಜಿಲ್ಲೆಯಲ್ಲಿ ಒಟ್ಟು 1639 ಶಾಲೆಗಳಿದ್ದು, ಅದರಲ್ಲಿ 1242 ಶಿಕ್ಷಣ ಇಲಾಖೆಯಿಂದ, 369 ಶಾಲೆಗಳು ಖಾಸಗಿ ಸಂಸ್ಥೆಗಳಿಂದ, 277 ಪ್ರೌಢ ಶಾಲೆಗಳು ಇವೆ.

ಜಿಲ್ಲೆಯಲ್ಲಿ ಸರ್ವಶಿಕ್ಷಣ ಅಭಿಯಾನ ಕಾರ್ಯಕ್ರಮವು ಜಾರಿಯಲ್ಲಿದೆ. ಮಗುವಿನ ಗುಣಮಟ್ಟದ ಕಲಿಕೆಯನ್ನು ಸಾಧಿಸಲು ಎಲ್ಲರಲ್ಲಿ ಜಾಗೃತಿಯನ್ನು ಮೂಡಿಸಿ, ಎಲ್ಲಾ ಮೂಲಭೂತ ಸೌಕರ್ಯಗಳನ್ನು ಪೊರೈಸಿ ಶಿಕ್ಷಕರಿಗೆ ಮತ್ತು ಮಕ್ಕಳಿಗೆ ಶೈಕ್ಷಣಿಕ ಸೌಲಭ್ಯಗಳನ್ನು ನೀಡಿ ಮಕ್ಕಳನ್ನು ವಿವಿಧ ಕಾರ್ಯಕ್ರಮಗಳ ಮೂಲಕ ಶಾಲೆಗೆ ಕರೆತಂದು ಕಲಿಸಲಾಗುತ್ತಿದೆ. ಶಿಕ್ಷಕರ ಸಾಮರ್ಥ್ಯ ಬಲವರ್ಧನೆ ಜನ ಪ್ರತಿನಿಧಿಗಳಿಗೆ

ಎಸ್.ಡಿ.ಎಂ.ಸಿ. ತರಬೇತಿಗಳು ಜನಜಾಗೃತಿ ಕಾರ್ಯಕ್ರಮಗಳು ಶಿಕ್ಷಕರ ಅನುದಾನದಂತಹ ಯೋಜನೆಗಳು ನಿಗದಿತವಾಗಿ ಶಾಲೆಗೆ ಬರಲು ಪ್ರೋತ್ಸಾಹದಾಯಕ ಕಾರ್ಯಕ್ರಮಗಳಿವೆ.

ಕಲಿಕೆಯಲ್ಲಿ ಹಿಂದುಳಿದ ಮಕ್ಕಳಿಗೆ ಪರಿಹಾರ ಬೋಧನೆ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಸಾಮಗ್ರಿ ವಿತರಣೆ, ಗೃಹ ಆಧಾರಿತ ಶಿಕ್ಷಣ, ಹೆಣ್ಣು ಮಕ್ಕಳಿಗಾಗಿ ಎಸ್.ಪಿ.ಜಿ.ಇ.ಎಲ್. ಯೋಜನೆ ಇಂತಹ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಎಸ್.ಎಸ್.ಎಲ್.ಸಿ. ಫಲಿತಾಂಶದಲ್ಲಿ ಗಣನೀಯ ಸಾಧನೆ ಮಾಡಬೇಕಾಗಿದೆ ಹಾಗೂ ಪ್ರಯತ್ನದಲ್ಲಿದೆ. ಅಲ್ಲದೆ ಕೇಂದ್ರ ಸರ್ಕಾರದಿಂದ ಮತ್ತು ರಾಜ್ಯ ಸರ್ಕಾರದಿಂದ ಜಿಲ್ಲೆಗೆ ಶಿಕ್ಷಣಕ್ಕಾಗಿ ಒದಗಿಸಿದ ಹಣಕಾಸು ಹಾಗೂ ಇನ್ನಿತರ ಮೂಲಭೂತ ಸೌಲಭ್ಯಕ್ಕಾಗಿ ಬಿಡುಗಡೆಯಾದ ಬಡ್ಜೇಟ ಕುರಿತು ಎಷ್ಟರ ಮಟ್ಟಿಗೆ ಬಳಕೆಯಾಗಿ ಕೆಲಸ ಆಗಿರುವ ಕುರಿತು ಅಧ್ಯಯನ ಮಾಡಲಾಗಿದೆ. ಮತ್ತು ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಖಾಸಗಿ ಪ್ರಾಥಮಿಕ ಶಾಲೆಗಳಿಗೆ ಇಲಾಖೆಯಿಂದ ನೀಡಿದ ಸೌಲಭ್ಯ ಕುರಿತು ತಾಳೆ ನೋಡುವುದು ಹಾಗೂ ಸರ್ಕಾರಿ ಪ್ರಾಥಮಿಕ ಶಾಲೆಗಳ ಹಾಗೂ ಖಾಸಗಿ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಣದ ಗುಣಮಟ್ಟ ಮತ್ತು ಫಲಿತಾಂಶ ಬಗ್ಗೆಯು ಕಂಡುಕೊಳ್ಳಲಾಗುವುದು.

ಮಕ್ಕಳ ಪ್ರಮಾಣ ರಾಜ್ಯದ ಸರಾಸರಿಗಿಂತ ಹೆಚ್ಚಿರುವುದು ಗಮನಾರ್ಹವೆನಿಸಿದೆ ರಾಜ್ಯದ ಪ್ರಮಾಣ ಶೇ. 13.4 ರಷ್ಟು ಕಡಿಮೆ ಇದೆ. ಶೇ. 14.5 ರಷ್ಟಿದೆ. ಎಂದು ಉಲ್ಲೇಖಿಸಲಾಗಿದೆ.

ಅಕ್ಷರ ಪದ ಮತ್ತು ಇನ್ನು ಹೆಚ್ಚಿನದನ್ನೂ ಓದುವ ಪ್ರಮಾಣ ಶೇ. 70 ರಷ್ಟಿದೆ ಇದು ರಾಜ್ಯದ ಸರಾಸರಿಗಿಂತ ಶೇ. 13.4 ರಷ್ಟು ಕಡಿಮೆ ಇದೆ. 1 ರಿಂದ 9ರ ವರೆಗೆ ಸಂಖ್ಯೆ ಗುರಿತಿಸಬಲ್ಲವರ ಪ್ರಮಾಣ ಶೇ. 68.6 ಇದೆ. ಹಂತ 1ರ ಪಠ್ಯವನ್ನು ಓದಬಲ್ಲವರ ಪ್ರಮಾಣ ಶೇ. 42 ರಷ್ಟಿದೆ. ಇದರ ಪ್ರಮಾಣ ರಾಜ್ಯದಲ್ಲಿ ಶೇ. 57.2 ರಷ್ಟಿದೆ. ಈ ವಿಷಯದಲ್ಲಿ ಜಿಲ್ಲೆಯಲ್ಲಿ ಸಾಕಷ್ಟು ಹಿನ್ನಡೆ ಕಂಡು ಬಂದಿದೆ. ಅಥವಾ ಇದಕ್ಕಿಂತ ಹೆಚ್ಚು ಬಲ್ಲವರ ಪ್ರಮಾಣ ಬರಿ ಶೇ. 28.9 ರಷ್ಟಿದೆ. ರಾಜ್ಯದ ಸರಾಸರಿ ಶೇ. 44.5 ಇದೆ. ಆಂಗ್ಲ ಭಾಷೆ ವಾಕ್ಯಗಳನ್ನು ಓದಬಲ್ಲವರ ಪ್ರಮಾಣ ಕೇವಲ ಶೇ. 4.2 ರಷ್ಟಿದೆ. ಹೀಗೆ ಪ್ರತಿ ಅಂಶಗಳಲ್ಲು ಜಿಲ್ಲೆಯ ಶೇಕಡಾವಾರು ಪ್ರಮಾಣ ರಾಜ್ಯದ ಸರಾಸರಿಗಿಂತ ಕಡಿಮೆ ಇದೆ. 2007ರಲ್ಲಿ ನಡೆಸಲಾದ 'ಅಸರ' ಸಮೀಕ್ಷೆಯ ಜಿಲ್ಲಾವಾರು ವರದಿ ಹಂಚಿಕೆ ಸಭೆ ಶುಕ್ರವಾದ ಬೆಳಿಗ್ಗೆ 11ಕ್ಕೆ ನೌಬಾದ ಸಮೀಪದ ಸೌಹಾರ್ದ ತರಬೇತಿ ಸಂಸ್ಥೆಯಲ್ಲಿ ಈ ವಿಷಯಗಳ ಕುರಿತು ಸಮಗ್ರವಾಗಿ ಚರ್ಚೆ ಮಾಡಿದಾಗ ಪ್ರಗತಿ ಕಂಡು ಬಂದಿದೆ.

ಸರ್ವಶಿಕ್ಷಣ ಅಭಿಯಾನ ಯೋಜನೆ ಅಡಿಯಲ್ಲಿ ಪ್ರಾಥಮಿಕ ಶಿಕ್ಷಣದ ಸರ್ವಾಂಗೀಣ ಅಭಿವೃದ್ದಿಗಾಗಿ ಬೀದರ ಜಿಲ್ಲೆಗೆ 33 ಕೋಟಿ ರೂಪಾಯಿ ಅನುದಾನ ಬಂದಿದೆ ಜಿಲ್ಲಾ ಪಂಚಾಯತ ಬೀದರನಲ್ಲಿ ನಡೆದ ಸಭೆಯಲ್ಲಿ ಜಿಲ್ಲಾ ಉಸ್ತುವಾರಿ ಸಚಿವರಾದ ರೇವುನಾಯಕ ಬೆಳಮಗಿ ಅವರು ಜಿಲ್ಲಾ ಪಂಚಾಯತ ಸಭೆಯಲ್ಲಿ ಸರ್ವ ಶಿಕ್ಷಣ ಅಭಿಯಾನ ಯೋಜನೆಯ ನಾನಾ ಕಾಮಗಾರಿ ಪ್ರಗತಿ ನಡೆಸಿದರು. ಜಿಲ್ಲೆಯ ಎಸ್.ಎಸ್.ಎಲ್.ಸಿ. ಫಲಿತಾಂಶ ರಾಜ್ಯದಲ್ಲಿ ಕೊನೆಯ ಸ್ಥಾನದಲ್ಲಿದೆ. ಇದನ್ನು ಸುಧಾರಿಸಲು ಕಾರ್ಯಸೂಚಿ ಅಳವಡಿಸಿದಾಗ ಶೈಕ್ಷಣಿಕ ಗುಣಮಟ್ಟ ಸುಧಾರಿಸಲು ಸಾಧ್ಯ ಈ ನಿಟ್ಟಿನಲ್ಲಿ ಸರ್ವ ಶಿಕ್ಷಣ ಅಭಿಯಾನ ಅನುದಾನ ಸಮರ್ಪಕ ಬಳಕೆ ಮಾಡಿಕೊಳ್ಳಲು ಹೇಳಿದರು.

ಮಕ್ಕಳಿಗೆ ಉತ್ತಮ ಶಿಕ್ಷಣ ಕಲ್ಪಿಸುವ ದಿಸೆಯಲ್ಲಿ ಸರ್ವಶಿಕ್ಷಣ ಅಭಿಯಾನ ಅಡಿ ಸಾಕಷ್ಟು ಅನುದಾನ ಒದಗಿಸಲಾಗಿತ್ತಿದೆ ಎಂದರು. ಶಿಕ್ಷಣ ಇಲಾಖೆ ಅಧಿಕಾರಿಗಳು ಜನಪ್ರತಿನಿಧಿಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಈ ಯೋಜನೆ ಅನುಷ್ಠಾನಗೊಳಿಸಬೇಕು ಎಂದು ಸೂಚಿಸಿದರು.

ಹೊಸ ಶಾಲೆ ಆರಂಭಿಸಲು ಸ್ಥಳ ನಿಗದಿ ಮಾಡುವ ಸಂದರ್ಭದಲ್ಲಿ ಸೂಕ್ತ ಮಾನದಂಡ ಅನುಸರಿಸಬೇಕು ಶಾಲಾ ಕಟ್ಟಡಗಳನ್ನು ನಿಗದಿತ ಅವಧಿಯೊಳಗೆ ಉತ್ತಮ ಗುಣಮಟ್ಟದೊಂದಿಗೆ ನಿರ್ಮಿಸಬೇಕು ಕಳಪೆ ಕಾಮಗಾರಿ ಕೈಗೊಳ್ಳುವವರ ವಿರುದ್ಧ ಕ್ರಮ ಕೈಗೊಳ್ಳಲಾಗುವುದು ಎಂದು ಎಚ್ಚರಿಸಿದರು. ಮಾನ್ಯ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ ಸರ್ವ ಶಿಕ್ಷಣ ಅಭಿಯಾನ ಯೋಜನೆ ಅಡಿಯಲ್ಲಿ ಜಿಲ್ಲೆಗೆ ಈ ಸಾಲಿನಲ್ಲಿ ಅಂದರೆ 2007-08ನೇ ಸಾಲಿನಲ್ಲಿ 33.18 ಕೋಟಿ ರೂಪಾಯಿ ಅನುದಾನ ಮಂಜೂರು ಆಗಿದೆ. ಈ ಪೈಕಿ ಇಲ್ಲಿವರೆಗೆ 8 ಕೋಟಿ ರೂಪಾಯಿ ಖರ್ಚಾಗಿದೆ ಪ್ರಸಕ್ತ ಸಾಲಿನಲ್ಲಿ 20 ಹೊಸ ಶಾಲೆಗಳು ಆರಂಭವಾಗಿವೆ, 74 ಶಾಲೆಗೆ 5 ರಿಂದ 6ನೇ ತರಗತಿಗೆ ಮೇಲ್ದರ್ಜೆಗೇರಿಸಲು ಮಂಜುರಾತಿ ದೊರೆತಿದೆ ಎಂದು ವಿವರಿಸಿದರು. ಈ ಜಿಲ್ಲೆಯಲ್ಲಿ 12 ತಿಂಗಳ ಸೇತುಬಂಧ, ಚಿಣ್ಣರ ಅಂಗಳ ಕಾರ್ಯಕ್ರಮದಡಿ 1238 ಮಕ್ಕಳಿಗೆ 123 ಕೋಟಿ ರೂಪಾಯಿ ನಿಗದಿಪಡಿಸಲಾಗಿದೆ. ಈವರೆಗೆ 61 ಲಕ್ಷ ರೂಪಾಯಿ ವೆಚ್ಚ ಮಾಡಲಾಗಿದೆ ಎಂದರು. 12 ತಿಂಗಳ ಸೇತುಬಂಧ ಕಾರ್ಯಕ್ರಮಕ್ಕೆ 867 ಮಕ್ಕಳಿಗೆ 26 ಲಕ್ಷ ರೂಪಾಯಿ ನಿಗದಿ ಮಾಡಿರುವುದಾಗಿ ಹೇಳಿದರು. 13 ಲಕ್ಷ ರೂಪಾಯಿ ಖರ್ಚು ಮಾಡಿರುತ್ತಾರೆ. ಟೆಂಟ ಶಾಲೆಯಲ್ಲಿ 350 ಮಕ್ಕಳ ಗುರಿ ಇರಿಸಲಾಗಿದೆ. 10 ಲಕ್ಷ ರೂಪಾಯಿ ವೆಚ್ಚ ಮಾಡಲಾಗಿದೆ. ಬೇಸಿಗೆಯಲ್ಲಿ ಪರಿಹಾರ ಬೊಧನೆ ಕಾರ್ಯಕ್ರಮಕ್ಕಾಗಿ ಕಲಿಕೆಯಲ್ಲಿ ಹಿಂದಿರುವ ಮಕ್ಕಳಿಗೆ 1750 ಮಕ್ಕಳಿಗೆ 8 ಲಕ್ಷ ರೂಪಾಯಿ ನಿಗದಿಪಡಿಸಿದ್ದು, 4 ಲಕ್ಷ ರೂಪಾಯಿ ಖರ್ಚಾಗಿದೆ. ಶಾಲೆಯಿಂದ ಹೊರಗುಳಿದ ಮಕ್ಕಳಿಗೆ ಶೈಕ್ಷಣಿಕ ಕಾರ್ಯಕ್ರಮಕ್ಕೆ ಬಿಡುಗಡೆಯಾದ 1.80 ಕೋಟಿ ರೂಪಾಯಿ ಇದರಲ್ಲಿ 68 ಲಕ್ಷ ರೂಪಾಯಿ ಖರ್ಚು ಮಾಡಲಾಗಿದೆ.

ಪರಿಹಾರ ಬೋಧನೆಯಡಿ 14148 ಮಕ್ಕಳಿಗೆ 70 ಲಕ್ಷ ರೂಪಾಯಿ ಬಿಡುಗಡೆ ಮಾಡಲಾಗಿದೆ. 1 ರಿಂದ 8ನೇ ತರಗತಿಯ 20671 ಮಕ್ಕಳಿಗೆ ಉಚಿತ ಸ್ಟೇಷನರಿ ಮತ್ತು ಪಠ್ಯ ಪುಸ್ತಕಕ್ಕೆ 18 ಲಕ್ಷ ರೂಪಾಯಿ ನಿಗದಿ ಪಡಿಸಲಾಗಿದೆ. ವಿಕಲಚೇತನ 3971 ಮಕ್ಕಳ ಕಾರ್ಯಕ್ರಮಗಳಿಗೆ 47 ಲಕ್ಷ ರೂಪಾಯಿ ಬಿಡುಗಡೆಯಾಗಿದೆ. 20 ಶಾಲಾ ಕಟ್ಟಡ ನಿರ್ಮಿಸಲು 1.80 ಕೋಟಿ ರೂಪಾಯಿ ಕಲ್ಪಿಸಲಾಗಿದೆ. 223 ಹೆಚ್ಚುವರಿ ಶಾಲಾ ಕೊಠಡಿ ನಿರ್ಮಾಣಕ್ಕೆ 8.47 ಕೋಟಿ ರೂಪಾಯಿ ಮಂಜೂರು ಮಾಡಿರುತ್ತಾರೆ. ಪ್ರಸಕ್ತ ಸಾಲಿನಲ್ಲಿ ನಿರ್ಮಾಣ ಕಾಮಗಾರಿಗಾಗಿ 10.72 ಕೋಟಿ ರೂಪಾಯಿ ವೆಚ್ಚವಾಗಿದೆ. ನಿರ್ವಹಣೆ ಮತ್ತು ದುರಸ್ತಿಗಾಗಿ 1.37 ಕೋಟಿ ರೂಪಾಯಿ ನಿಗದಿಪಡಿಸಿರುತ್ತಾರೆ.

2007-08ನೇ ಸಾಲಿನಲ್ಲಿ ಸರ್ವಶಿಕ್ಷಣದ ಅಡಿ ಜಿಲ್ಲೆಗೆ 21.67 ಕೋಟಿ ರೂಪಾಯಿ ಮಂಜೂರಾಗಿದ್ದು, 20.90 ಕೋಟಿ ರೂಪಾಯಿ ವೆಚ್ಚ ಮಾಡಲಾಗಿದೆ. ಎಂದು ಶಿಕ್ಷಣ ಇಲಾಖೆ ಬೀದರ ಅವರು ಸಭೆಯಲ್ಲಿ ವಿವರಿಸಿದರು.

ಮಾರ್ಚ 2009ರ ಮಾಹೇಯ ಟೀಚರಮಾಸ ಪತ್ರಿಕೆಯಲ್ಲಿ ಪ್ರಕಟಿಸಿದ ಪ್ರಕಾರ ಸರ್ವಶಿಕ್ಷಣ ಅಭಿಯಾನ ಯೋಜನೆಯು ಜಿಲ್ಲೆಗೆ ಒಂದು ವರದಾನ ಈ ಕುರಿತು ಪ್ರಕಟಿಸಿದರು. ಬೀದರ ಜಿಲ್ಲೆಯಲ್ಲಿ

ಡಿ.ಪಿ.ಇ.ಪಿ. ಯೋಜನೆ ಮುಗಿಯುತ್ತಲೆ, ಕೇಂದ್ರ ಮತ್ತು ರಾಜ್ಯ ಸರಕಾರಗಳ ಸಹಯೋಗದಿಂದ ಸರ್ವ ಶಿಕ್ಷಣ ಅಭಿಯಾನ ಯೋಜನೆ 2002 ರಿಂದ ಪ್ರಾರಂಭಿಸಲಾಗಿದ್ದು, ಎಲ್ಲಾ ಮಕ್ಕಳನ್ನು ಶಾಲಾ ವ್ಯಾಪ್ತಿಗೆ ತರುವ ನಿಟ್ಟಿನಲ್ಲಿ ತುಂಬಾ ಫಲಪ್ರದವಾಗಿ ಹೊರಹೊಮ್ಮಿದೆ. ಇದರ ಪ್ರಮುಖ ಗುರಿ 6 ರಿಂದ 14 ವರ್ಷದ ಎಲ್ಲಾ ಮಕ್ಕಳನ್ನು ಶಾಲೆಗೆ ಸೇರಿಸುವುದು ಹಾಗೂ ಎಲ್ಲಾ ಮಕ್ಕಳನ್ನು ಶಾಲೆಯಲ್ಲಿ ಉಳಿಸುವುದು ನಂತರ ಆ ಮಕ್ಕಳಿಗೆ ಗುಣಾತ್ಮಕ ಶಿಕ್ಷಣ ನೀಡುವುದಾಗಿದೆ ಸದರಿ ಕಾರ್ಯಕ್ರಮದಿಂದ 2003 ರ ವರೆಗೆ ಎಲ್ಲರಿಗೂ 8 ವರ್ಷದ ಶಿಕ್ಷಣ ನೀಡುವ ಗುರಿಯಿದೆ. ಜಿಲ್ಲೆಯಲ್ಲಿ ಮಕ್ಕಳ ಗಣತಿ ಸಮೀಕ್ಷೆಯ ಆಧಾರದ ಮೇಲೆ ವರ್ಷದಿಂದ ವರ್ಷಕ್ಕೆ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿದ್ದು, ಜಿಲ್ಲೆಗೆ ಇದೊಂದು ಆಶಾದಾಯಕ ಪ್ರಗತಿಯ ಮೈಲುಗಲ್ಲು ನಿರ್ಮಿಸಿದಂತಾಗಿದೆ. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಅಲ್ಪ ಸಂಖ್ಯಾತರ ಮಕ್ಕಳು ವಿಶೇಷವಾಗಿ ಹೆಣ್ಣು ಮಕ್ಕಳು ಅಂಗವಿಕಲ ಮಕ್ಕಳಿಗಾಗಿ ವಿವಿಧ ಕಾರ್ಯಕ್ರಮಗಳಿಂದ ಈ ಎಲ್ಲಾ ಮಕ್ಕಳಿಗೆ ವಿಶೇಷ ಸೌಲಭ್ಯ ನೀಡಿರುವುದರಿಂದ ಇದೊಂದು ಸಂಜೀವಿನಿಯಾಗಿದೆ.

ಸರ್ವ ಶಿಕ್ಷಣ ಅಭಿಯಾನದ ಮಧ್ಯವರ್ತನೆಗಳ ನಿಬಂಧನೆಗಳ ವಿವರ ಈ ಕೆಳಗಿನಂತಿವೆ.

1. ಪ್ರತಿ 40 ಮಕ್ಕಳಿಗೆ ಒಬ್ಬ ಶಿಕ್ಷಕ ಒಂದು ಪ್ರಾಥಮಿಕ ಶಾಲೆಯಲ್ಲಿ ಕನಿಷ್ಠ ಇಬ್ಬರು ಶಿಕ್ಷಕರು.
2. 1ಕಿ.ಮೀ. ವ್ಯಾಪ್ತಿಯೊಳಗೆ ಒಂದು ಶಾಲಾ ಸೌಲಭ್ಯ ಶಾಲೆ ಇಲ್ಲದಿರುವ ಜನವಸತಿ ಪ್ರದೇಶಗಳಲ್ಲಿ ಇ.ಜಿ.ಎಸ್.ಪೂರಕ ಶಾಲೆಗಳು.
3. ಮಕ್ಕಳ ಸಂಖ್ಯೆ ಆಧರಿಸಿ ಹಿರಿಯ ಪ್ರಾಥಮಿಕ ಶಾಲೆ.
4. ತರಗತಿಗನುಗುಣವಾಗಿ ಕೊಠಡಿಗಳು ಹಾಗೂ ಮುಖ್ಯ ಅಧ್ಯಾಪಕರ ಕೊಠಡಿ.
5. ಎಲ್ಲಾ ಪ್ರಾಥಮಿಕ ಶಾಳಾ ಮಕ್ಕಳಿಗೆ ಉಚಿತ ಪಠ್ಯ ಪುಸ್ತಕ ವಿತರಣೆ.
6. ಶಾಲಾ ಕಟ್ಟಡಗಳ ನಿರ್ವಹಣೆ ಮತ್ತು ದುರಸ್ತಿ.
7. ಶಾಲಾ ಕಟ್ಟಡಗಳು, ವರ್ಗಕೊಠಡಿಗಳು, ಸಿ.ಆರ್.ಸಿ/ಬಿ.ಆರ್.ಸಿ. ಕಟ್ಟಡ ನಿರ್ಮಾಣ.
8. ಶಿಕ್ಷಣ ಖಾತರಿ ಯೋಜನೆಯ ಅಡಿಯಲ್ಲಿನ ಕೇಂದ್ರ ಔಪಚಾರಿಕ ಶಾಲೆಗಳಿಗಾಗಿ ಉನ್ನತಿಕರಿಸುವುದು.
9. ಹಿರಿಯ ಪ್ರಾಥಮಿಕ ಶಾಲೆಗಳಿಗೆ ಬೊಧನೆ ಮತ್ತು ಕಲಿಕಾ ಸಾಮಗ್ರಿ.
10. ಶಾಲಾ ಅನುದಾನ:
11. ಶಿಕ್ಷಕರ ಅನುದಾನ:
12. ಶಿಕ್ಷಕರ ತರಬೇತಿ:

13. ಶೈಕ್ಷಣಿಕ ತರಬೇತಿ:

14. ಶೈಕ್ಷಣಿಕ ರಾಜ್ಯ ನಿರ್ವಹಣೆ ಆಧಾರಿತ ಮತ್ತು ತರಬೇತಿ ಸಂಸ್ಥೆ.

15. ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ತಪಾಸಣೆ ಸಲಕರಣೆ ವಿತರಣೆ ಹಾಗೂ ಹಣಕಾಸಿನ ಸೌಲಭ್ಯ.

16. ಸಂಶೋಧನೆ ಮೌಲ್ಯಮಾಪನ ಮೇಲುಸ್ತುವಾರಿಯಲ್ಲಿ ಮೇಲ್ವಿಚಾರಣೆ.

17. ಜಿಲ್ಲಾ ನಿರ್ವಹಣೆ.

18. ಹೆಣ್ಣು ಮಕ್ಕಳ ಶಿಕ್ಷಣ ಶೈಶಾವಸ್ಥೆಯಲ್ಲಿ ಆರೈಕೆ ಶಿಕ್ಷಣ ಪ.ಜಾ/ಪ.ಪಂಗಡ ಹೆಣ್ಣು ಮಕ್ಕಳಿಗೆ ವಿಶೇಷ ಸೌಲಭ್ಯ ಹಿರಿಯ ಪ್ರಾಥಮಿಕ ಶಾಲೆಗಳಿಗೆ ಕಂಪ್ಯೂಟರನ ಸೌಲಭ್ಯ.

19. ಕ್ಷೇತ್ರ ಸಂಪನ್ಮೂಲ ಕೇಂದ್ರಗಳು ಸಮೂಹ ಸಂಪನ್ಮೂಲ ಕೇಂದ್ರಗಳು.

20. ಶಾಲೆಯಿಂದ ಹೊರಗುಳಿದ ಮಕ್ಕಳಿಗಾಗಿ ಸಂಬಂಧಿಸಿದಂತೆ ವಿವಿಧ ಮಧ್ಯವರ್ತನೆಗಳು.

21. ಕುಟುಂಬ ಸಮೀಕ್ಷೆ ಸಮುದಾಯವನ್ನು ಸಜ್ಜುಗೊಳಿಸುವುದು ಎಲ್ಲಾ ಹಂತದ ತರಬೇತಿಗಳು ನಡೆಸಲಾಗುವುದು.

ಕರ್ನಾಟಕದಲ್ಲಿ ಬರುವ ಜಿಲ್ಲೆಗಳಲ್ಲಿ ಬೀದರ ಜಿಲ್ಲೆಯು ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಯೆಂದು ಹಣೆ ಪಟ್ಟಿ ಕಟ್ಟಲಾಗಿದೆ. ಅದರಲ್ಲಿ ಸರಕಾರಿ ಶಾಲೆಗಳಿಗಿಂತ ಖಾಸಗಿ ಶಾಲೆಗಳಲ್ಲಿನ ಶಿಕ್ಷಣದ ಗುಣಮಟ್ಟ ಹಾಗೂ ಕಲಿಕೆ ದೃಷ್ಟಿಯಿಂದ ಉತ್ತಮ ವ್ಯವಸ್ಥೆ ಇರುತ್ತದೆಂಬ ಪಾಲಕರ ಮನೋಭಾವನೆಯಾಗಿದೆ. ಆದರೆ ಶಿಕ್ಷಣದ ಮಹತ್ವ ಅರಿತವರು ವಿರಳ. ಶಿಕ್ಷಣ ಇಲಾಖೆಯು ಸರಕಾರಿ ಶಾಲೆಗಳಿಗೆ ಖಾಸಗಿ ಶಾಲೆಗಳಿಗಿಂತ ಹೆಚ್ಚಿನ ಸೌಲಭ್ಯ ಒದಗಿಸುತ್ತದೆ. ಶಿಕ್ಷಕರಿಗೆ ವಿವಿಧ ರೀತಿಯ ತರಬೇತಿ ನೀಡುತ್ತಲಿದೆ. ಮಕ್ಕಳಿಗೆ ಹೆಚ್ಚಿನ ಸೌಲಭ್ಯ ಕಲ್ಪಿಸುತ್ತಿದೆ. ಆದರೂ ಸರ್ಕಾರಿ ಪ್ರಾಥಮಿಕ ಶಾಲೆಗಳು ಖಾಸಗಿ ಶಾಲೆಗಳಿಗಿಂತ ಉತ್ತಮವಾಗಿದೆ. ಎಂಬ ಅಭಿಪ್ರಾಯ ನನ್ನದಾಗಿದೆ.

ಬೀದರ ಜಿಲ್ಲೆಗೆ 1997 ರಿಂದ 2003 ರವರೆಗೆ ಡಿ.ಪಿ.ಇ.ಪಿ. ಯೋಜನೆ ಜಾರಿಗೆ ಬಂದು ಅನೇಕ ಕಾರ್ಯಕ್ರಮಗಳು ಬಹಳ ಯಶಸ್ವಿಯಾಗಿ ಜರುಗಿತು. ನಂತರ ಸರ್ವ ಶಿಕ್ಷಣ ಅಭಿಯಾನ ಯೋಜನೆ ಜಾರಿಗೆ ಬಂದಿತ್ತು. ಈ ಯೋಜನೆ ಅಡಿಯಲ್ಲಿ ನಲಿಕಲಿಯು ಬಹಳ ಉತ್ತಮ ಕಲಿಕಗೆ ಪೂರಕವಾದ ಆಯಾಮವಾಗಿದೆ. ಶಿಕ್ಷಕರು ಚಟುವಟಿಕೆ ಮೂಲಕ ಹೊಸ ವಿಧಾನದಿಂದ ಬೊಧನೆ ಮಾಡುತ್ತಿರುವುದರಿಂದ ಮಕ್ಕಳು ನಲಿಯುತ ಕಲಿಯುತ್ತಿದ್ದಾರೆ. ದಿನಾಂಕ: 13ನೇ ಸೆಪ್ಟೆಂಬರ 2010 ರಂದು ವಿಜಯ ಕರ್ನಾಟಕ ಕನ್ನಡ ದಿನ ಪತ್ರಿಕೆಯಲ್ಲಿ ನಲಿ ಕಲಿ ಕುರಿತು ಈ ರೀತಿ ಬರೆದಿರುತ್ತಾರೆ. ಶ್ರೀ ಗಣಪತ ಶಿರೂರ ಅವರ ಭಾವನೆ ವ್ಯಕ್ತಪಡಿಸುತ್ತಾರೆ. ಪ್ರಾಥಮಿಕ ಶಿಕ್ಷಣವನ್ನು ಬೇರು ಸಹಿತ ಗಟ್ಟಿಗೊಳಿಸಿ ಕಲಿಯುವಿಕೆಯನ್ನು ಆನಂದಮಯ ಮತ್ತು ಆಕರ್ಷಣೀಯವನ್ನಾಗಿಸಲು ಸಾಕಷ್ಟು ಚಿಂತನ ಮಂಥನ ನಡೆಸಿ ಕಳೆದ ಸಾಲಿನಿಂದಲೆ ಹೊಸ ಪದ್ಧತಿ ನಲಿಕಲಿ ರಾಜ್ಯದ್ಯಂತ 1 ಮತ್ತು 2ನೇ ತರಗತಿಗಳಿಗೆ ಅಳವಡಿಸಲಾಯಿತು. ಹಾಗೆಯೇ ಬೀದರದಲ್ಲಿ

ಪ್ರಾರಂಭವಾದಾಗ ಒಂದಿಷ್ಟು ಟೀಕೆ ಆಕ್ರೋಶಕ್ಕೆ ಕಾರಣವಾಗಿದ್ದ ನಲಿ-ಕಲಿ ಪದ್ಧತಿ ನಿಧಾನವಾಗಿ ಶಿಕ್ಷಕ, ವಿದ್ಯಾರ್ಥಿ ಹಾಗೂ ಸಮುದಾಯವನ್ನು ಆವರಿಸಿಕೊಂಡಿತ್ತು. ವೈಯಕ್ತಿಕ ಗಮನ ನೀಡಿ, ಮಗುವಿನ ಕಲಿಕೆಗೆ ಪೂರಕವಾತಾವರಣ ಸೃಷ್ಟಿಸಿ, ನಿರ್ದಿಷ್ಟ ಸಾಮರ್ಥ್ಯವನ್ನು ಮಗುವಿನಲ್ಲಿ ಬೆಳೆಸುವುದು ಈ ಯೋಜನೆಯ ಉದ್ದೇಶ ಶಿಕ್ಷಣ ಇಲಾಖೆಯ ಮಹತ್ವಾಂಕ್ಷಿ ಯೋಜನೆಯನ್ನು ಜಾರಿಗೊಳಿಸಲು ಶಿಕ್ಷಕರು ಶಕ್ತಿ ಮೀರಿ ಪ್ರಯತ್ನಿಸಿ, ನಂತರದಲ್ಲಿ ಶಿಕ್ಷಕರ ವಿದ್ಯಾರ್ಥಿಗಳ ಪ್ರಯೋಗ ಮೆಚ್ಚುಗೆ ವ್ಯಕ್ತಪಡಿಸಿರುವುದು ಸಹ ಸಂತೋಷವೆ.

ನಲಿಕಲಿ ಪದ್ಧತಿಯ ಸಾಧಕ ಬಾಧಕಗಳು ಪೂರ್ಣವಾಗಿ ಮೌಲ್ಯಮಾಪನಕ್ಕೆ ಒಳಪಡುವ ಮೊದಲೇ 3ನೇ ತರಗತಿಗೂ ಇದನ್ನು ಅತುರಾತುರವಾಗಿ ತುರುಕಿಸಿಡುವುದು ವಿದ್ಯಾರ್ಥಿ ಶಿಕ್ಷಕರಲ್ಲಿ ಗೊಂದಲ ಮೂಡಿಸಿದೆ. 1-2ನೇ ತರಗತಿಯೊಂದಿಗೆ 3ನೇ ತರಗತಿಯನ್ನು ಸೇರಿಸಿ, ಇಪ್ಪತ್ತು ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕರಂತೆ ಈ ಬೋಧನಾ ಕ್ರಮ ಪ್ರಸ್ತುತ ಜಾರಿಯಲ್ಲಿದೆ. ಈ ಯೋಜನೆಯನ್ನು ರಚನಾತ್ಮಕವಾಗಿ ಪ್ರಾಮಾಣಿಕವಾಗಿ ಜಾರಿಗೊಳಿಸುವಲ್ಲಿ ಶಿಕ್ಷಕರು ಅನೇಕ ಸಮಸ್ಯಗಳನ್ನು ಎದುರಿಸುತ್ತಿದ್ದಾರೆ. ಹಾಗೂ ತಮ್ಮ ಮಿತಿಯಲ್ಲಿ ಪರಿಹರಿಸಲಾದ ಸಮಸ್ಯೆಗಳಿಂದ ದೈಹಿಕ ಮತ್ತು ಮಾನಸಿಕ ಒತ್ತಡಕ್ಕೆ ಒಳಗಾಗುತ್ತಿದ್ದಾರೆ.

ನಲಿಕಲಿ ಪದ್ಧತಿಯಲ್ಲಿ ಒಂದು ಅವಧಿ ಎಂದರೆ 80 ನಿಮಿಷಗಳಿದ್ದು ಮೊದಲ 10 ನಿಮಿಷ ಪೂರ್ವಸಿದ್ಧತಾ ಹಂತ ನಂತರ ವಿದ್ಯಾರ್ಥಿಗಳು ತಮ್ಮ ತಟ್ಟೆಗಳಲ್ಲಿ ಕುಳಿತು ಅವರಿಂದ ಕಲಿಕಾ ಹಂತಕ್ಕೆ ತಕ್ಕಂತೆ ಬೇರೆ, ಬೇರೆ ಕಲಿಕಾ ಚಟುವಟಿಕೆಗಳಲ್ಲಿ ತೊಡಗುತ್ತಾರೆ ಆಗ ಶಿಕ್ಷಕರು ಅವರಿಗೇ ಅಗತ್ಯ ಮಾರ್ಗದರ್ಶನ ನೀಡಬೇಕಾಗುತ್ತದೆ. ಬೇರೆ ಬೇರೆ ವಿದ್ಯಾರ್ಥಿಗಳು ಬೇರೆ ಬೇರೆ ಹಂತದಲ್ಲಿರುವುದರಿಂದ ಪ್ರತಿಯೊಬ್ಬರಿಗೂ ಅಥವಾ ಇಬ್ಬರು ಮೂವರ ಒಂದು ಗುಂಪಿಗೆ ಶಿಕ್ಷಕರು ಪ್ರತೇಕವಾಗಿ ಮಾರ್ಗದರ್ಶನ ಮಾಡಬೇಕಾಗುತ್ತದೆ.

ಹೀಗಾಗಿ 20 ವಿದ್ಯಾರ್ಥಿಗಳಿದ್ದರೆ ಒಬ್ಬ ವಿದ್ಯಾರ್ಥಿ 3-4 ನಿಮಿಷಗಳಲ್ಲಿ ಅವಶ್ಯಕ ಮಾರ್ಗದರ್ಶನ ಪಡೆಯಬೇಕಾಗುತ್ತದೆ ಇವರಲ್ಲಿ 1, 2, 3 ತರಗತಿಯ ವಿದ್ಯಾರ್ಥಿಗಳು ಇರುವುದರಿಂದ ಸೂಕ್ತ ಮಾರ್ಗದರ್ಶನ ಮಾಡಲು ಸಮಯದ ಅಭಾವ ಕಾಡುತ್ತದೆ. ವಿದ್ಯಾರ್ಥಿಗಳಿಗೆ ಕಲಿಕಾಂಶ ಕಠಿಣವಾದಾಗ ಅಥವಾ ಅದರಲ್ಲಿ ಸಂಶಯ ಬಂದಾಗ ಶಿಕ್ಷಕರನ್ನು ಸಂಪರ್ಕಿಸಿದರೂ ಅದನ್ನು ನಿವಾರಿಸಲು ಶಿಕ್ಷಕರಿಗೆ ಸಮಯವೇ ಇರುವುದಿಲ್ಲ. ಕೊನೆಯ 10 ನಿಮಿಷದಲ್ಲಿ ಕಲಿಕೆಯ ದೃಢೀಕರಣ, ಅಲ್ಪ ಮತ್ತು ಸಮರ್ಪಕ ಕಲಿಕೆ ತೋರ್ಪಡಿಸಿದರೆ, ಮಗು ಅದೇ ಕಲಿಕಾಂಶವನ್ನು ಮುಂದಿನ ದಿನ ಎತ್ತಿಕೊಳ್ಳಬೇಕಾಗುತ್ತದೆ. ನಿಗದಿತ ಸಾಮರ್ಥ್ಯಗಳಿಸಿದ ವಿದ್ಯಾರ್ಥಿಗಳ ಮುಂದಿನ ಕಲಿಕಾಂಶಕ್ಕೆ ಕಾಲಿಡುತ್ತಾರೆ. ಹೀಗೆ ಬೇರೆ ಬೇರೆ ವಿದ್ಯಾರ್ಥಿಗಳು ಅವರ ಸಾಮರ್ಥ್ಯಕ್ಕೆ ತಕ್ಕಂತೆ ಬೇರೆ ಬೇರೆ ಕಲಕಾ ಹಂತದಲ್ಲಿರುತ್ತಾರೆ.

ಒಂದು ಮತ್ತು ಎರಡನೇ ತರಗತಿಯ ಕಲಿಕಾಂಶಗಳನ್ನು ಚಿಕ್ಕವು, ಉದಾ: ಅಕ್ಷರಗಳು, ಸರಳ ಪದಗಳು, ಅಂಕಿಗಳು, ದೊಡ್ಡ ಅಂಕಿ, ಚಿಕ್ಕ ಅಂಕಿ, ಇತ್ಯಾದಿ ಇವುಗಳನ್ನು ವಿದ್ಯಾರ್ಥಿಗಳಿಗೆ ಹೇಗೋ ಸಮಯವನ್ನು ಹೊಂದಿಸಿಕೊಂಡು ತಿಳಿಸಿ ಹೇಳಬಹುದು. ಆದರೆ 3ನೇ ತರಗತಿಗೆ 2 ಅಥವಾ 3 ಪುಟಗಳ ಪಾಠವನ್ನು ಪ್ರತಿಯೊಬ್ಬರಿಗೂ ತಿಳಿಸಿ ಹೇಳಲು ಸಾಧ್ಯವಿಲ್ಲ. ಹೇಳಬೇಕೆಂಬ ಮನಸ್ಸು ಇದ್ದರೂ ಸಮಯವಿಲ್ಲ ವಿದ್ಯಾರ್ಥಿಗಳೆ ಓದಿ, ಅರ್ಥೈಸಿ, ಸೂಕ್ತ ನಿರ್ದೇಶನದಂತೆ ಚಟುವಟಿಕೆ ಮಾಡಲು ಶಕ್ತರೇ? ಎಂಬುದು ಚರ್ಚಾರ್ಹ ವಿಷಯ.

ಅಲ್ಲದೇ ಬೇರೆ ಬೇರೆ 3 ತರಗತಿಗಳ ಬೇರೆ ಬೇರೆ ಹಂತದಲ್ಲಿರುವ ವಿದ್ಯಾರ್ಥಿಗಳನ್ನು ಒಟ್ಟಿಗೆ ಕೂಡಿಸಿ ಕಲಿಕೆಯಲ್ಲಿ ತೊಡಗಿಸುವುದು ಎಷ್ಟು ಪರಿಣಾಮಯಕಾರಿ? ಎಷ್ಟು ಸಮಂಜಸ? ಹಿರಿಯ ಅಥವಾ ಈಗಾಗಲೇ ಸಾಮರ್ಥ್ಯಗಳಿಸಿದ ವಿದ್ಯಾರ್ಥಿಗಳಿಂದ ನಿರ್ಧಾರ ಕಲಿಕೆಯ ವಿದ್ರ್ಯಾಗಳಿಗೆ ಸಹಾಯ ಮಾಡುವಂತೆ ತಿಳಿಸಿದರೂ ಕಂಪ್ಯೂಟರಯುಗದ ವಿದ್ಯಾರ್ಥಿ ಮಿತ್ರರು ಕೇಳಿಬಿಡುತ್ತಾರೆ. ಹೀಗೆ 1–2 ಮತ್ತು 3ನೇ ತರಗತಿಯ ವಿದ್ಯಾರ್ಥಿಗಳನ್ನು ಒಂದಾಗಿ ಕಲಿಕೆಗೆ ಒಳಪಡಿಸಿದರೆ ಕಲಿಕಾಂಶದ ಅರೆಬರೆ ಜ್ಞಾನವನ್ನು ಅವರು ಪಡೆಯುವದೂ ಕಷ್ಟ. ನಲಿಕಲಿ ಕ್ರಮದಲ್ಲಿ ಒಂದು ದಿನದ 40 ನಿಮಿಷದ 8 ಅವಧಿಗಳಲ್ಲಿ ಮೊದಲ ಎರಡು ಅವಧಿ (80 ನಿಮಿಷ) ಒಂದು ವಿಷಯ (ಕನ್ನಡ ಭಾಷೆ) ನಂತರದ ಎರಡು ಅವಧಿ (80 ನಿಮಿಷ) ಗಣಿತ ಹಾಗೂ ಅಪರಾಹ್ನದ ಕೊನೆಯ ಅವಧಿ (80 ನಿಮಿಷ) ಪರಿಸರ ಅಧ್ಯಯನ ಮತ್ತು ಉಳಿದ ಎರಡು ಅವಧಿಗಳಲ್ಲಿ ಒಂದು ಅವಧಿ ರೇಡಿಯೋ ಪಾಠ ಹಾಗೂ ಇನ್ನೊಂದು ಅವಧಿ ಮೂರು ತರಗತಿಗಳಿಗೆ ಒಟ್ಟಾಗಿ ಇಂಗ್ಲೀಷ ಕಲಿಕೆ ಮೂರನೇ ತರಗತಿಯನ್ನು ನಲಿಕಲಿಕೆಗೆ ಒಳಪಡಿಸಿರುವುದರಿಂದ ಹೆಚ್ಚಿನ ಶಾಲೆಗಳಲ್ಲಿ 1, 2 ಮತ್ತು 3ನೇ ತರಗತಿಯ ವಿದ್ಯಾರ್ಥಿಗಳ ಸಂಖ್ಯೆ 20ಕ್ಕಿಂತ ಹೆಚ್ಚಾಗಿದೆ. 40 ವಿದ್ಯಾರ್ಥಿಗಳ ತನಕ ಹೊಸ ನಲಿ–ಕಲಿ ವಿಭಾಗ ಮಾಡುವುದಿಲ್ಲ. ಮಾಡುವ ಮನಸ್ಸಿದ್ದರೂ ಶಿಕ್ಷಕರ ಕೊರತೆ ಹೀಗಾಗಿ 30–35 ವಿದ್ಯಾರ್ಥಿಗಳನ್ನು ಒಂದೇ ನಲಿ–ಕಲಿ ಕೋಣೆಯಲ್ಲಿರುವ ಅನಿವಾರ್ಯತೆಗೆ ಶಿಕ್ಷಕರು ಸಿಲುಕಿದ್ದಾರೆ. ಹಳೆಯ ಪದ್ಧತಿಯಲ್ಲಾದರೆ 30–35 ವಿದ್ಯಾರ್ಥಿಗಳಿದ್ದರೂ ಕಷ್ಟಪಟ್ಟ ಕಲಿಕಾಂಶವನ್ನು ವಿದ್ಯಾರ್ಥಿಗಳಿಗೆ ಹೇಳಬಹುದಾಗಿತ್ತು. ಇದರೊಂದಿಗೆ ಶಿಕ್ಷಕರು 4–5 ಮತ್ತು 6–7 ನೇ ತರಗತಿಯ ಕೆಲ ವಿಷಯವನ್ನು ಬೋಧಿಸುವುದು ಅನಿವಾರ್ಯ.

ಪ್ರಾಥಮಿಕ ಶಾಲಾ ಶಿಕ್ಷಕರ ಸಂಕಷ್ಟ ಕೊನೆಗೊಳ್ಳುವುದಿಲ್ಲ. ಶಾಲೆಯ ಎಲ್ಲಾ ಆಡಳಿತಾತ್ಮಕ ವಿಷಯಗಳನ್ನು ಅವರೇ ನಿಭಾಯಿಸಿಕೊಳ್ಳಬೇಕು, ಪ್ರಾಥಮಿಕ ಶಾಲಾ ಶಿಕ್ಷಕರು ಏಕಪಾತ್ರಾಭಿನಯನದಲ್ಲಿ ನಿಪುಣರಾಗಲೇಬೇಕು. ಏಕೆಂದರೆ ಅವರು ಶಿಕ್ಷಕರು ಮಾತ್ರವಲ್ಲ ಗುಮಾಸ್ಥರು, ಕಲಿಕಾ ಸಾಮಗ್ರಿ ತಯಾರಕರು, ಬಡಗಿಗಳು, ಬಣ್ಣ ಬಳಿಯುವವರು ಬಿಸಿ ಊಟ ತಯಾರಕರು ಮೇಲ್ವಿಚಾರಕರು, ಎಸ್.ಡಿ.ಎಂ.ಸಿ. ಯವರ ಗಣತಿ ಕಾರ್ಯಕರ್ತರು ಇತ್ಯಾದಿ. ಹಾಗಾದರೆ ಇಂದು ಶಿಕ್ಷಕರು ಹೇಗೆ ಕರ್ತವ್ಯ ನಿರ್ವಹಿಸುತ್ತಿದ್ದಾರೆ, ಎಂಬುದೊಂದು ಪ್ರಶ್ನೆ, ಇಲಾಖೆಯ ಅಸಂಬದ್ಧ ಕ್ರಮಗಳನ್ನು ಖಂಡಿಸಲಾಗಿದೆ. ಅಧಿಕಾರಿಗಳು ಕೆಂಗಣ್ಣಿಗೆ ಬೆದರಿ, ಬೇಸತ್ತು ಹೋದ ಪ್ರಮಾಣಿಕ ಶಿಕ್ಷಕರ, ತನ್ನಿಂದಾದಷ್ಟು ಕಲಿಕಾ ಕೆಸಲ ನಿರ್ವಹಿಸಿ ದಾಖಲೆ ನಿರ್ವಹಣೆ ಕ್ರೋಢಿಕರಣಕ್ಕೆ ಅಮೂಲ್ಯ ಸಮಯವನ್ನು ಕೂಡ ಇದರಿಂದಾಗಿ ಸೊರಗುತ್ತಿರುವುದು.

ಕನ್ನಡ ಮಾಧ್ಯಮ ಶಾಲೆಗಳು ಅಲ್ಲಿರುವ ಮುಗ್ದ ಕಂದಮ್ಮಗಳು ಈ ಶಾಲೆಗಳು ಸೊರಗಲಿ ಕಂದಮ್ಮಗಳು ಕೊರಗಲಿ ಇಲಾಖಾ ಅಧಿಕಾರಿಗಳಿಗೆ ಹಣವಂತರಿಗೆ ಹಾಗೂ ಹೆಚ್ಚಿನ ಶಿಕ್ಷಕರಿಗೆ ಬೇಸರವಿಲ್ಲ. ಏಕೆಂದರೆ ಅವರ ಮಕ್ಕಳಾರು ಈ ಶಾಲೆಗಳಲ್ಲಿ ಓದುತ್ತಿಲ್ಲ. ಅವರೆಲ್ಲ ಇಂಗ್ಲೀಷ ಮಾಧ್ಯಮ ಶಾಲೆಗಳಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ರಾಜ್ಯಮಟ್ಟದ ಇಲಾಖಾ ಅಧಿಕಾರಿಗಳು, ಶಿಕ್ಷಣ ತಜ್ಞರು ಸಂಶೋಧಕರು, ನಿರ್ದೇಶಕರು, ತಳಮಟ್ಟದ ಸಮಸ್ಯೆಗಳನ್ನು ಹವಾನಿಯಂತ್ರಿತ ಕೊಠಡಿಗಳಲ್ಲಿ ಚರ್ಚೆ ಹಾಗೂ ಡಾಕ್ಟರೇಟ್ ಮತ್ತು ಎಂ.ಇಡಿ. ಪದವಿಗಳಲ್ಲಿ ಮುಂಡಿಸಿದ ವಿವೇಚನಾರಹಿತ ಸಂಶೋಧನಾ ವಿಷಯಗಳನ್ನೆ ವೇದವಾಕ್ಯ ಎಂಬಂತೆ ಸರಕಾರಕ್ಕೆ ತಿಳಿಸಿ, ಹೊಸ ಹೊಸ ಹತ್ತಾರು ದಾಖಲೆಗಳ ಸೃಷ್ಟಿಗೆ ಹಾಗೂ ಕಾರ್ಯಕ್ರಮ ತಂದಿರುತ್ತಾರೆ. ಇದರಂತೆಯೇ ಕೋಟ್ಯಾಂತರ ರೂಪಾಯಿಗಳ ಯೋಜನೆ ಸಿದ್ಧಪಡಿಸುತ್ತಾರೆ. ಕೇಂದ್ರ ಸ್ಥಾನದಿಂದ ಕೆಳಹಂತಕ್ಕೆ ಬರುವಾಗ ಪ್ರತಿಯೊಬ್ಬರು ಸಮಸ್ಯೆಯನ್ನು ಕೆಳಗಿನ ಅಧಿಕಾರಿಗಳಿಗೆ ವರ್ಗಾಯಿಸುತ್ತಾರೆ. ಕೊನೆಗೆ ಸಮಸ್ಯೆಯ

ಮೂಟೆಯನ್ನು ಹೊರಬೇಕಾದವನು ಬಡಪಾಯಿ ಶಿಕ್ಷಕ, ಶಿಕ್ಷಕರ ಬೋಧನಾ ಸಮಸ್ಯೆಗಳನ್ನು ಇಲಾಖೆಗೆ ತಲುಪಿಸಿ ಶಿಕ್ಷಕರ ಮೇಲಿನ ಒತ್ತಡ ಕಡಿಮೆ ಮಾಡಿ ನೆಮ್ಮದಿಯಿಂದ ಬೋಧನೆಯಲ್ಲಿ ತೊಡಗಿಸಿಕೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸಬೇಕಾದ ಶಿಕ್ಷಕ ಸಂಘಟನೆಗಳು ಆ ಮಟ್ಟಕ್ಕೆ ಏರದೇ ತಮ್ಮದೇ ಲೋಕದಲ್ಲಿ ಮುಳುಗಿದೆ. ವೇತನ ತುಟ್ಟಿಭತ್ಯ ಮುಂತಾದವುಗಳೊಂದಿಗೆ ಒತ್ತಡರಹಿತ ಮಾನಸಿಕ ನೆಮ್ಮದಿಯ ಪರಿಣಾಮಕಾರಿ ಗುಣಾತ್ಮಕ ಬೋಧನೆಗೆ ಅವಶ್ಯ ಎಂಬುದನ್ನು ಸಂಘಟನೆಗಳು ಮನಗಾಣಬೇಕಿದೆ ಮತ್ತು ಈ ನಿಟ್ಟಿನಲ್ಲಿ ಮುಂದಿಡಬೇಕಿದೆ.

ಶಿಕ್ಷಣ ಇಲಾಖೆಯ ಎಡಬಿಡಂಗಿತನಕ್ಕೆ ಶಿಕ್ಷಕನೆ ಬಲಿಪಶು ಎಂಬುದನ್ನು 3ನೇ ತರಗತಿಗೆ ನಲಿಕಲಿ ಯೋಜನೆ ಜಾರಿ ಮಾಡಿರುವುದು ಪುನ ಃ ಸಾಬೀತುಪಡಿಸಿದೆ. ಶಾಲೆ ಪ್ರಾರಂಭವಾಗಿ 3 ತಿಂಗಳು ಕಳೆದರೂ ಅವಶ್ಯ ಕಲಿಕಾ ಸಾಮಗ್ರಿಗಳು ಬಂದಿಲ್ಲ. ಪಠ್ಯಪುಸ್ತಕಗಳೂ ಬಂದಿರುವುದಿಲ್ಲ ಆಗಷ್ಟ ತಿಂಗಳಿನಲ್ಲಿ ಕೆಲವು ಛಾಯಾಪ್ರತಿ ಹಾಳೆಗಳನ್ನು ನೀಡಿ ಕಲಿಕೆ ಆರಂಭಿಸಲಾಗಿದೆ. ಸೆಪ್ಟೆಂಬರ ತಿಂಗಳಲ್ಲಿ ಕಲಿಕಾ ಸಾಮಗ್ರಿ ಹಾಗೂ ಪಠ್ಯ ಪುಸ್ತಕ ಸರಬರಾಜು ಆಗಲಿದೆ ಎಂಬುದು ಅಧಿಕಾರಿಗಳ ಅಂಬೋಣ.

ಈಗಾಗಲೇ ಮೂರು ತಿಂಗಳು ನಡೆಸಿದ ಪಾಠಗಳು ಸೆಪ್ಟೆಂಬರನಲ್ಲಿ ಆ ಕಾರ್ಡುಗಳ ಹಾಗೂ ಪಠ್ಯ ಪುಸ್ತಕ ಬಂದ ನಂತರ ಅದರಲ್ಲಿ ಬರೆಸುವ ಅಥವಾ ಚಟುವಟಿಕೆ ನಡೆಸುವ ಹೊಣೆ ನಲಿ ಕಲಿ ಶಿಕ್ಷಕರದ್ದೆ ಆಗಿರುತ್ತದೆ. ಅಂದರೆ 10 ತಿಂಗಳ ಪಠ್ಯ ಕ್ರಮ 6 ತಿಂಗಳಲ್ಲೆ ಪೂರೈಸಬೇಕು. ಹೇಗಿದೆ ಇಲಾಖೆಯ ಕಾರ್ಯವೈಖರಿ? 3ನೇ ತರಗತಿಗೆ ನಲಿ-ಕಲಿ ವಿಸ್ತರಿಸುವಾಗ ತಕ್ಕ ಏರ್ಪಾಡುಗಳನ್ನು ಏಕೆ ಮಾಡಿಕೊಳ್ಳಲಿಲ್ಲ? ಬಹುವರ್ಗ ಹಾಗೂ ಬಹುಹಂತ ಕಲಿಕೆಯ ನಲಿ-ಕಲಿ ಎಂಬ ವೈಜ್ಞಾನಿಕ ಕ್ರಮದ ಅವೈಜ್ಞಾನಿಕ ಅನುಷ್ಠಾನ ಹನುಮಂತನ ಬಾಲದಂತೆ ಬೆಳೆಯುವ ನಿರುಪಯುಕ್ತ ದಾಖಲೆಗಳ ನಿರ್ವಹಣೆ, ಸಹ ಪಠ್ಯ ಚಟುವಟಿಕೆ, ಗಣತಿ ಚುನಾವಣೆ, ಬಿಸಿಯೂಟ ಮುಂತಾದ ವೈವಿಧ್ಯಮಯ ಕೆಲಸಗಳನ್ನೆಲ್ಲ ತಲೆಮೇಲೆ ಹೊತ್ತುಕೊಂಡು ಪ್ರಯಾಸದಿಂದ ನಡೆದಾಡುತ್ತ ಕೆಲವೊಮ್ಮೆ ಗೊಣಗುತ್ತಾ ಇನ್ನೊಮ್ಮೆ ಸ್ಥಿತ ಪ್ರಜ್ಞನಂತೆ ನಗುಮುಖದಿಂದ ಕೆಲಸ ಕೈಗೊಳ್ಳುವ ಇವರನ್ನು ಶಿಕ್ಷಣ ಇಲಾಖೆ ಏನೆಂದು ಪರಿಗಣಿಸುತ್ತದೆಯೇ ತಿಳಿಯದು ಹೀಗಾಗಿ ನೈಜ ಶಿಕ್ಷಣದ ಅಂಶಗಳನ್ನು ಕಂಡುಕೊಳ್ಳಲು ಈ ಮೇಲಿನ ಶೀರ್ಷಿಕೆ ಅಡಿಯಲ್ಲಿ ನಾನು ಸಂಶೋಧನೆ ಮಾಡಿ, ಸಮಗ್ರವಾದ ಮಾಹಿತಿಯನ್ನು ಸಂಗ್ರಹಿಸಿ ಬರೆದಿರುತ್ತೇನೆ.

ಅಧ್ಯಯ-1

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಕುರಿತು ವಿವರಿಸಲಾಗಿದೆ: ಶಿಕ್ಷಣದ ಬಗ್ಗೆ ಅನೇಕ ಸಾಹಿತಿಗಳು ಲೇಖಕರು, ವಿದ್ವಾಂಸರು, ಶಿಕ್ಷಣದ ಮಹತ್ವ ಕುರಿತು ವಿವರಿಸಿದ್ದಾರೆ. ಬುನಾದಿಯಾಗಿದ್ದ ಪ್ರಾಥಮಿಕ ಹಂತದಲ್ಲಿ ಶಿಕ್ಷಣದ ಕುರಿತು ಸೌಲಭ್ಯ ಮಕ್ಕಳ ದಾಖಲಾತಿ ಮತ್ತು ಹಾಜರಾತಿ ಗುಣಾತ್ಮಕ ಕಲಿಕೆ ಶಿಕ್ಷಕರ ಪಾಠ ಬೊಧನೆ ಪಾಠೋಪಕರಣಗಳ ಬಳಕೆ ಚಟುವಟಿಕೆ ಮುಖಾಂತರ ಪಾಠ ಬೋಧನೆ, ಶಿಕ್ಷಕರ ಸಮಯ ಪಾಲನೆ ಇತ್ಯಾದಿಗಳ ಕುರಿತು ಆಳವಾಗಿ ಅಧ್ಯಯನ ಮಾಡಿದಾಗ ಹಾಗೂ ಮೂಲಭೂತ ಸೌಲಭ್ಯಗಳು ಒದಗಿಸುವಲ್ಲ ಮಕ್ಕಳ ಕಲಿಕೆಯಲ್ಲಿ ಸರಕಾರಿ ಶಾಲೆಗಳಿಗೂ ಮತ್ತು ಖಾಸಗಿ ಶಾಲೆಗಳಿಗೂ ವ್ಯಾತ್ಯಾಸದ ಮನೋಭಾವನೆ ಪಾಲಕರಲ್ಲಿ ಸಾರ್ವಜನಿಕರಲ್ಲಿ ಕಂಡು ಬರುತ್ತಿರುವುದರಿಂದ, ಇಲ್ಲಿ ಸರ್ಕಾರ ಒದಗಿಸುವ ಸೌಲಭ್ಯ ಹಾಗೂ ಖಾಸಗಿಯವರು ಒದಗಿಸುತ್ತಿರುವ ಸೌಕರ್ಯ ಕುರಿತು ಇವೆರಡರಲ್ಲಿನ ಆಶಯಗಳನ್ನು ಕಂಡುಕೊಳ್ಳುವುದು ಮತ್ತು ನೈಜ ಅಂಶವನ್ನು ಹೊರಹೊಮ್ಮಿಸುವುದು ಇವುಗಳೆಲ್ಲ ಈ ಅಧ್ಯಯನಲ್ಲಿದೆ.

ಅಧ್ಯಯನದ ವ್ಯಾಪ್ತಿ ಬೀದರ ಜಿಲ್ಲೆಯಲ್ಲಿ 5 ತಾಲ್ಲೂಕುಗಳಿದ್ದು ಒಂದೊಂದು ತಾಲ್ಲೂಕದಲ್ಲಿ ಸರ್ಕಾರಿ, ಖಾಸಗಿ, ಖಾಸಗಿ ಅನುದಾನರಹಿತ ಪ್ರಾಥಮಿಕ ಶಾಲೆಗಳು ನಡೆಯುತ್ತಲಿವೆ. ಕನ್ನಡ, ಮರಾಠಿ, ಉರ್ದು, ಇಂಗ್ಲೀಷ ಮಾಧ್ಯಮದ ಪ್ರಾಥಮಿಕ ಶಾಲೆಗಳು ನಡೆಯುತ್ತಲಿವೆ. ಒಂದೊಂದು ತಾಲ್ಲೂಕುದಿಂದ 10 ಪ್ರಾಥಮಿಕ ಶಾಲೆಗಳು ಆಯ್ಕೆ ಮಾಡಿಕೊಳ್ಳಲಾಗಿದೆ. 5 ಸರ್ಕಾರಿ ಪ್ರಾಥಮಿಕ ಶಾಲೆಗಳು, 5 ಖಾಸಗಿ ಅನುದಾನಿತ ಹಾಗೂ ಅನುದಾನರಹಿತ ಪ್ರಾಥಮಿಕ ಶಾಲೆಗಳನ್ನು ಆಯ್ಕೆ ಮಾಡಿಕೊಂಡು ಜಿಲ್ಲೆಯ 5 ತಾಲ್ಲೂಕದ ಒಟ್ಟು 50 ಪ್ರಾಥಮಿಕ ಶಾಲೆಗಳನ್ನು ಆಯ್ಕೆಮಾಡಿಕೊಂಡು ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಇದ್ದ ಮೂಲಭೂತ ಸೌಲಭ್ಯ, ಶಿಕ್ಷಕರ ಹಾಜರಾತಿ, ಮಕ್ಕಳ ಹಾಜರಾತಿ ಮತ್ತು ಕಲಿಕೆ ಶಿಕ್ಷಕರ ಪಾಠ ಬೋಧನೆ ಇತ್ಯಾದಿ ಮಾಹಿತಿಯು ಸಂಗ್ರಹಿಸಲಾಗಿದೆ. ಅಲ್ಲದೆ ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆಗಳಲ್ಲಿನ ಮೂಲಭೂತ ಸೌಕರ್ಯ, ಶಿಕ್ಷಕರ ಪಾಠ ಬೋಧನೆ, ಮಕ್ಕಳ ದಾಖಲಾತಿ ಮತ್ತು ಹಾಜರಾತಿ, ಮಕ್ಕಳ ಕಲಿಕೆ ಶಿಸ್ತು ಇತ್ಯಾದಿ ಮಾಹಿತಿಯು ಸಂಗ್ರಹಿಸಲಾಗಿದೆ.

ಅನುದಾನ ರಹಿತ ಪ್ರಾಥಮಿಕ ಶಾಲೆಗಳಿದ್ದು, ಇಲ್ಲಿ ಕೆಲಸ ಮಾಡುವ ಶಿಕ್ಷಕರಿಗೆ ಆಡಳಿತ ಮಂಡಳಿಯವರು ವೇತನ ಕೊಡುತ್ತಾರೆ. ಇಲ್ಲಿನ ಶಿಕ್ಷಕರ ಪಾಠಬೊಧನೆ ಮಕ್ಕಳ ಕಲಿಕೆ ಮೂಲಭೂತ ಸೌಲಭ್ಯ ಇತ್ಯಾದಿ ಮಾಹಿತಿಯು ಸಂಗ್ರಹಿಸಿ ಬರೆಯಲಾಗಿದೆ. ಕೆಲವೊಂದು ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆಗಳಲ್ಲಿ ಸ್ವಂತ ನಿವೇಶನ ಶಾಲೆಗಾಗಿ ಸ್ವಂತ ಕಟ್ಟಡವಿಲ್ಲದೆ ಸುಮಾರು ವರ್ಷದಿಂದ ಬಾಡಿಗೆ ಕಟ್ಟಡದಲ್ಲಿ ಶಾಲೆ ನಡೆಯುತ್ತಲಿವೆ. ಅಲ್ಲದೆ ಶಿಕ್ಷಣದ ಗುಣಮಟ್ಟ ಮಕ್ಕಳ ಕಲಿಕೆ ಸಾಧಾರಣವಾಗಿದೆ, ಅನುದಾನ ರಹಿತ ಪ್ರಾಥಮಿಕ ಶಾಲೆಗಳು ನಡೆಯುತ್ತಲಿದ್ದು, ಗುಣಮಟ್ಟ ಶಿಕ್ಷಣ ಮಕ್ಕಳ ಕಲಿಕೆ ಉತ್ತಮವಾಗಿದೆ.

ಸರ್ಕಾರಿ ಪ್ರಾಥಮಿಕ ಶಾಲೆಗೆ ಸರ್ಕಾರದಿಂದ ಎಲ್ಲಾ ಸೌಕರ್ಯವಿದ್ದ ಕೆಲವು ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟ ಮಕ್ಕಳ ಕಲಿಕೆ ಸಾಧಾರಣವಾಗಿದೆ. ವಿಶೇಷವಾಗಿ ಗ್ರಾಮೀಣ ಭಾಗದಲ್ಲಿನ ಶಾಲೆಗಳಲ್ಲಿ ಅನಕ್ಷರಸ್ಥ

ಪಾಲಕರು ಆರ್ಥಿಕವಾಗಿ ಬಡವರಾಗಿರುವುದರಿಂದ ತಮ್ಮ ಮಕ್ಕಳಿಗೆ ಶಾಲೆಗೆ ಕಳುಹಿಸದೆ ತಮ್ಮ ವೈಯಕ್ತಿಕ ಕೆಲಸಕ್ಕಾಗಿ ಬಳಸಿಕೊಳ್ಳುತ್ತಾರೆ. ಅಲ್ಲದೆ ಪಾಲಕರಲ್ಲಿ ಮಕ್ಕಳಿಗೆ ಶಾಲೆಗೆ ಕಳುಹಿಸಬೇಕೆಂಬ ಆಸಕ್ತಿ ಇದ್ದಂತೆ ಕಂಡು ಬರುವುದಿಲ್ಲ. ಕೆಲವು ಪಾಲಕರ ಭಾವನೆ ಹೇಗಿದೆ ಎಂದರೆ ಶಿಕ್ಷಣ ಕಲಿತ ಮೇಲೆ ಸರ್ಕಾರಿ ಹುದ್ದೆ ಸಿಗದೆ ಇದ್ದಾಗ ನಿರುದ್ಯೋಗಿಯಾಗುತ್ತಾರೆ. ಬೇರೆ ಯಾವುದೇ ಕೆಲಸ ಮಾಡಲು ಆಸಕ್ತರಾಗಿರುವುದಿಲ್ಲವೆಂಬ ಭಾವನೆ ಪಾಲಕರಲ್ಲಿದೆ.

**ಅಧ್ಯಯನದ ಆಶಯ:-**

ಭಾರತ ದೇಶದ ಕೆಲವು ರಾಜ್ಯಗಳು ಶೈಕ್ಷಣೀಕವಾಗಿ ಹಿಂದುಳಿದಂತೆ ಕಂಡು ಬರುತ್ತದೆ. ಕರ್ನಾಟಕವು ಶೈಕ್ಷಣಿಕವಾಗಿ ಎಷ್ಟು ಮುಂದುವರೆಯಬೇಕೊ ಅಷ್ಟು ಮುಂದುವರೆಯಲು ಸಾಧ್ಯವಾಗಿಲ್ಲ, ಅದಕ್ಕೆ ಅನೇಕ ಕಾರಣಗಳಿವೆ. ವಿಶೇಷವಾಗಿ ಬೀದರ ಜಿಲ್ಲೆಯಲ್ಲಿಯ ಜನರ ಅಸ್ತವ್ಯಸ್ತ ಜೀವನವೇ ಕಾರಣ, ಅಂದಿನ ಧಾರ್ಮಿಕ ಕ್ಷೇತ್ರದಲ್ಲಿ ಬಲವಾಗಿನಿಂತ ಅಂಧಶ್ರದ್ಧೆ, ಮೂಢನಂಬಿಕೆ, ವರ್ಣ ವ್ಯವಸ್ಥೆ, ರಾಜಕೀಯ ರಂಗದಲ್ಲಿ ಅರಾಜಕತೆ, ಅಶಾಂತಿ, ಆರ್ಥಿಕ ಅಸಮಾನತೆ ಸಮಾಜದಲ್ಲಿಯ ಧನಿಕ-ದರಿದ್ರ, ಹೆಣ್ಣು-ಗಂಡು, ಮೇಲು-ಕೀಳು, ಶೇಷ್ಟ-ಕನಿಷ್ಠ ಎಂಬ ಭೇಧಭಾವ, ನೈತಿಕ ಅಧಃ ಪತನ ಹೀಗೆ ಇತ್ಯಾದಿ ರೀತಿಯಿಂದ ಶಿಕ್ಷಣದಲ್ಲಿ ಹಿಂದಿದ್ದು, ಅನಕ್ಷರಸ್ಥರ ಸಂಖ್ಯೆಯು ಹೆಚ್ಚಾಗಿತ್ತು. ಈ ಮೇಲಿನ ಕಾರಣಗಳಲ್ಲದೆ ಇನ್ನೂ ಅನೇಕ ಕಾರಣಗಳಿಂದ ಶಿಕ್ಷಣದ ಗುಣಮಟ್ಟ ಕುಸಿಯುತ್ತ ಬಂದಿದೆ.

ಹೆತ್ತ ಮಕ್ಕಳನ್ನು ಶಾಲೆಗೆ ಸೇರಿಸುತ್ತಾರೆ, ಆದರೆ ಶಾಲೆಯಲ್ಲಿ ಏನು ನಡೆಯುತ್ತಿದೆ ಎಂಬುದನ್ನು ತಿಳಿದಿರುವದಿಲ್ಲ. ವಿದ್ಯಾಭ್ಯಾಸ ಮಹತ್ವವೇನು ಎಂಬುದನ್ನು ತಿಳಿದುಕೊಳ್ಳುವುದಿಲ್ಲ. ಅಲ್ಲದೇ ಅನೇಕ ಶಿಕ್ಷಕರಿಗೆ ಶಿಕ್ಷಣದ ಘಟಕಗಳಲ್ಲಿ ಬೊಧನೆ ಹಾಗೂ ಆಕರ್ಷಣೆಯ ಬೋಧನೆಯ ಆಯಾಮಗಳ ಹಂತಗೊತ್ತಿರದವರಿದ್ದಾರೆ. ಒಂದು ನಿರ್ದಿಷ್ಟ ಹಂತದ ಶಿಕ್ಷಣದ ಮಹತ್ವ ತಿಳಿಯದಿದ್ದರೆ, ಸಾಗಬೇಕಾದ ಮಾರ್ಗ, ಅನುಸರಿಸಬೇಖಾದ ವಿಧಾನಗಳು ಅರಿವಿಗೆ ಬರುವುದಿಲ್ಲ, ಇದರಿಂದಾಗಿ ಎಲ್ಲಾ ಕ್ರಿಯೆಗಳು ಹಳೆ ತಪ್ಪಿದ ರೈಲಿನಂತಾಗುತ್ತವೆ. ಹೀಗಾಗಿ ಶಿಕ್ಷಣದ ಗುರಿಗಳನ್ನು ತಿಳಿಯುವದು ಮುಖ್ಯವೆನಿಸುತ್ತದೆ.

ಪ್ರಾಥಮಿಕ ಶಿಕ್ಷಣದ ಮಹತ್ವವನ್ನು ಬೇರೆ ಬೇರೆ ಬಗೆಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಒಂದು ದೃಷ್ಟಿಕೋನದ ಪ್ರಕಾರ ಈ ಹಂತದಲ್ಲಿ ಮಕ್ಕಳಿಗೆ ಮೂಲ ಶಿಕ್ಷಣದ ಕೌಶಲ್ಯಗಳನ್ನು ಅಂದರೆ ಓದು ಬರಹ, ಗಣಿತದ ಮೂಲಕ್ರಿಯೆ ಕಲಿಸಬೇಕು.

ಏಕೆಂದರೆ ಮುಂದಿನ ಎಲ್ಲಾ ಬರಹಗಳಿಗೆ ಅಧ್ಯಯನಗಳಿಗೆ ಈ ಕೌಶಲ್ಯಗಳೇ ಮೂಲ ತಳಹದಿಯಾಗಿದೆ. ಅಡಿಪಾಯ ಭದ್ರವಾಗದಿದ್ದರೆ ಮುಂದೆ ಕಟ್ಟುವ ಸೌಧ ಕುಸಿದು ಹೋಗಬಹುದು ಎಳೆಯ ಮಕ್ಕಳಿಗೆ ಮೂಲ ಕೌಶಲ್ಯಗಳನ್ನು ಕಲಿಸುವುದೆ ಪ್ರಾಥಮಿಕ ಶಿಕ್ಷಣದ ಪ್ರಧಾನ ಉದ್ದೇಶ ಇದರೊಂದಿಗೆ ನಾಗರಿಕತೆ ಪ್ರಜಾಪ್ರಭುತ್ವ ಸ್ವಯಂ ನಾಯಕರು, ಹೀಗಾಗಿ ಬಾಲ್ಯದಿಂದಲೇ ಈ ಕೆಲವು ಸಾಮಾಜಿಕ ಕೌಶಲ್ಯಗಳನ್ನು ಕಾರ್ಯಗತ ಮಾಡಿಕೊಳ್ಳುವುದು ಉಚಿತವೆನಿಸುತ್ತದೆ.

ಒಂದು ದೇಶದಲ್ಲಿ ಹುಟ್ಟಿ ಬೆಳೆದ ಮೇಲೆ ಸಾಂಸ್ಕೃತಿಕ ಪರಂಪರೆ, ಆಚಾರ, ವಿಚಾರ, ಜೀವನ ಕ್ರಮಗಳ ಬಗ್ಗೆ ಪ್ರೀತಿ ಅಭಿಮಾನಗಳು ತುಂಬಬೇಕು. ಅವರಲ್ಲಿ ಆರೋಗ್ಯಕರ ಮನೋಭಾವನೆಗಳು ಆಸಕ್ತಿಗಳು, ಮೂಡಬೇಕು ಆದರ್ಶದ ಹಂಬಲ ಹೇಳಬೇಕು ಹೀಗಾಗಿ ಪ್ರಾಥಮಿಕ ಹಂತದಲ್ಲೇ ಮೂಲ ಶಿಕ್ಷಣವನ್ನು ಒದಗಿಸಬೇಕು.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈಗಿನ ಶಿಕ್ಷಣ ಪದ್ಧತಿಯಲ್ಲಿ ಸಾಕಷ್ಟು ಸುಧಾರಣೆಯಾಗಿದ್ದು, ಸರಕಾರದ ವಿವಿಧ ಯೋಜನೆಗಳಿಂದ ಶಿಕ್ಷಣದಲ್ಲಿ ಸುಧಾರಣೆಯಾಗಿ ಪ್ರಾಥಮಿಕ ಶಾಲೆಗಳಲ್ಲಿನ ಮಕ್ಕಳಿಗೆ ಶಿಕ್ಷಕರಿಗೆ ಸೌಲಭ್ಯ ಒದಗಿಸಿವೆ. ಆದರೂ ಸಹ ಸರಕಾರಿ ಪ್ರಾಥಮಿಕ ಶಾಲೆಗಳಿಗೆ, ಖಾಸಗಿ ಪ್ರಾಥಮಿಕ ಶಾಲೆಗಳಿಗೆ ವ್ಯತ್ಯಾಸವೆಂಬ ಮನೋಭಾವನೆ ಪಾಲಕರಲ್ಲಿ ಸಾರ್ವಜನಿಕರಲ್ಲಿರುವುದರ ಮೂಲ ಉದ್ದೇಶ ಕಂಡುಕೊಳ್ಳುವುದು ಹಾಗೂ ಈ ಎರಡರಲ್ಲಿನ ವ್ಯವಸ್ಥೆಯ ಕುರಿತು ಹಾಗೂ ಪರ್ಯಾಯವ್ಯವಸ್ಥೆ ಕಂಡುಕೊಂಡು ಬಹಿರಂಗ ಪಡಿಸುವುದೇ ಈ ಅಧ್ಯಾಯನದ ಮೂಲ ಉದ್ದೇಶವಾಗಿದೆ.

ಈ ಅಧ್ಯಯನದ ವ್ಯಾಪ್ತಿ ಕೇವಲ ಬೀದರ ಜಿಲ್ಲೆಯ 5 ತಾಲ್ಲೂಕುಗಳಿಗೆ ಸೀಮಿತವಾಗಿದೆ. ಪ್ರತಿಯೊಂದು ತಾಲ್ಲೂಕಿನಲ್ಲಿ ಶೈಕ್ಷಣಿಕ ಗುಣಮಟ್ಟ, ಮೂಲಭೂತ ಸೌಲಭ್ಯ ಜೊತೆಗೆ ಆಯಾ ತಾಲ್ಲೂಕಿನ ಪ್ರಮುಖ ಅಂಶಗಳ ಕುರಿತು, ಸಮಗ್ರವಾದ ಮಾಹಿತಿಯು ಸಂಗ್ರಹಿಸಲಾಗಿದೆ. ಪ್ರಥಮವಾಗಿ ಬೀದರ ತಾಲ್ಲೂಕು ಆಯ್ಕೆ ಮಾಡಿಕೊಂಡಿದೆ.

**<u>ಬೀದರ ತಾಲ್ಲೂಕು ಪರಿಚಯ:-</u>**

ಬೀದರ ತಾಲ್ಲೂಕು ಕರುನಾಡಿನ ಮುಕಟವಾಗಿರುವ ಬೀದರ ತನ್ನದೇ ಆದ ಭವ್ಯ ಪರಂಪರೆ, ಸಾಹಿತ್ಯ, ಸಂಸ್ಕೃತಿ, ಕಲೆ, ಇತಿಹಾಸ ಗತವೈಭವದಿ ಜಗತ್ತಿಗೆ ಶತಶತಮಾನಗಳಿಂದ ಸುಗಂಧ ಸೂಸುತ್ತಿರುವುದು ಬೀದರಿನ ಹಿರಿಮೆ. ಹಿರಿದಾದಷ್ಟು ಕರ್ನಾಟಕದಲ್ಲಿಯೇ ಭೂ ಪ್ರದೇಶ ಕಡಿಮೆಯುಳ್ಳದ್ದು, ಆದರೂ ಸರ್ವಧರ್ಮ ಸಮನ್ವಯ ಬಾಳ್ವೆಯ ನೀತಿಬೀಡಾಗಿದೆ. ಕಾಲಾನುಕಾಲ ಗತಿಸಿದಂತೆ ನಮ್ಮ ನಾಗರಿಕತೆಯು ಸಾಹಿತ್ಯದ ಕಡೆಗೆ ಹೆಜ್ಜೆ ಹಾಕಿದಷ್ಟು ಹಿಂದುಳಿದ ಜಿಲ್ಲೆಯಾಗಿರುವುದು ಇಂದಿನ ರಾಜಕೀಯ ವ್ಯವಸ್ಥೆ ದುರಂತವಾದರೂ ಜಿಲ್ಲೆಯಲ್ಲಿಯೇ ಬೀದರ ಕೇಂದ್ರವಾಗಿರುವುದರಿಂದ ಇತರೆ ನಾಲ್ಕು ತಾಲ್ಲೂಕುಗಳಿಗಿಂತ ಅಭಿವೃದ್ಧಿ ಹೊಂದಿದೆ. ತಾಲ್ಲೂಕಿನೊಂದಿಗೆ ಹಿಂದೂ, ಮುಸ್ಲಿಂ ಸಾಂಸ್ಕೃತಿಕ ಬಾಂಧವ್ಯದ ಕೇಂದ್ರ ಬೀದರ ಕಲೆಯ ತವರೂರು ಅನೇಕ ಅರಸುಮನೆತನದ ರಾಜಧಾನಿಯಾಗಿ ಜಗತ್ಪ್ರಸಿದ್ದಿಯನ್ನುಗಳಿಸಿದೆ ಬೀದರ. ನಿಜಾಮನ ಆಡಳಿತ ಕೊನೆಗೊಂಡ ನಂತರ ಕನ್ನಡ ನಾಡಿನ ಧಾರ್ಮಿಕ ಸಂಸ್ಕೃತಿಕ ಪರಂಪರೆಯನ್ನು ಇಂದಿಗೂ ಮುಂದುವರೆಸಿಕೊಂಡು ಬರುತ್ತಿರುವುದು ಅನೇಕ ತಾಲ್ಲೂಕಗಳ ಪೈಕಿ ಬೀದರ ಸಹ ಒಂದು.

**<u>ಬಿದುರಿನಿಂದ ಬೀದರ:-</u>**

ರಾಮ ಸೀತೆಯರು ಬೀದರಿನ ಪಾಪನಾಶ ದೇವಸ್ಥಾನದ ಹತ್ತಿರ ನೆಲೆಸಿದ್ದು ದಂತ ಕತೆಗಳಲ್ಲೊಂದು. ರಾಮಾಯಣ ಕಾಲದಷ್ಟು ಇದರ ಪ್ರಾಚೀನತೆ ಶ್ರೇಷ್ಠವಾದ ನಾಗರಿಕತೆಗೆ ಹೆಸರುವಾಸಿ. ಪೌರಾಣಿಕವಾಗಿ ಬೀದರ ವಿದುರ ನಗರವೆಂದು ಕರೆಯಲ್ಪಡುತಿತ್ತು. ಮಹಾಭಾರತ ಕಾಲದಲ್ಲಿ ನಳ-ದಮಯಂತಿಯರ ಪ್ರಖ್ಯಾತ

ಪ್ರೇಮಾಯಣದ ರಮ್ಯ ನಗರಿ ಪ್ರಣಯದ ಉದ್ಯಾನವೆಂತಲು ಪ್ರತೀತಿ. ಕಾಲ ಕಾಲಕ್ಕೆ ಅನೇಕ ಹೆಸರುಗಳಿಂದ ಪ್ರಸಿದ್ದಿ ಪಡೆದ ಬೀದರ ಇದರ ಮೂಲ ಶಬ್ದ ಬಿದಿರು ಬಿದರೆ ಅಂದರೆ ಬಿದಿರು ಬೆಳೆಯುವ ಪ್ರದೇಶ ಅದಕ್ಕಾಗಿಯೇ ಬಿದಿರೆ, ಬಿದಿರಿಪುರ, ಬೀದರು, ಬೀದರೆ ಎಂಬ ಹೆಸರುಗಳು ಎಂದು 15ನೇ ಶತಮಾನದ ಕನ್ನಡ ಹಾಗೂ ಮರಾಠಿ ಗ್ರಂಥಗಳಲ್ಲಿ ಉಲ್ಲೇಖವಿದೆ. ಬಹಮನಿ ಮುಸ್ಲಿಂ ಅರಸರ ಕಾಲದಲ್ಲಿ ಇದು ಜಫರಬಾದ, ಬೀದರ ಜಾನಪದಿಯಲ್ಲಿ ಧರಿ ಕ್ವಾಟೀ ಎಂದು ಹೆಸರು ಹೊಂದಿ ಸದ್ಯಕ್ಕೆ ಬಿದಿರು (ಕಾಡು) ಇಲ್ಲದ ಬೀದರ ಎಂಬ ಹೆಸರು ಚಿರಸ್ಥಾಯಿಯಾಗಿ ಉಳಿದಿದೆ.

**ಭೌಗೋಳಿಕ ಪರಿಚಯ:-**

ಬೀದರ ಉಪವಿಭಾಗದೊಂದಿಗೆ ಜಿಲ್ಲಾ ಕೇಂದ್ರ ಸ್ಥಾನವಾಗಿರುವುದರಿಂದ ಜಿಲ್ಲೆಯ ಭೂಪಟದಲ್ಲಿ ಪೂರ್ವಭಾಗದಲ್ಲಿದೆ. ನಗರದಿಂದ 8-9 ಕಿ.ಮೀ. ದೂರದಲ್ಲಿಯೇ ಆಂದ್ರಪ್ರದೇಶ ಮೇದಕ ಜಿಲೆಯ ಜಹಿರಾಬಾದ ಮತ್ತು ನಾರಾಯಣಖೇಡ ತಾಲ್ಲೂಕಿನ ಸೀಮೆಗೆ ಹತ್ತಿಕೊಂಡಿದೆ. ಬೀದರಿನ ತಾಲ್ಲೂಕುಗಳಾದ ಔರಾದ ಉತ್ತರ ದಿಕ್ಕಿನಲ್ಲಿದೆ, ಭಾಲ್ಕಿ, ಬಸವಕಲ್ಯಾಣ ಪಶ್ಚಿಮಕ್ಕೆ ಹಾಗೂ ಹುಮನಾಬಾದ ದಕ್ಷಿಣ ಭಾಗದಲ್ಲಿದೆ. ತೆಲುಗು ಅಳಿಸಿದಂತೆ ಬಳಸಿಕೊಂಡಿರುವುದೇ ವೈಶಿಷ್ಟ್ಯತೆಯಲ್ಲೊಂದು ಎಂದರೆ ಅತಿಶೋಕ್ತಿಯಾಗದು. ಜನವಾಡ, ಮಾಳೆಗಾಂವ ಹಳ್ಳದ ಕೇರಿ, ಕಮಠಾಣ, ಮನ್ನಳ್ಳಿ, ಬಗದಲ ಈ ಆರು ಕಂದಾಯ ಹೋಬಳಿಗಳಾಗಿ ವಿಂಗಡನೆಗೊಂಡ ಬೀದರ ನಗರ ಸಭೆಯನ್ನು ಹೊಂದಿದೆ. ಇದರ ವಿಸ್ತೀರ್ಣ 926 ಚ.ಕೀ.ಮೀ. ನಲ್ಲಿ 128 ಜನವುಳ್ಳ ಇರುವ ಗ್ರಾಮಗಳು ಹಾಗೂ 19 ಜನವಸತಿ ಇಲ್ಲದ ಗ್ರಾಮಗಳು ಬೀದರನಲ್ಲಿ 331452 ಜನ ವಾಸಿಸುತ್ತಾರೆ. ಬೀದರ ತನ್ನ ಗರ್ಭದಲ್ಲಿ ಜಂಬು ಕಲ್ಲಿನ ಮಿಶ್ರಣವುಳ್ಳ ಕೆಂಪು ಕಲ್ಲನ್ನು ಹುದುಗಿಸಿಕೊಂಡಿದ್ದು, ಕೆಂಪು ಕಪ್ಪು ಬಣ್ಣದ ನೆಲವಿರುವ ಬೀದರ ಸಮುದ್ರ ಮಟ್ಟದಿಂದ 776 ಕಿ.ಮೀ. ಎತ್ತರದಲ್ಲಿದೆ.

**ಹವಾಗುಣ - ಮಳೆ:-**

ಬೀದರ ಸಮತೋಲನವಾದ ಹವಾಗುಣ ಹೊಂದಿದ್ದು, ಒಣ ಹವೆಯಿಂದ ಕೂಡಿರುತ್ತದೆ. ಗರಿಷ್ಟ ಉಷ್ಣಾಂಶ 31 ಮತ್ತು ಕನಿಷ್ಟ 21 ಡಿಗ್ರಿ ಸೆಂಟಿ ಗ್ರೇಡ್ ಇರುತ್ತದೆ. ಬೇಸಿಗೆಯ ಕೊನೆ ತಿಂಗಳಲ್ಲಿ ಉಷ್ಣಾಂಶ 42 ಡಿಗ್ರಿ ಸೆಂಟಿ ಗ್ರೇಡದವರೆಗೆ ಇರುತ್ತದೆ.

ಅತಿ ಎತ್ತರವಾದ ಗುಡ್ಡ ಬೆಟ್ಟಗಳಿಲ್ಲದ ವಿಶಾಲವಾದ ಪ್ರದೇಶಗಳಿಂದ ಕೂಡಿದ ಇದು ದಖನ ಪ್ರಸ್ಥ ಭೂಮಿಯ ಶ್ರೇಷ್ಠಭಾಗವಾಗಿದೆ. ತಾಲ್ಲೂಕಿನಲ್ಲಿ ಸಾಧಾರಣವಾಗಿ ಮಳೆಯು ಜೂನ್ ಸೆಪ್ಟೆಂಬರ್ ತಿಂಗಳಲ್ಲಿ ಬೀಳುತ್ತದೆ. (1990-1970) 847. ಮಿ. ಇದ್ದು, 1996-97ನೇ ಸಾಲಿನಲ್ಲಿ 929.0 ಮೀ, 2000ರಲ್ಲಿ 940ಮೀ. ವಾಡಿಕೆ ಮಳೆ ಈ ತಾಲ್ಲೂಕಿನಲ್ಲಿ 10 ವೃಷ್ಠಿ ಮಾಪಕ ಕೇಂದ್ರಗಳಿದ್ದು, ಮಳೆಯ ಪ್ರಮಾಣ ಅಳೆಯಲು ಸಹಾಯವಾಗುತ್ತದೆ. ಸರಾಸರಿ 42 ದಿನ ಮಳೆಯಾಗುತ್ತದೆ.

ನದಿ ಕಾಡು:-

ಬೀದರ ತಾಲ್ಲೂಕಿನ ಅಧಿನದೊಳಗೆ ಹರಿಯುವ ಏಕೈಕ ನದಿ ಮಾಂಜ್ರಾ ನದಿಯಾಗಿದೆ. ಈ ನದಿ ಗೋದಾವರಿ ನದಿಯ ಉಪ ನದಿಯಾಗಿದ್ದು, ಮಹಾರಾಷ್ಟ್ರದಿಂದ ಆಂಧ್ರಕ್ಕೆ ಅಂದರೆ ಪಶ್ಚಿಮದಿಂದ ಪೂರ್ವ ಮಧ್ಯ ಬೀದರ ತಾಲ್ಲೂಕಿನ ಯರನಳ್ಳಿ ಇಸ್ಲಾಂಪೂರ, ಚೀಮಕೊಡ, ಚಿಲ್ಲರ್ಗಿ ಮುಖಾಂತರ ಹಾದು ಹೋಗುತ್ತದೆ. ಪೌರಾಣಿಕಗಳಲ್ಲಿ ಮಂಜಳವೆಂದು ಹೆಸರುವಾಗಿಯಾದ ಈ ನದಿಗೆ ಕಾರಂಜಾ ಉಪನದಿಯಾಗಿದೆ. ಈ ಕ್ಷೇತ್ರದಲ್ಲಿ ಹೇಳಿಕೊಳ್ಳುವಂತಹ ಬೆಟ್ಟಗಳಿಲ್ಲದಿದ್ದರೂ ಪಾಪನಾಶ, ನರಸಿಂಹ ಝರಾ, ಗುರುನಾನಕ ಝರಾ, ನಾವದಗೇರಿ ಮತ್ತು ಹೊನ್ನಿಕೇರಿ ಬಳಿ ಸ್ವಲ್ಪಮಟ್ಟಿನ ಎತ್ತರ ಪ್ರದೇಶಗಳು, ಬೆಟ್ಟಗಳಂತೆ ಮನರಂಜಿಸುತ್ತವೆ.

ಬೀದರನಲ್ಲಿ ಎತ್ತರ ಪ್ರದೇಶಗಳು ದಟ್ಟವಾದ ಕಾಡು ಅತೀ ಎತ್ತರ ಮರಗಳು ಸಿಗುವುದು ಕಷ್ಟವಾದರೂ ಇತ್ತೀಚಿನ ದಿನಗಳಲ್ಲಿ ಅರಣ್ಯ ಇಲಾಖೆಯವರ ಕೃಪೆಯಿಂದ ಆಂಧ್ರದ ಸೀಮೆ ಬಳಿ ಮತ್ತು ಹೊನ್ನಿಕೇರಿ ಬಳಿ ಸುಮಾರು 4655 ಹೆಕ್ಟರನಲ್ಲಿ ಕಾಡು ಬೆಳೆಸಲಾಗಿದೆ.

ಸಾಹಿತ್ಯ:-

ಕನ್ನಡ ಸಾಹಿತ್ಯ ಸಾರಸತ್ವ ಲೋಕಕ್ಕೆ ಬೀದರ ಜಿಲ್ಲೆ ಕೊಟ್ಟಂತಹ ಅದ್ಭುತ ಕೊಡುಗೆ ಬೀದರ ತಾಲ್ಲೂಕು ಕೊಡದಿರುವುದು ಆನಂದದ ಸಂಗತಿಯಲ್ಲದಿದ್ದರೂ ಅದಕ್ಕೆ ತನ್ನದೇ ಆದ ಅನೇಕ ಕಾರಣಗಳನ್ನು ಹೊಂದಿದೆ. ಬೀದರ ಮುಸ್ಲಿಂ ಅರಸರ ಆಡಳಿತದಲ್ಲಿರುವುದರಿಂದ ಇಲ್ಲಿಯ ಆಡಳಿತ ಮತ್ತು ಅಧಿಕೃತ ಭಾಷೆ ಉರ್ದು, ಪರ್ಶಿಯನ್ ಆಗಿತ್ತು. ಆಧುನಿಕ ದೇಶ ಸ್ವತಂತ್ರ ಪೂರ್ವ ಕನ್ನಡ ಸಾಹಿತ್ಯ ಸಿಗುವುದು ಈ ತಾಲ್ಲೂಕಿನಲ್ಲಿ ಅಪರೂಪ ಆದರೂ ಪಾರ್ಶಿ, ಉರ್ದು ಸಾಹಿತ್ಯಕ್ಕೆ ಬೀದರ ಕೊಟ್ಟ ಕೃತಿಗಳು ಹೇರಳವಾಗಿದೆ. 15ನೇ ಶತಮಾನದಲ್ಲಿ ಮಹಮ್ಮದ ಗವಾನನ ಆಡಳಿತ ಅವಧಿಯಲ್ಲಿ ಮಹತ್ತರ ಕೃತಿಗಳು ಹೊರಹೊಮ್ಮಿ ಜಗತ್ತಿನ ಗಮನ ಸೆಳೆದಿದೆ. ಆದರೂ ಇಂದಿಗೂ ಕನ್ನಡ ಸಾಹಿತ್ಯ ಸಫಲವಾಗರಿರುವುದು ವಿಷಾದದ ಸಂಗತಿಯಾಗಿದೆ. ರಾಜ್ಯದ ರಾಜಧಾನಿ ಬೆಂಗಳೂರಿನಿಂದ ಅತಿದೂರ ಹಾಗೂ ಇಲ್ಲಿನ ಜನರ ಆರ್ಥಿಕ ಮಟ್ಟದುಸ್ತರ ಕಾರಣವು ಸೇರಿದೆ. ಬೀದರ ಕರ್ನಾಟಕಕ್ಕೆ ಸೇರಿದ ಮೇಲೆ ಸಾಹಿತ್ಯದಲ್ಲಿ ಪ್ರೊ. ವಿರೇಂದ್ರ ಸಿಂಪಿ ಇವರು ಧಾರ್ಮಿಕ, ಸಾಹಿತ್ಯಕ ರಂಗದಲ್ಲಿ ಗುರುತಿಸಿಕೊಂಡಿದ್ದಾರೆ.

ಇವರು ಬೊಧನೆ ಮತ್ತು ಸಾಹಿತ್ಯ ರಚನೆಯ ಬೀದರಕ್ಕೆ ಕೀರ್ತಿ ತಂದಿದ್ದಾರೆ. ಇವರ ಲಲಿತ ಪ್ರಬಂಧಗಳ ಕೃತಿಗೆ ರಾಜ್ಯ ಪ್ರಶಸ್ತಿಯು ಲಭಿಸಿದೆ. ಎಂ.ಜಿ.ಗಂಗನಪಳ್ಳಿ 8 ಕೃತಿಗಳು ಹೊರ ತಂದಿದ್ದಾರೆ. ಎಂ.ಜಿ.ದೇಶಪಾಂಡೆ ಕಾವ್ಯಕಾದಂಬರಿ ಕಥೆಗಳ ಮೂಲಕ ತಮ್ಮನ್ನು ಗುರುತಿಸಿ ಕೊಂಡಿದ್ದಾರೆ. ಶಿವಕುಮಾರ ನಾಗವಾರ ಕಥೆಗಳಲ್ಲಿ ಜಿಲ್ಲೆಗೆ ಕೀರ್ತಿ ತರುವ ಎಲ್ಲಾ ಕ್ಷಣಗಳು ಅಡಗಿದೆ. ವಿಜ್ಞಾನದಲ್ಲಿ ಸುಭಾಷ ನೇಳಗೆ ಮತ್ತು ಡಾ: ಜಗನ್ನಾಥ ಹೆಬ್ಬಾಳೆಯವರು ಜನಪದ ಸಂಗ್ರಹದಲ್ಲಿ ಹಲವು ಕೃತಿಗಳು ಹೊರತಂದು ಖ್ಯಾತಿ ಪಡೆದಿದ್ದಾರೆ. ಕಾಶಿನಾಥ ಮಹಿಮಾಕರ ಮೊದಲು ನಾಟಕ ಕೃತಿಗಳು ಹೊರತಂದು ಪ್ರಕಟಿಸಿದ್ದಾರೆ. ಯಶೋಧಮ್ಮ ಸಿದಬಟ್ಟಿಯವರ ಕಾದಂಬರಿ, ಟಿ.ಎಸ್.ರಶ್ಮಿ ಕಾವ್ಯ ಸಂಲಕನ ಪ್ರಕಟಗೊಂಡಿವೆ. ಹಾಗೂ ಕೃತಿಯ ರೂಪದಲ್ಲಿ ಬೆಳಗದಿದ್ದರೂ

ಕಾವ್ಯಕ್ಷೇತ್ರದಲ್ಲಿ ತಮ್ಮದೇ ಆದ ಛಾಪು ಮುಡಿಸುವ ನಿಟ್ಟಿನಲ್ಲಿ ಮುನ್ನುಗುತ್ತಿರುವ ಕವಿಗಳ ದಂಡು ಇಲ್ಲಿ ಬೆಳೆಯುತ್ತಿದೆ.

**ಶಿಕ್ಷಣ ಸೌಕರ್ಯ:-**

ಈ ತಾಲ್ಲೂಕು ಕ್ರಿ.ಶ. 1471 ರಲ್ಲಂತು ಇಡೀ ವಿಶ್ವದ ಗಮನ ಸೆಳೆದುಕೊಂಡಿತ್ತು. ವಿಶ್ವವಿದ್ಯಾಲಯದಲ್ಲಿ ಅಂದಿನ ಪ್ರಾಧ್ಯಪಕರು ಅದಕ್ಕಾಗಿ ಇರಾನ್, ಇರಾಕ್, ಪಾರ್ಸಿ, ಇಜಿಪ್ತ ಹೀಗೆ ಹಲವಾರು ದೇಶಗಳಿಂದ ಇಲ್ಲಿಗೆ ವಿದ್ಯಾಭ್ಯಾಸಕ್ಕಾಗಿ ಬರುತ್ತಿದ್ದರು. ಆದರೆ ಕಾಲ ಚಕ್ರದಡಿಯಲ್ಲಿ ಆ ವ್ಯವಸ್ಥೆ ಮಂಜಿನಂತೆ ಅಳಿದು ಹೊಯಿತು. ಅದಾದ ನಂತರ ಬ್ರಿಟಿಷರ ಕಾಲದಲ್ಲಿ ಕೆಲವು ಶಿಕ್ಷಣ ಸಂಸ್ಥೆಗಳು ತಲೆಎತ್ತಿ ನಿಂತವು ಕೆಲವು ಇನ್ನು ಕಾರ್ಯನಿರತವಾಗಿವೆ. ಆದ್ದರಿಂದ ಇಲ್ಲಿನ ಸಾಕ್ಷರತಾ ಪ್ರಮಾಣ 50.967 ಆಗಿರುತ್ತದೆ. ಪ್ರಸ್ತುತ ಈ ತಾಲ್ಲೂಕಿನಲ್ಲಿ 104 ಕಿರಿಯ ಪ್ರಾಥಮಿಕ ಶಾಲೆಗಳಿದ್ದರೆ, ಹಿರಿಯ ಪ್ರಾಥಮಿಕ ಶಾಲೆ 182 ಇವೆ. ಪ್ರೌಢ ಶಾಲೆಗಳು 76, ಪದವಿ ಪೂರ್ವ ಕಾಲೇಜುಗಳು ಸರ್ಕಾರಿ 13, ಸಾಮಾನ್ಯ ಪದವಿ ಶಿಕ್ಷಣದ 15 ಕಾಲೇಜುಗಳಿವೆ, ಇಂಜಿನಿಯರಿಂಗ 1, ಪಾಲಿಟೆಕ್ನಿಕ 2, ದಂತ ಕಾಲೇಜು 1, ಆಯುರ್ವೆದಿಕ 1, ಲಾ ಕಾಲಜು 1, ಟಿ.ಸಿ.ಎಚ್. 2, ಬಿ.ಇಡ್. ಕಾಲೇಜು 2, ಡಿ.ಫಾರ್ಮಸಿ 2, ಬಿ.ಫಾರ್ಮಸಿ 1, ಡೆಂಟಲ್ ಕಾಲೇಜು 1, ನರಸಿಂಗ ಕಾಲೇಜು 3, ವೆಟರನರಿ ಕಾಲೇಜು 1, ಸಿಪಿಡ್ ಕಾಲೇಜು 2, ಪಿ.ಜಿ.ಕನ್ನಡ ವಿಷಯದ 1 ಹೀಗೆ ವಿವಿಧ ವಿಷಯಗಳ ಮೇಲೆ ಶಿಕ್ಷಣ ವಿದ್ಯಾರ್ಥಿಗಳು ಪಡೆಯುತ್ತಿರುವುದಕ್ಕೆ ಬಿ.ವ್ಹಿ ಭೂಮರೆಡ್ಡಿ ಆರ್.ವಿ. ಬೀಡಪ್ಪಾ, ಸರದಾರ ಜೋಗಾಸಿಂಗ್, ಪೂಜ್ಯ ಚನ್ನಬಸವ ಪಟ್ಟದೇವರು, ಭೀಮಣ್ಣ ಖಂಡ್ರೆ, ಪೂಜ್ಯ ಶಿವಕುಮಾರ ಸ್ವಾಮಿಗಳು, ಎಸ್.ಬಿ. ಪಾಟೀಲ ಹಾಗೂ ಮೊದಲಾದ ಗಣನೀಯ ಸೇವೆ ಸಲ್ಲಿಸಿದ್ದಾರೆ. ಆದ್ದರಿಂದ ಮೇಟ್ರಿಕ್ ಪೂರ್ವ 2, ಮೇಟ್ರಿಕ ನಂತರದ 4 ಅನುದಾನ ಪಡೆಯುತ್ತಿರುವುದು ಮೇಟ್ರಿಕ ಪೂರ್ವ 2 ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿ ನಿಲಯಗಳಿವೆ.

ಹಿಂದುಳಿದ ವರ್ಗದವರ ವಿದ್ಯಾರ್ಥಿನಿಲಯಗಳು ಮೇಟ್ರಿಕ ಪೂರ್ವ 04 ಹಾಗೂ ಪಾಲಿಟೇಕ್ನಿಕ್ 1 ವಸತಿ ನಿಲಯಗಳು ಕಾರ್ಯನಿರ್ವಹಿಸುತ್ತವೆ. ಈ ತಾಲ್ಲೂಕಿನಲ್ಲಿ ಸರ್ಕಾರಿ ಎಂ.ಬಿ.ಬಿ.ಎಸ್. ಕಾಲೇಜು ಇದೆ.

**ಬೀದರ ತಾಲ್ಲೂಕಿನ ಕನ್ನಡ ಚಟುವಟಿಕೆಗಳು:-**

ಬೀದರ ತಾಲ್ಲೂಕಿನಲ್ಲಿ ಕನ್ನಡದ ಸ್ಥಿತಿ ಶೋಚನಿಯವಾದ ಮತ್ತು ತೆಲುಗು, ಉರ್ದು, ಮರಾಠಿ, ಮುಂತಾದ ಭಾಷೆಗಳ ಪ್ರಭಾವಕ್ಕೆ ತುತ್ತಾದ ಸಂದರ್ಭದಲ್ಲಿ ಕನ್ನಡ ಭಾಷೆ ಸ್ವಚಂದವಾಗಿ ಉಸಿರಾಡುವಂತೆ ಕನ್ನಡ ನುಡಿಗೆ ನೆಲೆಯೊದಗಿಸಿ ಕೊಟ್ಟ ಮಹನಿಯರಲ್ಲಿ ಪ್ರಮುಖರಾದವರೆಂದರೆ, ಶ್ರೀ ಆರ್.ವಿ.ಬೀಡಪ್ಪ, ಶ್ರೀ ಪ್ರಭುರಾವ ಕುಂಬಳಿವಾಲೆ, ಪೂಜ್ಯ ಡಾ: ಚನ್ನಬಸವ ಪಟ್ಟದೇವರು, ಶ್ರೀ ಶಿವಶರಣಪ್ಪಾ ವಾಲಿ, ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿ, ಶ್ರೀ ಹಣಮಂತರಾವ ಪಾಟೀಲ, ಶ್ರೀ ಜಯತೀರ್ಥ ರಾಜಪುರೋಹಿತ, ಶ್ರೀ ಜಿ.ವೆಂಕಟಸುಬ್ಬಯ್ಯಾ ಮುಂತಾದವರನ್ನು ನಾವು ಸ್ಮರಿಸಿಕೊಳ್ಳಲೇಬೇಕು.

ಈ ರೀತಿಯಾಗಿ ಉಳಿದು ಬೆಳೆದು ಬಂದ ಕನ್ನಡ ನಾಡು ನುಡಿಯನ್ನು ಜೋಪಾನ ಮಾಡುವಲ್ಲಿ ಸಹಕರಿಸಿದ ಪ್ರಮುಖರೆಂದರೆ ಶ್ರೀ ವಿರೇಂದ್ರ ಸಿಂಪಿ, ಶ್ರೀ ಬಸವರಾಜ ಅಂಬಲಗೆ, ಶ್ರೀ ಎಸ್.ಸೀತಾರಾಮಪ್ಪಾ,

ಶ್ರೀ ಕಾಶಿನಾಥ ವಿಶ್ವಕರ್ಮ, ಶ್ರೀ ಬಾಬುರಾವ ವಡ್ಡೆ, ಡಾ: ಜಗನ್ನಾಥ ಹೆಬ್ಬಾಳೆ, ಪ್ರೋ.ಎಸ್.ಬಿ. ಬಿರಾದಾರ, ಪ್ರೋ ಸಿದ್ರಾಮಪ್ಪಾ ಮಾಸಿಮಾಡೆ ಮುಂತಾದವುರಾಗಿದ್ದಾರೆ. ಕನ್ನಡ ಭವನ ನಿರ್ಮಾಣಕ್ಕಾಗಿ ಶ್ರೀ ಜಗನ್ನಾಥ ಹೆಬ್ಬಾಳೆಯವರು ಅಧ್ಯಕ್ಷರಾಗಿದ್ದ ಅವಧಿಯಲ್ಲಿ ನಿವೇಶನ ಮಂಜೂರಿಯಾಗಿದೆ. ಕಟ್ಟಡ ಕಾರ್ಯ ಮಾಡಬೇಕಾಗಿದೆ. (ನಿವೇಶನ ಮೇಲೆ ನ್ಯಾಯಾಲಯದ ತಡೆ ಆಜ್ಞೆ ಇರುವುದರಿಂದ ಕಟ್ಟಡದ ಕೆಲಸ ಪ್ರಾರಂಭವಾಗುತಿಲ್ಲ).

ಇಲ್ಲಿಯವರೆಗೆ ಆಗಿರುವ ಐದು ಜಿಲ್ಲಾ ಸಾಹಿತ್ಯ ಸಮ್ಮೇಳನಗಳು ಬೀದರನಲ್ಲಿ ಆಗಿರುತ್ತವೆ. ಈ ಮುಖಾಂತರ ಕನ್ನಡ ಕಂಪು ಜನಮನಕ್ಕೆ ಮುಟ್ಟಿಸುವ ಕಾರ್ಯ ಮಾಡಿದ್ದು ಶ್ಲಾಘನೀಯವಾಗಿದ.ಎ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಶ್ರೀ ಜಿ.ವೆಂಕಟ ಸುಬ್ಬಯ್ಯಾ ನವರ ಅಧ್ಯಕ್ಷತೆಯಲ್ಲಿ ಶ್ರೀ ಜಯತೀರ್ಥ ರಾಜಪುರೋಹಿತರ ಅಧ್ಯಕ್ಷತೆಯಲ್ಲಿ 2ನೇ ಜಿಲ್ಲಾ ಸಾಹಿತ್ಯ ಸಮ್ಮೇಳನ ಬಹುಅದ್ದೂರಿಯಾಗಿ ನಡೆದಿರುತ್ತದೆ. ಪ್ರೋ. ವಿರೇಂದ್ರ ಸಿಂಪಿಯವರ ಅಧ್ಯಕ್ಷತೆಯಲ್ಲಿ 3ನೇ ಸಮ್ಮೇಳನ, ಡಾ: ಕಾಶಿನಾಥ ಅಂಬಲಗೆಯವರ ಅಧ್ಯಕ್ಷತೆಯಲ್ಲಿ 4ನೇ ಸಮ್ಮೇಳನ ಭಾಲ್ಕಿಯಲ್ಲಿ) ಪ್ರೋ. ಬಾಲಚಂದ್ರ ಜಯಶೆಟ್ಟಿಯವರ ಅಧ್ಯಕ್ಷತೆಯಲ್ಲಿ 5ನೇ ಸಾಹಿತ್ಯ ಸಮ್ಮೇಳನ ಮತ್ತು ಡಾ. ಜಿ.ಬಿ. ವಿಸಾಜಿಯವರ ಅಧ್ಯಕ್ಷತೆಯಲ್ಲಿ 6ನೇ ಸಾಹಿತ್ಯ ಸಮ್ಮೇಳನಗಳು ನಡೆಸಿರುವುದು ಮೆಚ್ಚುವಂತಾಗಿದೆ.

ಡಾ: ಜಗನ್ನಾಥ ಹೆಬ್ಬಾಳೆಯವರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಅವಧಿಯಲ್ಲಿ ಅನೇಕ ಸಾಹಿತ್ಯದ ಚಟುವಟಿಕೆಗಳು ನಡೆದಿರುತ್ತವೆ. ಇದೀಗ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾದ ಪ್ರೋ. ಸಿದ್ರಾಮಪ್ಪಾ ಮಾಸಿಮಾಡೆಯವರು ಸಾಹಿತ್ಯದ ಅನೇಕ ಚಟುವಟಿಕೆಗಳು ಹಮ್ಮಿಕೊಳ್ಳುತ್ತಾ ಕನ್ನಡ ಮಾತೆಯ ಸೇವೆಯಲ್ಲಿ ತೊಡಗಿದ್ದಾರೆ. ಪ್ರೋ. ಸಿದ್ರಾಮಪ್ಪಾ ಮಾಸಿಮಾಡೆಯವರು ಹಮ್ಮಿಕೊಂಡಿರುವ ಕಾರ್ಯಕ್ರಮಗಳು: 1) ಗೌರೀಶ ಕಾಯ್ಕಿಣಿ ಸ್ಮರಣೆ 2) ಜಿಲ್ಲಾ ಕ.ಸಾ.ಪ. ಕಾರ್ಯಲಯ ಉದ್ಘಾಟನೆ 3) ಡಾ: ಬಾಬಾಸಾಹೇಬ ಅಂಬೇಡ್ಕರ ಕುರಿತು ವಿಶೇಷ ಉಪನ್ಯಾಸ ಹಾಗೂ ಕವಿಗೊಷ್ಟಿ 4) ಕನ್ನಡ ಜಾಗೃತಿ ವರ್ಷಾಚರಣೆ 5) ಪ್ರತಿಭಾ ಪರಿಚಯ ಕಾರ್ಯಕ್ರಮ 6) ದ.ರಾ.ಬೇಂದ್ರೆ ಸ್ಮರಣೋತ್ಸವ ಮುಂತಾದ ಕಾರ್ಯಕ್ರಮಗಳಲ್ಲಿವೆ. ನಿರಂತರವಾಗಿ ಸಾಹಿತ್ಯ ಜ್ಯೋತಿ, ಸಾಹಿತ್ಯ ಸೌರಭ ಕಾರ್ಯಕ್ರಮ ಹಮ್ಮಿಕೊಂಡು ಕನ್ನಡ ನುಡಿ ಸೇವೆಯ ಕಾರ್ಯಕ್ರಮದಲ್ಲಿ ತೊಡಗಿದ್ದಾರೆ.

ಅಲ್ಲದೇ ಬೀದರ ತಾಲ್ಲೂಕು ಹಲವು ಸಾಧು ಸಂತರ ಕವಿ ಸಾಹಿತಿಗಳ, ಕಲೆ, ಸಂಸ್ಕೃತಿಗಳ ತವರೂರಾಗಿದೆ. ಇಲ್ಲಿನ ಹವಾಗುಣ ಉತ್ತಮವಾಗಿದ್ದು, ಕೆಂಪು ಮತ್ತು ಬೂದಿ ಮಿಶ್ರಿತ ಕಂದು ಬಣ್ಣದ ಮಣ್ಣಿನ ಭೂಮಿಯನ್ನು ಹೊಂದಿದೆ. ಐತಿಹಾಸಿಕ ಮಹತ್ವ ಪಡೆದಿದ್ದು ಹಲವು ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ಬಿದರಿ ವಸ್ತುಗಳು ಉತ್ಪಾದನಾ ಕಲೆಯಿಂದ ದೇಶದಾದ್ಯಂತ ಪ್ರಸಿದ್ದವಾಗಿರುವ ಬೀದರ, ಕ್ವಾಟಿ, ಬಿದರೆ ಎಂಬ ಹೆಸರನ್ನು ಹೊತ್ತಿದೆ. ಸರ್ವಧರ್ಮ ಸಮಭಾವದಿಂದ ಬಾಳುತ್ತಿರುವ ಇಲ್ಲಿನ ಜನರಲ್ಲಿ ಹಿಂದು, ಮುಸ್ಲೀಂ, ಸಿಖ್, ಇಸಾಯಿ, ಬೌದ್ಧ, ಲಿಂಗಾಯತ (ವೀರಶೇವ) ರೆಲ್ಲರೂ ಪರಸ್ಪರ ಸೌಹಾರ್ದತೆಯಿಂದ ಬಾಳುತ್ತಿದ್ದಾರೆ. ಬೀದರ ತಾಲ್ಲೂಕು ಪ್ರಮುಖರಾಗಿದ್ದು ಇಲ್ಲಿ ಅನೇಕ ಐತಿಹಾಸಿಕ ಸ್ಥಳಗಳು ಇವೆ. ಹೀಗೆ ಬೀದರ ತಾಲ್ಲೂಕವು ಪರಂಪರೆಯಿಂದ ಕೂಡಿದ್ದು ಕರ್ನಾಟಕದಲ್ಲಿ ಉತ್ತಮ ಹಾಗೂ ಪ್ರಸಿದ್ಧಿ ಪಡೆದಿದೆ.

**ಭಾಲ್ಕಿ ತಾಲ್ಲೂಕು ಪರಿಚಯ:-**

ಬೀದರ ಜಿಲ್ಲೆಯಲ್ಲಿ ಭಾಲ್ಕಿ ಒಂದು ತಾಲ್ಲೂಕು ಕೇಂದ್ರ. ಈ ತಾಲ್ಲೂಕು ಕುರಿತು ಶ್ರೀ ಸೋಮನಾಥ ಮುದ್ದಾ ಶಿಕ್ಷಕರು ಬರೆದ ಭಾಲ್ಕಿ ಪರಿಚಯ ಪುಸ್ತಕದಲ್ಲಿ ಭಾಲ್ಕಿಗೆ ಭಲ್ಲೂಂಕೆಯೆಂದು ಕರೆಯುತ್ತಿದ್ದರು, ಇಲ್ಲಿನ ನೆಲವು ಹದವಾದ ಮಣ್ಣಿನಿಂದ ಕೂಡಿದ್ದು, ಶರಣ ಕುಂಬಾರ ಗುಂಡಯ್ಯಾ ನವರ ಕಾಯಕ ಕ್ಷೇತ್ರ ಇದಾಗಿದೆ. 109 ವರ್ಷಗಳ ಬಾಳನ್ನು ಕಂಡ ಲಿಂ.ಡಾ: ಚನ್ನಬಸವ ಪಟ್ಟದೇವರು ತಮ್ಮ ಕಾಯಕ ತತ್ವ ಜಾತೀಯತೆಯ ನಿರ್ಮೂಲನೆ, ಸಮಾನತೆಯ ಬದುಕಿಗಾಗಿ ಹಾಗೂ ಎಲ್ಲಕ್ಕಿಂತ ಮಹತ್ವ ಪೂರ್ಣವಾದದ್ದು ಅವರ ಕನ್ನಡ ಭಾಷೆಯ ಅಭಿವೃದ್ದಿಗಾಗಿ ಮಾಡಿದ ಸೇವೇ ಅವಿಸ್ಮರಣಿಯ. ಭಾಲ್ಕಿ ತಾಲ್ಲೂಕಿನಲ್ಲಿ ಕಲೆ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ಸಾಮಾಜಿಕ ಸೇವೆ, ಐತಿಹಾಸಿಕ ಪರಂಪರೆ, ಧಾರ್ಮಿಕ ಮತ್ತು ನೈತಿಕ ನಡುವಳಿಗಳು ತುಂಬಿ ತುಳುಕುತ್ತಿವೆ.

ಭೌಗೋಳಿಕ ನೋಟ, ಉತ್ತಮ ಹವಾಗುಣ ಇಲ್ಲಿನ ಜನವರ್ಗಗಳು, ಭಾಷೆ ಜನವಸತಿ, ಸಂಸ್ಕೃತಿಗಳು ತಮ್ಮದೇ ವೈಶಿಷ್ಟ್ಯಗಳಿಂದ ಕೂಡಿದೆ. ಭಾಲ್ಕಿ ತಾಲ್ಲುಕಿನ ಹಲವು ಗ್ರಾಮಗಳು ಧಾರ್ಮಿಕ ಆಚರಣೆ ಜಾತ್ರೆ ಸಂತೆ ಹಾಗೂ ಸಾರ್ವಜನಿಕ ಹಬ್ಬ ಹರಿದಿನಗಳಿಗಾಗಿ ಐತಿಹಾಸಿಕ ಮಾಹಿತಿಯನ್ನು ಭವಿಷ್ಯದ ಜನತೆಗೆ ಮಾಹಿತಿ ನೀಡುವಂತವುಗಳಾಗಿವೆ. ಜನಪದ ಹಾಡುಗಳು ಐತಿಹಾಸಿಕ ಮಾಹಿತಿಯನ್ನು ಭವಿಷ್ಯದ ಜನತೆಗೆ ಮಾಹಿತಿ ನೀಡುವಂಥವುಗಳಾಗಿವೆ. ಜನಪದ ಹಾಡುಗಳು ಕೋಲಾಟ, ಸಂಗೀತ, ಭಜನೆ, ದೊಡ್ಡಟಗಳು ಇಂದಿಗೂ ಜನಪ್ರೀಯತೆ ಗಳಿಸಿಕೊಂಡಿವೆ.

ಭಾಲ್ಕಿ ತಾಲ್ಲೂಕಿನ ವ್ಯವಸಾಯದ ವಿಧಾನಗಳು, ಕುಲಕಸುಬುಗಳು, ಇಲ್ಲಿನ ಕೈಗಾರಿಕೆಗಳು, ಶೈಕ್ಷಣಿಕ ಸೌಲಭ್ಯಗಳು, ಸಾಹಿತಿಗಳು, ರಾಜಕೀಯ ಪಂಡಿತರು, ವಚನಕಾರರು, ಕವಿಗಳು ಹಲವು ವೈವಿಧ್ಯಮಯ ಸಂಘ ಸಂಸ್ಥೆಗಳ ಕಾರ್ಯಗಳು ವಿಶಿಷ್ಟವಾಗಿವೆ. ಸಾಮಾಜಿಕ ಸೇವೆಗಳಲ್ಲಿ ತೊಡಗಿಕೊಂಡಿರುವ ಜನರ ಒಂದು ಘಟಕವನ್ನೇ ಪಟ್ಟಿ ಮಾಡಬಹುದಾಗಿದೆ. ತಾಲ್ಲೂಕಿನ ಅಭಿವೃದ್ದಿ ಕಾರ್ಯಗಳು ಇತರೆ ತಾಲ್ಲುಕುಗಳಿಗೆ ಹೋಲಿಸಿದಾಗ ಪ್ರಗತಿಯನ್ನು ಕಾಣಬಹುದಾಗಿದೆ. ಇಲ್ಲಿನ ಆಡಳಿತ ಕಾರ್ಯವಿಧಾನ ಜನಪ್ರತಿನಿಧಿಗಳು ವೈದ್ಯಕೀಯ ಸೌಲಭ್ಯಗಳು ಸಾರಿಗೆ ಸಂಪರ್ಕದ ವ್ಯವಸ್ಥೆ ಮುಂತಾದ ವಿಷಯಗಳನ್ನು ಕುರಿತು ಬರೆದರೆ ದೊಡ್ಡ ಗ್ರಂಥವೇ ರಚನೆಯಾಗಬಹುದು. ಆದರೆ ಸಂಕ್ಷಿಪ್ತವಾದ ಅಂಕಿ ಸಂಖ್ಯೆಯೊಂದಿಗೆ ಈ ಪುಸ್ತಕದ ಗಾತ್ರದ ಇತಿಮಿತಿಯಲ್ಲಿ ವಿವರಗಳನ್ನು ಈ ರೀತಿಯಾಗಿ ವಿವರಿಸಲಾಗಿದೆ.

ಕರ್ನಾಟಕದ 30 ಜಿಲ್ಲೆಗಳಲ್ಲಿ ಉತ್ತರದ ಈ ಆರಂಭಿಕ ಜಿಲ್ಲೆ ಬೀದರ. ಈ ಜಿಲ್ಲೆಯಲ್ಲಿನ 5 ತಾಲ್ಲೂಕುಗಳ ಪೈಕಿ ಭಾಲ್ಕಿಯೂ ಒಂದಾಗಿದೆ. ಭಾಲ್ಕಿ ತಾಲ್ಲೂಕಿನ ಉತ್ತರ ವಾಯುವ್ಯ ದಿಕ್ಕಿನಲ್ಲಿ ಔರಾದ ತಾಲ್ಲೂಕು, ಪೂರ್ವಕ್ಕೆ ಬೀದರ ತಾಲ್ಲೂಕು, ದಕ್ಷಿಣಕ್ಕೆ ಬಸವಕಲ್ಯಾಣ ಮತ್ತು ಹುಮನಾಬಾದ ತಾಲ್ಲೂಕುಗಳಿಂದ ಮತ್ತು ಮಹಾರಾಷ್ಟ್ರ ರಾಜ್ಯದಿಂದ ಸುತ್ತು ವರಿದಿದೆ. ಭಾಲ್ಕಿ ತಾಲ್ಲುಕಿನ ಒಟ್ಟು ಭೌಗೋಳಿಕ ವಿಸ್ತೀರ್ಣ 1117:3 ಒಂದು ಸಾವಿರದ ಒಂದು ನೂರೂ ಹದಿನೇಳು ದಶಾಂಶ ಮೂರು ಚದರ ಕಿಲೋ.ಮೀಟರ ಪ್ರದೇಶವನ್ನೊಳಗೊಂಡಿದೆ.

ಭಾಲ್ಕಿ ತಾಲ್ಲೂಕಿನಲ್ಲಿ 129 ಕಂದಾಯ ಗ್ರಾಮಗಳಿವೆ. ಸುತ್ತಲಿನ ಎಲ್ಲಾ ಊರಿನ ಜನರಿಗೆ ಭಾಲ್ಕಿಯೆ ಏಕೈಕ ಪ್ರಮುಖ ಪಟ್ಟಣವಾಗಿದೆ. ಆಡಳಿತದ ಅನುಕೂಲಕ್ಕಾಗಿ ಈ ತಾಲ್ಲೂಕಿನಲ್ಲಿ 06 ಹೊಬಳಿಗಳನ್ನು ಹಾಗೂ 35 ಗ್ರಾಮ ಪಂಚಾಯತಿಗಳು ಆಸ್ತಿತ್ವದಲ್ಲಿದೆ. ಭಾಲ್ಕಿ ಪಟ್ಟಣವನ್ನು ಭೌಗೋಳಿಕ ನಕ್ಷೆಯಲ್ಲಿ 18.03 ಅಕ್ಷಾಂಶ ಹಾಗೂ $77^0$.13 ರೇಖಾಂಶಗಳ ಮಧ್ಯದಲ್ಲಿ ಗುರುತಿಸಬಹುದಾಗಿದೆ.

**ಭಾಲ್ಕಿ ತಾಲ್ಲೂಕಿನ ಶೈಕ್ಷಣಿಕ ಸೌಲಭ್ಯಗಳು:–**

ಭಾಲ್ಕಿ ತಾಲ್ಲೂಕಿನಲ್ಲಿ 162 ಪ್ರಾಥಮಿಕ ಶಾಲೆಗಳು 30 ಅನುದಾನಿತ ಖಾಸಗಿ ಪ್ರಾಥಮಿಕ ಶಾಲೆಗಳು 32 ಅನುದಾನ ರಹಿತ ಖಾಸಗಿ ಪ್ರಾಥಮಿಕ ಶಾಲೆಗಳಿವೆ. ಅದೇ ರೀತಿ 26 ಸರ್ಕಾರಿ ಪ್ರೌಢ ಶಾಲೆಗಳು 15 ಖಾಸಗಿ ಪ್ರೌಢ ಶಾಲೆಗಳು, 22 ಅನುದಾನ ರಹಿತ ಪ್ರೌಢ ಶಾಲೆಗಳು ನಡೆಯುತ್ತಲಿವೆ. ತಾಲ್ಲೂಕಿನಲ್ಲಿ 5 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿವೆ. ಒಂದು ಸರ್ಕಾರಿ ಡಿಗ್ರಿ ಕಾಲೇಜು, 5 ಅನುದಾನಿತ ಖಾಸಗಿ ಪ.ಪೂರ್ವ ಕಾಲೇಜುಗಳಿವೆ. 6 ಅನುದಾನ ರಹಿತ ಖಾಸಗಿ ಪದವಿ ಪೂರ್ವ ಕಾಲೇಜು, ಎರಡು ಡಿಗ್ರಿ ಕಾಲೇಜುಗಳಿವೆ ಒಂದು ಅನುದಾನಿತರ ಒಂದು ಅನುದಾನರಹಿತ ಡಿಗ್ರಿ ಕಾಲೇಜು ನಡೆಯುತ್ತಲಿವೆ. ಮಹಿಳೆಯರಿಗಾಗಿಯೇ ಪ್ರತ್ಯೇಕ ಶಿಕ್ಷಣದ ದೃಷ್ಟಿಯಿಂದ ಅಕ್ಕಮಹಾದೇವಿ ಪ್ರೌಢ, ಪ.ಪೂರ್ವ ಕಾಲೇಜು ನಡೆಯುತ್ತಲ್ಲಿವೆ. ಅಲ್ಲದೇ ವೃತ್ತಿ ಶಿಕ್ಷಣ ತರಬೇತಿ ಕಂಪ್ಯೂಟರ ಶಿಕ್ಷಣವನ್ನು ಬೋಧಿಸುವ ಸೌಲಭ್ಯಗಳು ಇವೆ. ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಶಾಂತಿವರ್ಧಕ ಶಿಕ್ಷಣ ಸಂಶ್ಥೆ ಈ ತಾಲ್ಲೂಕಿನ ಪ್ರತಿಷ್ಠಿತ ಸಂಸ್ಥೆಯಾಗಿದ್ದು, ಗ್ರಾಮೀಣ ಇಂಜಿನಿಯರಿಂಗ್ ಮಹಾವಿದ್ಯಾಲಯ, ಚನ್ನಬಸವೇಶ್ವರ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಮಹಾವಿದ್ಯಾಲಯ, ಅಕ್ಕಮಹಾದೇವಿ ಪ.ಪೂ.ಕಾಲೇಜು, ಪಾಲಿಟೆಕ್ನಿಕ, ಐ.ಟಿ.ಐ. ಮತ್ತು ಪ್ರಾಥಮಿಕ ಪ್ರೌಢ ಶಾಲೆಗಳನ್ನು ಭಾಲ್ಕಿಯಲ್ಲಿ ನಡೆಯುತ್ತಿವೆ. ಅಲ್ಲದೆ ಈ ಸಂಸ್ಥೆಯ ಅಧಿನದಲ್ಲಿ ಕಮಲನಗರ ಮತ್ತು ಬೀದರದಲ್ಲಿಯು ಶಾಲಾ ಕಾಲೇಜುಗಳಿವೆ. ಕಿಸಾನ ಪ್ರಸಾರಕ ಮಂಡಳದ ವತಿಯಿಂದ ಶಿವಾಜಿ ಪ್ರಾಥಮಿಕ ಶಾಲೆ, ಪ್ರೌಢ ಶಾಲೆ ಪ.ಪೂ ಮತ್ತು ಪದವಿ ಕಾಲೇಜುಗಳು ಇಲ್ಲಿವೆ. ಸತ್ಯನಿಕೇತನ ವಿದ್ಯಾ ಸಂಸ್ಥೆಯಿಂದಲೂ ಪ್ರಾಥಮಿಕದಿಂದ ಪ್ರೌಢ, ಕಾಲೇಜು ಶಿಕ್ಷಣದ ವರೆಗೆ ವಿದ್ಯಾ ಕೇಂದ್ರಗಳಿವೆ. ವಿಶ್ವಹಿಂದು ಪರಿಷತ ಸಂಚಾಲಿತ ಖಡಕೇಶ್ವರ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿವೆ.

ಹಿರೇಮಠ ಸಂಸ್ಥಾನ ವಿದ್ಯಾಪೀಠದ (ಟ್ರಸ್ಟ) ಸಂಚಾಲನೆಯಲ್ಲಿ ಹತ್ತಕ್ಕೂ ಅಧಿಕ ಶಾಲಾ ಕಾಲೇಜುಗಳು ನಡೆಯುತ್ತಿವೆ. ಶ್ರೀ ಚನ್ನಬಸವೇಶ್ವರ ಗುರುಕುಲ ವಸತಿ ಶಾಲೆ ರಾಜ್ಯಕ್ಕೆ ಒಂದು ಮಾದರಿಯಾದ ಶಾಲೆಯಾಗಿದ್ದು ಇಲ್ಲಿ ಮಕ್ಕಳ ಸರ್ವಾಂಗೀಣ ವಿಕಾಸಕ್ಕಾಗಿ ಧಾರ್ಮಿಕ, ನೈತಿಕ ಅಧ್ಯಾತ್ಮಿಕ, ಯೋಗ, ಮುಂತಾದ ಶಿಕ್ಷಣ ನೀಡಲಾಗುತ್ತಿದೆ. ಇನ್ನೂ ಹಲವಾರು ಖಾಸಗಿ ವಿದ್ಯಾ ಸಂಸ್ಥೆಗಳು ಇಲ್ಲಿ ಶಿಕ್ಷಣ ಪ್ರಸಾರದ ಕೆಲಸ ಮಾಡುತ್ತಿವೆ. ಭಾಲ್ಕಿಯ ಹಿರೇಮಠ ಸಂಸ್ಥಾನದಲ್ಲಿ ಸಂಗೀತ ಶಾಲೆ ಇದೆ. ಗಂಜ ಭಾಗದಲ್ಲಿ ಸರಸ್ವತಿ ಸಂಗೀತ ವಿದ್ಯಾಲಯ ಡಾ: ಚನ್ನಬಸವ ಪಟ್ಟದೇವರು ಚಿತ್ರಕಲಾ ಮಹಾವಿದ್ಯಾಲಯಗಳು ಇವೆ. ಭಾರತೀಯ ಬೌದ್ಧ ಮಹಾಸಭಾ ಸಂಸ್ಥೆಯ ಅಧಿನದಲ್ಲಿ ಕರುಣಾ ಬೌದ್ಧ ವಿಹಾರ ಭಾಲ್ಕಿಯಲ್ಲಿ ನಾಲಂದಾ ಪ್ರಾಥಮಿಕ ಶಾಲೆ ನಡೆಯುತ್ತಿದೆ. ಅಲ್ಲದೆ ಬೌದ್ಧ ಧರ್ಮದ ತತ್ವಗಳನ್ನು ಪ್ರಚಾರ ಮತ್ತು ಪ್ರಸಾರ ಮಾಡುತ್ತಿದ್ದಾರೆ. ಈ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಸಹ ಶಾಲಾ ಕಾಲೇಜು ನಡೆಸುತ್ತಲ್ಲಿದ್ದಾರೆ, ಗೌತಮ ಬುದ್ಧ ಶಿಕ್ಷಣ ಸಂಸ್ಥೆಯ ಅಧಿನದಲ್ಲಿ ಮಿಲಿಂದ ಪ್ರಾಥಮಿಕ ಶಾಲೆ ಬೋಳೆಗಾಂವ ಸಿದ್ಧಾರ್ಥ ಹಿರಿಯ

ಪ್ರಾಥಮಿಕ ಶಾಲೆ ಧನ್ನೂರಾ (ಎಸ್), ಸರ್ವೋದಯ ಶಿಕ್ಷಣ ಸಂಸ್ಥೆ ಅಧಿನದಲ್ಲಿ ವಿದ್ಯಾಭಾರತಿ ಪ್ರಾಥಮಿಕ ಶಾಲೆ ದಾಡಗಿ ಹಾಗೂ ವಿದ್ಯಾಭಾರತಿ ಪ್ರಾಥಮಿಕ ಶಾಲೆ ಬಾಳೂರ ನಡೆಯುತ್ತಲಿವೆ, ರಾಹುಲ ಶಿಕ್ಷಣ ಸಂಸ್ಥೆ ಅಧಿನದಲ್ಲಿ ಬುದ್ದಪ್ರಿಯಾ ಪ್ರಾಥಮಿಕ ಮತ್ತು ಪ್ರೌಢ ಶಾಲೆ ಮದಕಟ್ಟಿ ಗ್ರಾಮದಲ್ಲಿ ನಡೆಯುತ್ತಲ್ಲಿವೆ, ಪಂಚಶೀಲ ಶಿಕ್ಷಣ ಸಂಸ್ಥೆ ಅಧಿನದಲ್ಲಿ ಪಂಚಶೀಲ ಪ್ರಾಥಮಿಕ ಸಂಗಮೇಶ್ವರ ಪ್ರೌಢ ಶಾಲೆ ಕೇಸರ ಜವಳಗಾ ಹಾಗೂ ಅಂಜಲಿ ನರ್ಸಿಂಗ ಹೋಂ, ಸಿದ್ದಾರ್ಥ ಬಿ.ಇಡ್. ತರಬೇತಿ ಕಾಲೇಜು ನಡೆಯುತ್ತಲಿವೆ. ಹೀಗೆ ಅನೇಕ ಸಮುದಾಯದವರು ಶಿಕ್ಷಣ ಸಂಸ್ಥೆ ತೆರೆದು ಶಾಲಾ ಕಾಲೇಜು ಇತ್ಯಾದಿ ತರಬೇತಿ ಕೇಂದ್ರಗಳು ನಡೆಸುತ್ತಲ್ಲಿದ್ದಾರೆ. ಡಿ.ಪಿ.ಇ.ಪಿ. ಹಾಗೂ ಸರ್ವ ಶಿಕ್ಷಣ ಅಭಿಯಾನ ಯೋಜನೆಯ ಮೂಲಕ ಕ್ಷೇತ್ರ ಸಂಪನ್ಮೂಲ ಕಛೇರಿಗಳ ಬಿ.ಆರ್.ಸಿ. ಮತ್ತು ಸಿ.ಆರ್.ಸಿ. ಹಾಗೂ ಸಮನ್ವಯಾಧಿಕಾರಿಗಳ ನೇತೃತ್ವದಲ್ಲಿ ಶಿಕ್ಷಕರಿಗೆ ಹಲವಾರು ಕಲಿಕಾ ತರಬೇತಿಗಳನ್ನು ನೀಡಲಾಗುತ್ತಿದೆ. ಇದರಿಂದ ಶಿಕ್ಷಣದ ಅಡಿಪಾಯವಾದ ಪ್ರಾಥಮಿಕ ಶಿಕ್ಷಣದ ಗುಣಮಟ್ಟ ಸುಧಾರಣೆಯಾಗುತ್ತಿದೆ. ಈಗ ಎಸ್.ಎಸ್.ಎ (ಸರ್ವ ಶಿಕ್ಷಣ ಅಭಿಯಾನ) ಎಂಬ ನೂತನ ಶೈಕ್ಷಣೀಕ ಕಾರ್ಯಕ್ರಮ ಜಾರಿಗೆ ತರಲಾಗಿದೆ. ಖಾಸಗಿ ಸಂಸ್ಥೆಗಳಿಂದ ಬೆರಳಚ್ಚು ಮತ್ತು ಕಂಪ್ಯೂಟರ ಶಿಕ್ಷಣ ಕೇಂದ್ರಗಳು ಇಲ್ಲಿ ನಿರ್ವಹಿಸುತ್ತಿವೆ.

**ಹುಮನಾಬಾದ ತಾಲ್ಲೂಕು ಪರಿಚಯ:-**

ಬೀದರ ಜಿಲ್ಲೆಯಲ್ಲಿ ಹುಮನಾಬಾದ ಒಂದು ತಾಲ್ಲೂಕು ಕೇಂದ್ರವಾಗಿದ್ದೂ, ಈ ತಾಲ್ಲೂಕು ಕುರಿತು ಮಿತ್ರರಾದ ಶ್ರೀ ಎಚ್. ಕಾಶಿನಾಥ ರೆಡ್ಡಿ ಅವರು ಈ ರೀತಿ ಬರೆದಿದ್ದಾರೆ. ಕರ್ನಾಟಕದ ಉತ್ತರ ದಕ್ಕಿನಲ್ಲಿರುವ ಬೀದರ ಜಿಲ್ಲೆ ಕನ್ನಡಮ್ಮನ ಮುಕುಟವಾಗಿ ಕಂಗೋಳಿಸುತ್ತಿದೆ. ಈ ಜಿಲ್ಲೆಯ ಒಂದು ತಾಲ್ಲೂಕವೇ, ಹುಮನಾಬಾದ, ಈ ನಗರಕ್ಕೆ ಪೂರ್ವದಲ್ಲಿ ಜಯಸಿಂಹ ನಗರವೆಂದು ಕರೆಯುತ್ತಿದ್ದರು. ಮುಸ್ಲಿಂ ಆಡಳಿತದಲ್ಲಿ ಹುಮನಾಬಾದ ಹೆಸರು ಸ್ಥಿರವಾಗಿ ಉಳಿಯಿತು. ಇದೊಂದು ಐತಿಹಾಸಿಕ ಪಟ್ಟಣವಾಗಿದ್ದು, ಬೀದರ ಗುಲಬರ್ಗಾಗಳ ಮಧ್ಯದಲ್ಲಿ ಬರುತ್ತದೆ. ಈ ನಗರದ ಮುಖಾಂತರವೇ ರಾಷ್ಟ್ರೀಯ ಹೆದ್ದಾರೆ 9 ಹಾಯ್ದು ಹೋಗುತ್ತದೆ. ಇದು ಮುಂಬೈಯಿಂದ-ಹೈದ್ರಾಬಾದಕ್ಕೆ ಸಂಪರ್ಕ ಕಲ್ಪಿಸುತ್ತದೆ.

ಈ ಭೂಮಿಗೆ ಧರಿನಾಡು ಎಂದು ಕರೆಯುತ್ತಾರೆ. ಕೆಂಪು ಮಣ್ಣಿನಿಂದ ಕೂಡಿದ ತಂಪು ಪ್ರದೇಶ ಇದಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ಕಾಯಕ ಮಾಡಿದ ಪುಣ್ಯ ಭೂಮಿ ಪಾವನನಾಡು ಇದಾಗಿದೆ. ಚಾಲುಕ್ಯ 6ನೇ ವಿಕ್ರಮಾದಿತ್ಯ ನಂತಹ ವೀರಾಧಿ ವೀರರು ರಾಜ್ಯವಾಳಿದ ನೆಲದಲ್ಲಿ ವಡ್ಡಾರಾಧನೆ ಮಿತಾಕ್ಷರಗಳಂತಹ ಗ್ರಂಥಗಳು ರಚನೆಗೊಂಡು ಸಾಹಿತ್ಯ ಜ್ಯೋತಿ ಇಲ್ಲಿ ಪ್ರಜ್ವಲಿಸಿತು. ವಿಶ್ವ ಸಾಹಿತ್ಯಕ್ಕೆ ವಚನ ಸಾಹಿತ್ಯವೆಂಬ ಅತ್ಯಮೂಲ್ಯ ಕಾಣಿಕ ನೀಡಿದ ಪವಿತ್ರ ಭೂಮಿ ಈ ನಮ್ಮ ಬೀದರ ಜಿಲ್ಲೆ.

**ಶಿಕ್ಷಣ ಪ್ರಗತಿ:-**

ಶಿಕ್ಷಣದ ಪ್ರಗತಿಯಲ್ಲಿ ರಾಜ್ಯದ ಇನ್ನೂಳಿದ ಭಾಗಗಳಿಗಿಂತ ಈ ಭಾಗ ತುಂಬಾ ಹಿಂದುಳಿದಿದ್ದು, ನಿಜಾಮರ ಆಡಳಿತದಲ್ಲಿ ಶಿಕ್ಷಣ ಮಾಧ್ಯಮ ಉರ್ದು ಭಾಷೆಯಾಗಿತ್ತು. ಶಿಕ್ಷಣದ ಮಾಧ್ಯಮ ಉರ್ದುವಾದರೂ ಮನೆ ಮಾತು ಕನ್ನಡವಾಗಿತ್ತು. 1859ರಲ್ಲಿ ಆರಂಭವಾದ ನಿಜಾಮರ ಶಿಕ್ಷಣ ಖಾತೆಯು ಸುಮಾರು 90 ವರ್ಷಗಳವರೆಗೆ ಕಾರ್ಯನಿರ್ವಹಿಸಿತು. ಇಲ್ಲಿ ಶಿಕ್ಷಿತರಾದವರು ಹೆಚ್ಚಾಗಿ ಉರ್ದು ಬಲ್ಲವರೇ ಕಾಣಸಿಗುತ್ತಾರೆ.

ಜೊತೆಗೆ ಫರ್ಷಿಯನ್ ಭಾಷೆಯು ಕೂಡ ಚಲಾವಣೆಯಲ್ಲಿತ್ತು. ಮುಂದೆ ಇಂಗ್ಲೀಷರ ಕಾಲದಲ್ಲಿ ಶಿಕ್ಷಣದಲ್ಲಿ ಇಂಗ್ಲೀಷ ಭಾಷೆ ಕಲಿಯಲು ಅನುವು ದೊರೆಯಿತು. 1956 ರಲ್ಲಿ ಭಾಷಾವಾರು ಪ್ರಾಂತಳು ರಚನೆಯಾದ ಮೇಲೆ ಪ್ರತಿಯೊಂದು ರಾಜ್ಯದಲ್ಲಿ ಆಯಾ ಜನರು ಆಡುವ ಭಾಷೆ ಅಲ್ಲಿಯ ಆಡಳಿತ ಭಾಷೆಯಾಯಿತು. ಹೀಗಾಗಿ ಕರ್ನಾಟಕದಲ್ಲಿ ಕನ್ನಡವು ಶಿಕ್ಷಣದ ಅಧಿಕೃತ ಭಾಷೆಯಾಗಿ ಹಳ್ಳಿ ಹಳ್ಳಿಗೆ ಕನ್ನಡ ಶಾಲೆಗಳು ಪ್ರಾರಂಭವಾದವು.

ಈಗ ಹುಮನಾಬಾದ ತಾಲ್ಲೂಕಿನಲ್ಲಿ 10 ಶಿಶು ವಿಹಾರಗಳು, 211 ಅಂಗನವಾಡಿಗಳು, 33 ಕಿರಿಯ ಪ್ರಾಥಮಿಕ ಶಾಲೆಗಳು, 142 ಹಿರಿಯ ಪ್ರಾಥಮಿಕ ಶಾಲೆಗಳು, 31 ಪ್ರೌಢ ಶಾಲೆಗಳು ಇವೆ. ಹುಮನಾಬಾದ ನಗರದಲ್ಲಿ 2, ಚಿಟಗುಪ್ಪಾದಲ್ಲಿ 2, ದುಬಲಗುಂಡಿ, ಬೆಮಲ ಖೇಡಾ, ತಾಳಮಡಗಿ, ಹಳ್ಳಿಖೇಡ (ಬಿ), ಮನ್ನಾಎಖೇಳ್ಳೀ, ನಿರ್ಣಗಳಲ್ಲಿ ತಲಾ ಒಂದರಂತೆ ಸುಮಾರು 11 ಕಿರಿಯ ಮಹಾವಿದ್ಯಾಲಯಗಳು ಹಾಗೂ ಹುಮನಾಬಾದ ಪಟ್ಟಣದಲ್ಲಿ ಶ್ರೀ ವೀರಭದ್ರೇಶ್ವರ ಶಿಕ್ಷಣ ಸಂಸ್ಥೆಯ ದಿಕ್ಷಾ ಭೂಮಿ ಶಿಕ್ಷಣ ಸಂಸ್ಥೆಯ ಮಹಾವಿದ್ಯಾಲಯಗಳು, ಚಿಟಗುಪ್ಪಾದಲ್ಲಿ ಕರ್ನಾಟಕ ಶಿಕ್ಷಣ ಸಂಸ್ಥೆಯ ಹಿರಿಯ ಮಹಾವಿದ್ಯಾಲಯ ಪ್ರಾರಂಬವಾಗಿ ಉಚ್ಚಮಟ್ಟದ ಶಿಕ್ಷಣ ನೀಡುತ್ತಿವೆ. ಡಾ: ಸರ್ವಪಲ್ಲಿ ರಾಧಾಕೃಷ್ಣ ಸಂಸ್ಥೆ ಅಡಿಯಲ್ಲಿ ಪ್ರಾಥಮಿಕ, ಪ್ರೌಢ, ಡಿ.ಎಡ್, ಸಿ.ಪಿ.ಎಡ್, ಬಿ.ಪಿ.ಎಡ್ ಇತ್ಯಾದಿ ಶಾಲಾ ಕಾಲೇಜು ಶ್ರೀ ಲಕ್ಷ್ಮಣರಾವ ಬುಳ್ಳಾರವರ ಅಧ್ಯಕ್ಷತೆಯಲ್ಲಿ ನಡೆದಿವೆ ಅಲ್ಲದೇ ಶ್ರೀ ಭರತ ರತ್ನಾಕರ ಅವರ ಅಧ್ಯಕ್ಷತೆಯಲ್ಲಿ ಬಳವಂತರಾವ ವರಾಳೆ ಶಿಕ್ಷಣ ಸಂಸ್ಥೆ ಅಧಿನದಲ್ಲಿ ಪ್ರಾಥಮಿಕ, ಪ್ರೌಢ, ಶಾಲೆ ಕಾಲೇಜು ನಡೆಯುತ್ತಲಿವೆ. ಶ್ರೀ ಶರಣಪ್ಪಾ ಪ್ರೀಯಾರವರ ಅಧ್ಯಕ್ಷತೆಯಲ್ಲಿ ಚಂದ್ರಶೇಖರ ಶಿಕ್ಷಣ ಸಂಸ್ಥೆ ಅಡಿಯಲ್ಲಿ ಪ್ರಾಥಮಿಕ, ಪ್ರೌಢ ಶಾಲಾ ಕಾಲೇಜು ಡಿಗ್ರಿ ಕಾಲೇಜು ನಡೆಯುತ್ತಲಿವೆ. ಶ್ರೀ ಬಸವರಾಜ ಪಾಟಿಲ ಹುಮನಾಬಾದ ಶಾಸಕರು ಹಾಗೂ ಮಾಜಿ ಮಂತ್ರಿಗಳು ಸಹ ತಾಲ್ಲೂಕಿನಲ್ಲಿ ಶಾಲಾ ಕಾಲೇಜು ನಡೆಸಿ ಉತ್ತಮ ಶಿಕ್ಷಣ ನೀಡುತ್ತಿದ್ದಾರೆ.

ಇಷ್ಟೆಲ್ಲಾ ಶಾಲಾ ಕಾಲೇಜುಗಳು ಇದ್ದರು ಕೂಡಾ ಶಿಕ್ಷಣದ ಪ್ರಸಾರ ಭರದಿಂದ ನಡೆದರೂ ಕೂಡಾ ಸಾಕ್ಷರತೆಯ ಪ್ರಮಾಣ ಮಂದಗತಿಯಲ್ಲಿಯೇ ಇದೆ. ತಾಲ್ಲೂಕಿನಾದ್ಯಂತ ಸಾಕ್ಷರತೆಯ ಕೇಂದ್ರಗಳು ಪ್ರಾರಂಭಿಸಿ ಜನರಲ್ಲಿ ವಿದ್ಯಯ ಬಗ್ಗೆ ನವಚೇತನ ಮೂಡಿಸಿವೆ. ಅನೇಕರನ್ನು ನವ ಸಾಕ್ಷರರನ್ನಾಗಿ ಪರಿವರ್ತಿಸುವ ಕಾರ್ಯ ಭರದಿಂದ ಸಾಗಿದೆ. ಹಿಂದುಳಿದ ಜಾತಿ ಜನಾಂಗದವರಿಂದಲೆ ಹಲವಾರು ಶಾಲಾ ಕಾಲೇಜುಗಳು ಪ್ರಾರಂಭವಾಗಿವೆ. ಈ ಹಿನ್ನಲೆಯಲ್ಲಿ ಹುಮನಾಬಾದ ಹಾಗೂ ಹಳ್ಳಿಖೇಡ (ಬಿ) ಗಳಲ್ಲಿ ಡಾ: ಬಿ.ಆರ್.ಅಂಬೇಡ್ಕರ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ.

ಮಹಿಳೆಯರ ಶಿಕ್ಷಣ ಪ್ರಗತಿಗಾಗಿ ಪ್ರತೇಕವಾದ ಶಾಲಾ ಕಾಲೇಜುಗಳು ಈ ತಾಲ್ಲೂಕಿನಲ್ಲಿವೆ. ಹುಮನಾಬಾದ ನಗರದಲ್ಲಿ 2 ಪ್ರೌಢ ಶಾಲೆಗಳು ಹಾಗೂ ಒಂದು ಕಿರಿಯ ಕಾಲೇಜು ಇದೆ. ಚಿಟಗುಪ್ಪಾದಲ್ಲಿ ಒಂದು ಪ್ರೌಢ ಶಾಲೆಯಿದೆ. ಇದರಿಂದ ಮಹಿಳೆಯರ ಸಾಕ್ಷರತಾ ಪ್ರಮಾಣ ಅಭಿವೃದ್ದಿ ಸಾದಿಸುತ್ತಿದೆ. ಮಾಣಿಕ ನಗರದಲ್ಲಿ ಹಿಂದಿ ಪ್ರೌಢ ಶಾಲೆ, ಘಾಟಬೋರಾಳದಲ್ಲಿ ಮರಾಠಿ ಪ್ರೌಢ ಶಾಲೆ, ಹುಮನಾಬಾದ ಹಾಗೂ ಚಿಟಗುಪ್ಪಾದಲ್ಲಿ ಉರ್ದು ಪ್ರೌಢ ಶಾಲೆಗಳು ಪ್ರಾರಂಭವಾಗಿದ್ದು, ಕನ್ನಡ ಭಾಷೆಯ ಜೊತೆಗ ಹಿಂದಿ, ಮರಾಠಿ ಹಾಗೂ ಉರ್ದು ಭಾಷೆಗಳ ಬೆಳವಣಿಗೆ ಸಾಧಿಸುತ್ತಿವೆ. ಮಾಣಿಕನಗರ ಹಾಗೂ ಹುಮನಾಬಾದ ನಗರದಲ್ಲಿ ಇಂಗ್ಲೀಷ ಮಾದ್ಯಮದ ಕಿರಿಯ ಕಾಲೇಜು ಪ್ರಾರಂಭವಾಗಿದೆ. ಇದಲ್ಲದೆ ಹುಮನಾಬಾದ ನಗರದಲ್ಲಿ ತರಬೇತಿ

ಕೇಂದ್ರವೂ ಕೂಡ ನಡೆಯುತ್ತವೆ. 2001ರ ಜನಗಣತಿಯ ಪ್ರಕಾರ ಹುಮನಾಬಾದ ತಾಲ್ಲೂಕಿನ ಸಾಕ್ಷರತೆಯ ಪ್ರಮಾಣ ಒಟ್ಟು ಶೇಕಡಾ 62% ಇದೆ. ಇದರಲ್ಲಿ ಗಂಡಸರದು ಶೇಕಡ 36% ಇದ್ದರೆ ಹೆಂಗಸರದ್ದು ಶೇಕಡಾ 26% ಪ್ರಮಾಣದಲ್ಲಿದೆ.

**ಔರಾದ ತಾಲ್ಲೂಕು ಪರಿಚಯ:-**

ಬೀದರ ಜಿಲ್ಲೆಯಲ್ಲಿ ಔರಾದ ಒಂದು ತಾಲ್ಲೂಕು ಕೇಂದ್ರವಾಗಿದೆ. ಈ ತಾಲ್ಲೂಕಿನ ಕುರಿತು ಮಿತ್ರರಾದ ಪ್ರೋ. ಬಾಬುರಾವ ವಡ್ಡೆಯವರ ಹೇಳಿಕಯ ಪ್ರಕಾರ ಔರಾದ ತಾಲ್ಲೂಕು ಸರ್ವಾಂಗೀಣ ಬೆಳವಣಿಗೆಯಲ್ಲಿ ಇದೀಗ ಅಡಿಯಿಡುತ್ತಿರುವ ತಾಲ್ಲೂಕು. ಇದು ಕರ್ನಾಟಕದ ಕೀರಿಟ ಪ್ರಾಯವಾದ ಬೀದರ ಜಿಲ್ಲೆಯ ಕೀರಿಟದಲ್ಲಿ ಜಡೆದ ವಜ್ರದಂತಿದೆ. ಕನ್ನಡ ಮಾತೆಯ ಮುಖ್ಯ ಅಂಗವಾಗಿದೆ. ಭೂಮಿಯ ಗುಣದಂತೆ ಜನಾಂಗವು ಹಳೆ ಬೇರು ಹೊಸ ಚಿಗುರಿನಂತೆ ವೈವಿಧ್ಯಮಯವಾಗಿದೆ. ರಾಜಧಾನಿಯಿಂದ ಈ ತಾಲ್ಲೂಕು ಉತ್ತರಕ್ಕೆ ಸುಮಾರು 42 ಕಿ.ಮಿ. ದೂರದಲ್ಲಿದೆ. ಈ ತಾಲ್ಲೂಕಿನ ಆಕೃತಿಯ ಪಶ್ಚಿಮಕ್ಕೆ ಓಡುತ್ತಿರುವ ಮೊಲದ ಆಕೃತಿಯಾಗಿದೆ. ಈ ರಚನೆ ಪ್ರಗತಿ ದ್ಯೋತಕವಾಗಿದೆ ಎನ್ನಲು ಅಡ್ಡಿ.

ಭಾಷಾವಾರು ಪ್ರಾಂತಗಳಾದ ನಂತರ ಇಲ್ಲಿಯ ಕನ್ನಡದ ಚೈತನ್ಯ ಪುಟಿದಿದ್ದು ಔರಾದ ತಾಲ್ಲೂಕು ಮುಖ್ಯ ಕೇಂದ್ರ ಸ್ಥಳವಾಗಿ ತನ್ನತನವನ್ನು ಕಾಪಾಡಿಕೊಂಡಿದೆ. ಈ ತಾಲ್ಲೂಕು ಉತ್ತರ ಪಶ್ಚಿಮಕ್ಕೆ ಮಹಾರಾಷ್ಟ್ರದ ಮೇರೆ ಪಡೆದಿದೆ. ಪೂರ್ವಕ್ಕೆ ಆಂಧ್ರಪ್ರದೇಶವಿದ್ದು, ದಕ್ಷಿಣಕ್ಕೆ ಭಾಲ್ಕಿ ಮತ್ತು ಬೀದರ ತಾಲ್ಲೂಕುಗಳು ಮಾಂಜರಾ ನದಿಯ ದಂಡೆಯಿಂದ ಬೇರ್ಪಟ್ಟು ರಚನೆಯಾಗಿದೆ. ಈ ತಾಲ್ಲೂಕು ಸಮುದ್ರ ಮಟ್ಟದಿಂದ 674 ಮೀಟರ ಎತ್ತದಲ್ಲಿದೆ, ಪೂರ್ವಕ್ಕೆ ಸ್ವಲ್ಪ ಇಳಿಜಾರಾಗಿದೆ, ಇದು ಪೂರ್ವ ರೇಖಾಂಶ 77.2 ರಿಂದ 77.7 ರವರೆಗೆ ಸರಿಯಾದ ಹಾಗೂ ಉತ್ತರ ಅಕ್ಷಾಂಶ 18 ರಿಂದ 18.5 ರವರೆಗೆ ಇರುತ್ತದೆ. ಇಲ್ಲಿಯ ಹವಾಗುಣ ಬೀದರ ಜಿಲ್ಲೆಯ ಉತ್ತಮ ಹವಾಗುಣಕ್ಕೆ ಸಮಾನಾಗಿದ್ದು, ಇಲ್ಲಿ ಹರಿಯುವ ಮುಖ್ಯ ನದಿಗಳು ಮಾಂಜರಾ, ದೇವಣಿ ಚಿಕ್ಕ ಹಳ್ಳ, ಹೆಬ್ಬಾಳ, ಬಾದಲಗಾಂವ ನಾಲೆ, ಮುಂತಾದವುಗಳು ಇಲ್ಲಿ ಕಪ್ಪು ಎರೆ ಭೂಮಿ ಹೆಚ್ಚಾಗಿದೆ. ಮುಂಗಾರು, ಹಿಂಗಾರು ಬೆಳೆಗಳನ್ನು ಬೆಳೆಸಲು ಉತ್ತಮವಾಗಿದೆ. ಅರ್ಧದಷ್ಟು ಭೂಮಿಯ ಮುಂಗಾರು ಬೆಳೆ ಬೆಳೆಸಲು ಉತ್ತಮವಾಗಿದೆ.

ಇತ್ತಿತ್ತಲಾಗಿ ಸರಕಾರ ನಿರ್ಮಿಸಿದ ಕೆರೆಗಳ ಸಂಖ್ಯೆಯಲ್ಲಿ 20ಕ್ಕೂ ಮೇಲ್ಪಟ್ಟಿರುತ್ತದೆ. ಇದರಿಂದ ಹಾಗೂ ನದಿ ದಂಡೆಗಳಿಂದ ಸ್ವಲ್ಪ ಭಾಗವನ್ನು ನೀರಾವರಿ ಮಾಡಿಕೊಂಡು ತಾಲ್ಲುಕಿನ ಅಭಿವೃದ್ಧಿ ಹೆಚ್ಚಾಗಿದೆ, ತಾಲ್ಲೂಕಿನ ವ್ಯವಸಾಯ ಪ್ರದೇಶದಲ್ಲಿ ಎಲ್ಲಾ ಪ್ರಕಾರದ ಧಾನ್ಯಗಳು ಚೆನ್ನಾಗಿ ಬಿತ್ತಿ ಬೆಳೆ ತೆಗೆದುಕೊಳ್ಳಲು ಬರುತ್ತದೆ. ಇಲ್ಲಿ ಜೋಳ, ಹತ್ತಿ, ನೆಲಗಡಲೆ, ಎಣ್ಣಿ ಕಾಳುಗಳು, ಬೇಳೆಕಾಳು ಹೇರಳವಾಗಿ ಬೆಳೆಯುತ್ತವೆ.

ಇಲ್ಲಿ ಜಿಲ್ಲಾ ಪ್ರಮಾಣದಲ್ಲಿ ಮಳೆಯ ಪ್ರಮಾಣವು ಸಮಸಮವಾಗಿ ಅಂದರೆ 200 ಮಿಲಿ ಲೀಟರಿನಿಂದ 350 ಮಿಲಿ ಲೀಟರವರೆಗೆ ವರ್ಷಕ್ಕೊಮ್ಮೆ ಇಲ್ಲಿ ಒಕ್ಕಲಿಗ ಉತ್ತಮವಾದ ಫಸಲನ್ನು ಬೆಳೆದುಕೊಳ್ಳುತ್ತಾನೆ. ಒಂದು ವರ್ಷ ಅತೀವೃಷ್ಟಿಯಿಂದ ಇನ್ನೊಂದು ವರ್ಷ ಅನಾವೃಷ್ಟಿಯಿಂದ ಬವಣೆ ಪಡಬೇಕಾಗುತ್ತದೆ. ಈ ವಿಷಯ ದೂರ ಮಾಡಲು ಸರಕಾರ ಈ ತಾಲ್ಲೂಕಿನ ನೀರಾವರಿ ಯೋಜನೆಗಾಗಿ ಪ್ರಥಮ ಪ್ರಾಶಸ್ತ್ಯ ಕೊಟ್ಟರೆ ಒಳ್ಳೆಯ ಧರ್ಮ ಕಾರ್ಯವಾಗುತ್ತದೆ. ಇದರಿಂದ ಇಲ್ಲಿಯ ಮೂಲ

ಉದ್ಯೋಗವಾದ ವ್ಯವಸಾಯದ ಬೇರೆ ಗೃಹ ಕೈಗಾರಿಕೆಗಳು ಉರ್ಜಿತಗೊಂಡರೆ ನಾಡಿಗೆ ಉತ್ತಮ ಎಂದು ತೋರಿಸಿ ಕೊಡಬಲ್ಲರು. ಭೌಗೋಳಿಕವಾಗಿ ಇನ್ನೊಂದು ವಿಷಯ ಇದು ಕರಿ ಕಲ್ಲಿನ ನೆಲವಾಗಿದ್ದು ತಪ್ಪಲು ಪ್ರದೇಶದ ಸನ್ನಿವೇಶ ಪಡೆದಿದೆ. ಇಲ್ಲಿ ಕೆಲವು ಕಡೆ ಸಾಧಾರಣ ಅರಣ್ಯ ಪ್ರದೇಶವಿದೆ. ಇಲ್ಲಿ ಚಿಕ್ಕ ಪುಟ್ಟ ಕಾಡು ಪ್ರಾಣಿಗಳಿವೆ. ಹುಣಸೆ, ಮಾವು, ಬೇವು, ಅಪ್ಪಿ, ತಂಪು ಮರಗಳು ಬೆಳೆಯುತ್ತವೆ. ಅಲ್ಲದೆ ಈಗಿನ ಅರಣ್ಯ ಇಲಾಖೆಯವರು ನಿಲಗೀರಿ, ಅಶೋಕ, ಸುಬಾಬಲು, ಮರಗಳನ್ನು ಪಾಳು ಭೂಮಿ ಮೊರಡಿ ಪ್ರದೇಶಗಳಲ್ಲಿ ನೆಟ್ಟಿದ್ದಾರೆ ಆದ್ದರಿಂದ ಪಾಳುಬಿದ್ದ ಪ್ರದೇಶಗಳು ಹಸುರುಡಿಗೆ ತೊಟ್ಟಂತೆ ಭೂತಾಯಿ ಕಾಣುತ್ತಿದ್ದಾಳೆ. ಇಲ್ಲಿಯ ಹವಾಗುಣವಾದ ಉಷ್ಣದಿಂದ ಕೂಡಿದೆ. ಜೂನ್ ತಿಂಗಳಲ್ಲಿ ಮಾನ್ಸೂನ್ ಗಾಳಿಯಿಂದ ಮುಂಗಾರು ಬಿತ್ತನೆ ಪ್ರಾರಂಭವಾಗುತ್ತದೆ. ಅಕ್ಟೋಬರ್ ಮಧ್ಯದಲ್ಲಿ ಮಳೆಬೀಳುತ್ತದೆ. ಅಕ್ಟೋಬರ್ ಮಧ್ಯದಿಂದ ಜನವರಿ ಮುಗಿಯುವವರೆಗೆ ಚಳಿಗಾಲ ಇರುತ್ತದೆ. ಡಿಸೆಂಬರನಲ್ಲಿ ಸ್ವಲ್ಪ ಚಳಿ ಹೆಚ್ಚಾಗಿರುತ್ತದೆ ಬೇಸಿಗೆ ಮಾರ್ಚದಿಂದ ಮೇ ವರೆಗೆ ಸೆಕೆ ಇರುತ್ತದೆ.

ಸುಮಾರು 40 ರಿಂದ 45 ಸೆಲ್ಸಿಯಸ್‌ವರೆಗೆ ಉಷ್ಣತೆ ಕಾಣುತ್ತದೆ. ತಾಲ್ಲೂಕಿನ ವಿಸ್ತೀರ್ಣ 1220.06 ಚ.ಕಿ.ಮೀ ಇದ್ದು 1981 ರ ಜನಗಣತಿ ಪ್ರಕಾರ ಜನಸಂಖ್ಯೆ 173789 ಇರುತ್ತದೆ. ಪ್ರತಿ ಚ.ಕಿ.ಮಿ.ಗೆ ಜನ ಸಾಂದ್ರತೆ 142 ಇರುತ್ತದೆ ಇವರು ವ್ಯವಸಾಯದೊಂದಿಗೆ ಪಶು ಸಂಗೋಪನವನ್ನು ಮುಖ್ಯವಾಗಿಟ್ಟುಕೊಂಡಿದ್ದಾರೆ, ಇಲ್ಲಿಯ ಪಶುಗಳು ದೇವಣಿ ತಳಿಗಳೆಂದು ಪ್ರಸಿದ್ಧವಾಗಿವೆ, ಅಲ್ಲದೇ ಮೈಮುರಿದು ದುಡಿಯುವ ಕಾಯಕದಲ್ಲೆ ಕೈಲಾಸ ಕಾಣುವ ಒಕ್ಕಲಿಗರು ಮೈಕಟ್ಟು ಮಸ್ತಾಗಿರುತ್ತದೆ. ಸದಾ ನಕ್ಕು ನಲಿಯಲು ಆದರಾತಿಥಕ್ಕೆ ಆದ್ಯತೆ ಕೊಡುವವರಾಗಿದ್ದಾರೆ.

**ಶಿಕ್ಷಣ:-**

ಔರಾದ ತಾಲ್ಲೂಕು ಸಾವಿರ ವರ್ಷಗಳಿಂದ ಯಾರ ತುಳಿತಕ್ಕೆ ಸಿಕ್ಕಿತೋ ಉರ್ದು, ಮರಾಠಿ, ಹಿಂದಿ ಭಾಷೆಗಳ ಪ್ರಭಾವದಿಂದ ಕನ್ನಡ ನೆಲಕ್ಕೆ ತುಳಿದು ದಬ್ಬಿತ್ತೋಗುತ್ತಿಲ್ಲ. ಆದರೆ ಚಪ್ಪಡಿಯ ಕೆಳಗಿನ ಮಾಲಿನ ಸಸಿ ಬೆಳೆದು ಹೆಮ್ಮರವಾಗ ಚಪ್ಪಡಿಯನ್ನೇ ಒಡದು ಹಾಕಿದ ಪಾರಂಪರತೆ ಎನ್ನುವ ಜಿ.ಎಸ್.ಶಿವರುದ್ರಪ್ಪ ನವರ ಮಾತಿನಂತೆ ಎಲ್ಲವನ್ನು ತುಳಿದು ಕನ್ನಡ ಮೇಲೆದ್ದು ಫಲ ಪುಷ್ಪಗಳು ಬೀಡುತ್ತಿರುವದು ಅತ್ಯಂತ ಹೆಮ್ಮೆಯ ಮಾತಿದು. ಈ ಹೆಮ್ಮೆಯ ಮಾತಿಗೆ ಒಂದು ಮಹತ್ತರವಾದ ಅಶೀರ್ವಾದ ತಪ್ಪಸ್ಸ ಇದರ ಹಿಂದೆ ಅಡಗಿದೆ. ಇಲ್ಲಿ ಶಿಕ್ಷಣರಂಗದ ಬಗೆ ಪದರುಗಳನ್ನು ಬಿಡಿಸಿದಾಗ ಮನದಟ್ಟಾಗುತ್ತದೆ. ರೋಮಾಂಚನವೂ ಆಗುತ್ತದೆ. ಔರಾದ ತಾಲ್ಲೂಕು ಶಿಕ್ಷಣ ಕ್ಷೇತ್ರದಲ್ಲಿ ಹಿಂದುಳಿದಿದೆ ಎಂಬುದು ನಿಜ ಆದರೂ ಬೇರೆ ಕ್ಷೇತ್ರದಂತೆ ಇದು ಕೂಡ ಚೇತರಿಸಿ ಸ್ವಪರಿಶ್ರಮದಿಂದ ಮುಂದೆ ಸಾಗಿದೆ ಎಂಬುದು ಅಷ್ಟೆ ನಿಜ ಸುಮಾರು 55 ವರ್ಷಗಳ ಹಿಂದೆ ಭಾಲ್ಕಿ ಪಟ್ಟಾಧ್ಯಕ್ಷರು ಆವಾಗ ನಿಜಾಮನ ಆಡಳಿತದಲ್ಲಿ ಈ ಆಂಧ್ರದಲ್ಲಿ ಸೇರಿಹೊದ ಮೋರಗಿ ಎಂಬ ಪ್ರಾಥಮಿಕ ಶಾಲೆ ಎಂಬ ಸಸಿಯನ್ನು ಬೆಳಸಿ ಹೊರಗೆ ಉರ್ದು ಬೋರ್ಡ ಹಾಕಿ ಒಳಗೆ ಕನ್ನಡ ಅಕ್ಷರಗಳು ಕಲಿಸುತ ಮಗುವಿಗೆ ಹಾಲುಣಿಸುವ ಕೆಲಸವಾಗುತ್ತಿತ್ತು. ಮುಂದೆ ರಜಾಕಾರ ಹಾವಳಿಯಲ್ಲಿ ಶಾಲೆಯನ್ನು ಸೋಲಾಪುರಕ್ಕೆ ಒಯ್ಯಲಾಯಿತು. ಅಪ್ಪಗಳವರ ಶಾಲೆಯ ಮಕ್ಕಳಿಗೆ ಊಟ, ವಸತಿ ನೀಡಿದ್ದು ಬಾಬಾ ಸಾಹೇಬವಾರದರು ಹಾಗೂ ಜಯದೇವಿ ತಾಯಿ ಲಿಗಾಡೆಯವರು ಆ ಸಸಿಯನ್ನು ಲಾತುರದಲ್ಲಿ ಸ್ವಲ್ಪ ದಿವಸ ಬೆಳೆಸಲಾಯಿತು.

ಅದರಲ್ಲಿ ಪ್ರಸಿದ್ಧ ಸಾಹಿತಿಗಳಾದ ಶಾಂತರಸ ಕವಿಗಳು ಒಂದು ಸಸಿಯಾಗಿದ್ದರು. ರಜಾಕಾರ ಮುಗಿದನಂತರ ಆ ಸಸಿಯನ್ನು ತಾಲ್ಲೂಕಿನ ಸಂಗಮ ಕ್ಷೇತ್ರದಲ್ಲಿ ನೆಟ್ಟರು ಅಲ್ಲಿ ಮಳೆಗಾಲದಲ್ಲಿ ನೀರಿನ ಭಯ ಹೆಚ್ಚಾಗಿದ್ದರಿಂದ ಕಮಲನಗರ ಸುರಕ್ಷಿತ ಸ್ಥಳವೆಂದು ಅನೇಕರ ಅಭಿಮತದಂತೆ ಸಸಿಯನ್ನು ಶಾಂತಿವರ್ಧಕ ನಾಮದಿಂದ ನೆಟ್ಟರು. ಅದು 1956ರಲ್ಲಿ ಸಸಿಯು ಔರಾದ ತಾಲ್ಲೂಕಿನ ಪ್ರಥಮ ಸಸಿಯಾಗಿ ಕನ್ನಡ ಮಾತೆಗೆ ಮಕ್ಕಳಾಗಲು ಅವಕಾಶ ಕೊಟ್ಟಿತ್ತು. ಭಾಷಾವಾರು ಪ್ರಾಂತ ರಚನೆಯಲ್ಲಿ ಉತ್ತರ ಕರ್ನಾಟಕದ ನಶಿಸುತ್ತಿರುವ ಭಾಗವನ್ನು ಕನ್ನಡ ಮಾತೆಯ ಉಡಿ ತುಂಬಿದ ಕೀರ್ತಿ ಭಾಲ್ಕಿ ಅಪ್ಪಗಳವರದ್ದಾಗಿದೆ. ಈಗ ಈ ಸಂಸ್ಥೆ ಕಮಲನಗರದಲ್ಲಿ ಕಿರಿಯ ಮಹಾವಿದ್ಯಾಲಯ, ಪದವಿ ಕಾಲೇಜು ಅಲ್ಲದೆ ಭಾಲ್ಕಿ ಬೀದರದಲ್ಲಿ ಪದವಿ ಕಾಲೇಜುಗಳು, ಗ್ರಾಮೀಣ ಇಂಜಿನೀಯರಿಂಗ ಕಾಲೇಜುಗಳಾಗಿ ಬೆಳೆದು ಹೆಮ್ಮರವಾಗಿದೆ. ಈ ಸಸಿಗೆ ಲೋಕನಾಯಕ ಶ್ರೀ ಭೀಮಣ್ಣ ಖಂಡ್ರೆಯವರ ಕಾರ್ಯ ಶ್ಲಾಘನೀಯ ಕನ್ನಡ ನಗರಕ್ಕೆ ಬರದಂತೆ ಪೂಜ್ಯ ಅಪ್ಪರಗಳವರು ಶ್ರೀ ಖಂಡ್ರೆ, ಪ್ರಭುರಾವ ವಕೀಲರು ಮುಂತಾದವರು ದುಡಿದಿದ್ದಾರೆ.

ಔರಾದ ತಾಲ್ಲೂಕಿಗೆ ಬಹು ಭಾಷೆ ನಾಡೆನ್ನಬಹುದು. ಇಲ್ಲಿ ಕನ್ನಡ, ಮರಾಠಿ, ಹಿಂದಿ, ತೆಲಗು, ಲಮಾಣಿ ಇತ್ಯಾದಿ ಭಾಷೆ ಮಾತಾಡುವವರಿದ್ದಾರೆ. ಆದರೂ ಇಂದು ಕನ್ನಡಕ್ಕೆ ಒಂದು ಒಳ್ಳೆಯ ರೂಪ ಬಂದತಾಗಿದೆ. ಔರಾದ ಪಟ್ಟಣದಲ್ಲಿ ಪ್ರೌಢ ಶಾಲೆಗಳಿವೆ. 1974 ರಲ್ಲೂ ಪದವಿ ಕಾಲೇಜು 1979ರಲ್ಲಿ ಸ್ಥಾಪನೆಯಾಗಿದೆ. ಪದವಿ ಹಾಗೂ ಕಿರಿಯ ಕಾಲೇಜುಗಳು ಒಳ್ಳೆಯ ರೀತಿಯಿಂದ ನಡೆದುದು ಹೆಮ್ಮೆಯ ವಿಷಯ. ಔರಾದ ಭಾಗ್ಯ ಶಿಲ್ಪಿ ಬಡವರ ಬಂಧು ಸಮಾಜ ಚಿಂತಕ ಮಹಾವ್ಯಕ್ತಿ ಶ್ರೀ ಕಾಶಿನಾಥರಾವ ಬೇಲೂರೆ ಇವರು ಪದವಿ ಕಾಲೇಜು, ಪದವಿಪೂರ್ವ ಕಾಲೇಜು, ಐ.ಟಿ.ಐ. ಕನ್ಯಾ ಪ್ರೌಢ ಶಾಲೆ, ಶ್ರೀ ಕೆ. ಪುಂಡಲಿಕರಾವ ಮಾಜಿ ವಿಧಾನ ಸಭಾ ಸದಸ್ಯರು ಪ್ರಾಥಮಿಕ, ಪ್ರೌಢ ಹಾಗೂ ಪ.ಪೂರ್ವ ಕಾಲೇಜು ಡಿ.ಎಡ್ ಕಾಲೇಜು ನಡೆಸುತಿಲ್ಲಿದ್ದಾರೆ. ಡೋಣಗಾಂವದಲ್ಲಿ ಪ್ರೌಢ ಶಾಲೆ ನಡೆಸುತ್ತ ಶಿಕ್ಷಣ ಪ್ರಸಾರಕ್ಕೆ ಅಧ್ಯತೆ ನೀಡಿದರು. ಹೀಗಾಗಿ ಇಲ್ಲಿಯ ಮಕ್ಕಳುಗಡಿನಾಡಾದ ಮಹಾರಾಷ್ಟ್ರಕ್ಕೆ ಅಭ್ಯಾಸಕ್ಕೆ ಹೋಗುವುದನ್ನು ತಪ್ಪಿಸಿ, ಭಾಷೆಯ ಅಡಚಣೆಯನ್ನು ಹೋಗಲಾಡಿಸಿ ಕನ್ನಡ ಉಸಿರಾಡುವಂತೆ ಮಾಡುವಲ್ಲಿ ಶ್ರಮಿಸುತ್ತಿದ್ದಾರೆ. ಶ್ರೀ ಕಾಶಿನಾಥರಾವ ಬೇಲೂರೆಯವರ ಅನುಪಮ ಸೇವೆ ಯಾರು ಮರೆಯುವಂತಿಲ್ಲ. ಈ ತಾಲ್ಲೂಕಿನ್ಲಿ ಒಟ್ಟು 194 ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳು, 32ಪ್ರೌಢ ಶಾಲೆಗಳು, 6 ಪದವಿ ಪೂರ್ವ ಕಾಲೇಜುಗಳು, ಪದವಿ ಕಾಲೇಜುಗಳು, 2 ತಾಂತ್ರಿಕ ಶಿಕ್ಷಣ ವಲಯಗಳು, 1 ಕೃಷಿ ಪಾಠ ಶಾಲೆಯು 100 ಅಂಗನವಾಡಿ ಕೇಂದ್ರಗಳು, 100 ಮಹಿಳಾ ವಯಸ್ಕರ ಶಿಕ್ಷಣ ಕೇಂದ್ರಗಳು ಇದ್ದು, ತಾಲ್ಲೂಕಿನ ಶೈಕ್ಷಣಿಕ ಎಳ್ಗೆಯಲ್ಲಿ ಸ್ಫೂರ್ತಿಯಾದ ಕಾರ್ಯ ನಿರ್ವಹಿಸುತ್ತಿದೆ.

ಇಲ್ಲಿ 25 ವರ್ಷಗಳ ಹಿಂದೆ ಶೇ. 5 ರ ಸಂಖ್ಯೆ ಇದ್ದಿಲ್ಲ. ಆದರೆ ಈಗ ಶೇಕಡಾ 65 ಶಿಕ್ಷಿತರ ಸಂಖ್ಯೆ ಯಾಗಿದ್ದಲ್ಲಿ ಅಕ್ಷರಸ್ಥರ ಹಿಂದೆ ಇಂಥ ಮರಾಠಿ, ಮೋಡಿ, ಉರ್ದು ಪ್ರಭಾವಕ್ಕೆ ಒಳಗಾದವರು ಮುಂಡಾಸಿಗಳೆನಿಸಿಕೊಳ್ಳುವ ಜನಾಂಗ ಕಡಿಮೆಯಾಗಿ ಅವೆಲ್ಲ ಭಾಷೆಗಳ ಕನ್ನಡ ರಿಕಾರ್ಡುಗಳ ಕನ್ನಡ ನಾಟಕಗಳು, ಕನ್ನಡ ಸಿನಿಮಾಗಳು ಅಭಿರುಚಿ ಮೈ ತುಂಬಿಕೊಂಡಿದೆ.

ತನ್ನ ತನವನ್ನು ಲೋಹ ಚುಂಬಕದಂತೆ ಇಟ್ಟುಕೊಂಡು ಕನ್ನಡ ನಾಡಿನ ವಚನ ಸಾಹಿತ್ಯದ ಮರದಡಿಯಲ್ಲಿಯೇ ಇದ್ದುದರಿಂದ ಮಾನವೀಯತೆಯ ಅಡಿಪಾಯದ ಮೇಲೆ ಇಲ್ಲಿಯ ಶಿಕ್ಷಣ ಸಮಾಜ

ನಿಂತಿವೆ. ಇಲ್ಲಿ ಶಿಕ್ಷಣ ಸಂಸ್ಥೆಗಳು ಸರಿಯಾಗಿ ಬೆಳೆದಂದಿನಿಂದ ಮುಖ್ಯ ಊರುಗಳಲ್ಲಿ ಪುಸ್ತಕ ಅಂಗಡಿಗಳು ಅನೇಕ ಕನ್ನಡ ಪತ್ರಿಕೆಗಳ ಎಜೆಂಟರೂ ಪತ್ರಿಕಾ ಮಾರಾಟಗಾರರು ಹುಟ್ಟಿಕೊಂಡಿದ್ದಾರೆ. ಔರಾದದಲ್ಲಿ ಶ್ರೀ ಕಾಶಿನಾಥಪ್ಪಾ ಸಿದಬಟ್ಟೆ ಇವರು 1958 ರಿಂದ ಪುಸ್ತಕದ ಅಂಗಡಿಯನ್ನಿಟ್ಟು, ಅಲ್ಲದೆ ಸಂಚಾರಿ ಅಂಗಡಿ ನಡೆಸಿಕೊಂಡು ಸಾವಿರಾರು ಕನ್ನಡವಲ್ಲದೆ ಎಲ್ಲಾರಂಗದ ಪುಸ್ತಕಗಳನ್ನು ಮಾರಾಟ ಮಾಡಿ. ಸಮಾಜದಲ್ಲಿ ಓದುವ ಹವ್ಯಾಸ ಹುಟ್ಟಿಸಿಕೊಂಡು ಬರುತ್ತಿದ್ದಾರೆ. ಅಲ್ಲದೆ ಇಲ್ಲಿ ದಿನ ಪತ್ರಿಕೆಗಳು ಮೊಟ್ಟ ಮೊದಲು ತರಿಸಿ ಜತೆಗೆ ಅದರ ಮಹತ್ವ ತೋರಿಸಿಕೊಟ್ಟವರು ಶ್ರೀ ಗುರುಸಿದ್ದಪ್ಪಾ ಮಸ್ಕಲ ಎನ್ನುವರು. 1967 ರಿಂದ ವಿದ್ಯುತ ಇಲಾಖೆಯಲ್ಲಿದ್ದುಕೊಂಡು ಪತ್ರಿಕಾ ಪ್ರಸಾರದಲ್ಲಿ ದೊಡ್ಡ ಜವಾಬ್ದಾರಿಯಂತೆ ಜನಮನ ತೊಳೆಯಲು ದುಡಿದಿದ್ದಾರೆ.

ಹೀಗಾಗಿ ಅನೇಕ ಸಾರಸ್ವತ ಲೋಕದ ವಿದ್ಯಾರ್ಥಿಗಳು ನೌಕರರು ಒಕ್ಕಲಿಗರು, ಪತ್ರಿಕೆಗಳಿಗಾಗಿ ಹತೊರೆಯುತ್ತಾರೆ. ವಿಜಯ ಕರ್ನಾಟಕ, ಲಂಕೇಶ, ತರಂಗ, ಉತ್ತರ ಕರ್ನಾಟಕ, ಸುಧಾ, ಕಸ್ತೂರಿ, ಮಯೂರ, ವಿಕ್ರಮ, ಬೀದರ ರಹಸ್ಯ, ಬೀದರ ಜಂಗ, ಯುವರಂಗ, ಸೀಮಾ ವಾರ್ತಾ, ಅಂತರಂಗ ಸುದ್ಧಿ, ವಚನ ಕ್ರಾಂತಿ, ಪಬ್ಲೀಕ, ಜನಪರ, ಕಾರಂಜಾ ಎಕ್ಸಪ್ರೆಸ್, ಪರಿಹಾರ ಮುಂತಾದ ಕನ್ನಡ ಪತ್ರಿಕೆಗಳು ನವಭಾರತ ಟೈಮ್ಸ, ಲೋಕಸತ್ತಾ, ಸಂಚಾರ, ಡೆಕ್ಕನ್ ಹೆರಾಲ್ಡ, ಹಿಂದೂ, ಇಂಡಿಯನ್ ಎಕ್ಸಪ್ರೆಸ್, ಶ್ರೀ ಲೋಕ ಪ್ರಭಾ, ಧಮನ, ಪ್ರಜಾ ಚಳುವಳಿ, ಔರಾದವಾಣಿ, ಕನ್ನಡ ಪ್ರಭ, ಬೀದರ ಕೀ ಆವಾಜ, ಸಿಯಾಸತ ಮುಂತಾದ ಅನ್ಯ ಭಾಷೆಯ ಪತ್ರಿಕೆಗಳು ದೊರೆಯುತ್ತವೆ. ಓದುವವರು ಜಾತಕ ಪಕ್ಷಿಯಂತೆ ಕಾಯುತ್ತಿರುತ್ತಾರೆ. ನಾಡಿನ ಹೊರನಾಡಿನ ವಿಶ್ವದ ಆಗು ಹೋಗುಗಳ ಚಿಂತನ ಒಂದು ಕುಟುಂಬದ ಚಿಂತನೆಯಂತೆ ಮಾಡುವ ಈ ತಾಲ್ಲೂಕಿನ ಜನತೆ ನಿಜವಾಗಿಯೂ ವಿಶಾಲ ಹೃದಯದವರು.

ಈಗಿನ ಕನ್ನಡ ಕ್ರಿಯಾ ಸಮಿತಿ, ಹಾಗೂ ತಾಲ್ಲೂಕು ಮಟ್ಟದ ಕನ್ನಡ ಸಾಹಿತ್ಯ ಪರಿಷತ್ತು ಶಿಕ್ಷಣ ಹಾಗೂ ಭಾಷೆಯ ಬೆಳವಣಿಗೆಯಲ್ಲಿ ಅನೇಕ ಅಶೋತ್ತರಗಳು ಇಟ್ಟು ಕೊಂಡು ಬೆಳೆಸುತ್ತಿವೆ. ಅದಕ್ಕಾಗಿ ರಾಜ್ಯದ ಕ.ಸಾ.ಪ. ಉತ್ತರದ ತುತ್ತತುದಿಗಿರುವ ಔರಾದ ತಾಲ್ಲೂಕು ಶರೀರದ ಮೆದುಳಿನಂತೆ ಎಂದು ಭಾವಿಷಿ ಸೈಕಲ್ ಮೋಟರ ಸವಾರನಿಗೆ ಹೆಲ್ಮೆಟ್ ಅವಶ್ಯಕತೆ ಇದ್ದಂತೆ ಇಲ್ಲಿ ನಾಲ್ಕೈದು ಉಚ್ಚಮಟ್ಟದ ವಾಚನಾಲಯಗಳು ಸ್ಥಾಪಿಸಲು ಔರಾದಲ್ಲಿ ಮಾತ್ರ ಕೇಂದ್ರಿಯ ವಾಚನಾಲಯದ ಶಾಕೆ ಕಾರ್ಯ ಮಾಡುತ್ತಿದೆ. ವಾಚನಾಲಯ ಹೊಬಳಿಗಳಿಗೊಂದರಂತೆ ಶಾಕಾ ವಾಚನಾಲಯಗಳು ಸ್ವಂತ ಆಸಕ್ತಿಯಿಂದ ಪ್ರಚೋದಿಸಿ ತಾಯಿ ಮಗುವಿಗೆ ಒತ್ತು ಹಾಲು ಕುಡಿಸಿದಂತೆ ಸ್ಥಾಪಿಸಿದರೆ ಕನ್ನಡ ಗಿಡ ತಾಲ್ಲುಕಿನಲ್ಲಿ ಬೆಳವಣಿಗೆಗೆ ಸಹಕಾರಿಯಾಗುತ್ತದೆ.

## ಬಸವಕಲ್ಯಾಣ ತಾಲ್ಲುಕ ಪರಿಚಯ:-

ಬಸವಕಲ್ಯಾಣವು ಕರ್ನಾಟಕದ ಉತ್ತರದ ತುತ್ತತುದಿಯಲ್ಲಿ ಬರುವ ಬೀದರ ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಒಂದು. ಇದು ತಾಲ್ಲೂಕು ಆಗಿದ್ದರೂ ಗತಕಾಲದಲ್ಲಿ ಇದೊಂದು ದೊಡ್ಡ ರಾಜಧಾನಿಯಾಗಿತ್ತು. ಶರಣರ ಸಂತರ ಯೋಗ ಭೂಮಿಯಾಗಿತ್ತು. ಕಲೆ ಸಾಹಿತ್ಯದ ತವರುಮನೆಯಾಗಿತ್ತು. ಆತ್ಮ ಕಲ್ಯಾಣ, ಸಮಾಜ ಕಲ್ಯಾಣ, ವಿಶ್ವ ಕಲ್ಯಾಣದ ಕೇಂದ್ರವಾಗಿತ್ತು. 13ನೇ ಶತಮಾನದಲ್ಲಿ ಸ್ಥಾಪಿತಗೊಂಡ ಖಿಲ್ಜಿ ಮನೆತನದ, ಮಹ್ಮದ ಬಿನ್ ತುಘಲಕನ ಕಾಲದ ಶಾಸನವೊಂದು ಕಲ್ಯಾಣದಲ್ಲಿ ಇತ್ತೀಚಿಗೆ ಸಿಕ್ಕಿದ್ದು, ಅದರಲ್ಲಿ ಕಲ್ಯಾಣವನ್ನು ಕಸಬಾ ಕಲ್ಯಾಣವೆಂದು ಗುರುತಿಸಲಾಗಿದೆ.

ಕಸಬಾ ಎಂದರೆ ಹೋಬಳಿ (ಹೋಬಳಿ ತಾಲ್ಲೂಕಾದ ಒಂದು ಭಾಗ) ಈ ಹೊತ್ತಿಗಾಗಲೆ ಕಲ್ಯಾಣವು ತನ್ನ ಮೊದಲಿನ ವೈಭವವನ್ನೆಲ್ಲಾ ಕಳೆದುಕೊಂಡು ಒಂದು ಹಳ್ಳಿಯ ಸ್ವರೂಪಕ್ಕು ಬಂದಿತೆಂದು ಗೊತ್ತಾಗುವುದು. ಚಾಳುಕ್ಯರ ಕಾಲದಲ್ಲಿ 5 ಲಕ್ಷಕ್ಕು ಹೆಚ್ಚಿನ ಜನಸಂಖ್ಯೆ ಕಳಚುರಿ ಕಾಲದಲ್ಲಿ ಅದು 8 ಲಕ್ಷದಿಂದ 10 ಲಕ್ಷದವರೆಗೆ ಜನಸಂಖ್ಯೆ ಹೊಂದಿತ್ತು. ಯೋಗದ ಭೂಮಿಯಾದ ಕಲ್ಯಾಣ ಭೋಗಿಗಳ ಕೈಯಲ್ಲಿಸಿಕ್ಕೂ ಜರ್ಜರಿತವಾಯಿತು ಎನ್ನಬಹುದು. ನಿಜಲಿಂಗಪ್ಪಾನವರು ಮುಖ್ಯ ಮಂತ್ರಿಗಳಾಗಿದ್ದಾಗ ಕಲ್ಯಾಣಕ್ಕೆ ವಿಶ್ವಗುರು ಬಸವಣ್ಣನವರ ಹೆಸರು ಜೊಡಿಸಿ ಬಸವಕಲ್ಯಾಣ ಎಂದು ಬದಲಾಯಿಸಲಾಯಿತು.

ಈ ಕಾರ್ಯವನ್ನು 1956ರಲ್ಲಿ ನವಾಬ ಜಮಲೋದ್ದಿನ್ ಕಾಲವಿತ್ತು. ಅದೇ ವರ್ಷ ಭಾಷೆಗಳ ಆಧಾರದ ಮೇಲೆ ಪ್ರಾಂತವನ್ನು ರಚಿಸಲಾಯಿತು. ಅದೇ ಸಂದರ್ಭದಲ್ಲಿ ಕಸಬ ಕಲ್ಯಾಣ ಹೆಸರಿನ ಬದಲಾಗಿದೆ ಬಸವಕಲ್ಯಾಣ ಎಂದು ನಾಮಕರಣ ಮಾಡಿದರು ಆ ಕೀರ್ತಿಯನ್ನು ದಿವಂಗತ ನಿಜಲಿಂಗಪ್ಪನವರಿಗೆ ಸಲ್ಲುತ್ತದೆ.

## ಅಧ್ಯಯ: 2 ಬೀದರ ಜಿಲ್ಲೆಯ ಶೈಕ್ಷಣಿಕ ಪರಂಪರೆ

ಬೀದರ ಜಿಲ್ಲೆಯು ಕರ್ನಾಟಕ ರಾಜ್ಯದ ಭೂಪಟದಲ್ಲಿ ಉತ್ತರ ದಿಕ್ಕಿನ ತುತ್ತ ತುದಿಯಲ್ಲಿ ಇದೆ. ಈ ಜಿಲ್ಲೆಯು ಹೈದ್ರಾಬಾದ ಕರ್ನಾಟಕದಲ್ಲಿ ಒಂದು ವಿಶಿಷ್ಟ ಜಿಲ್ಲೆ. ಇದರಲ್ಲಿ 5 ತಾಲ್ಲೂಕುಗಳು ಬರುತ್ತವೆ. ಬೀದರ, ಭಾಲ್ಕಿ, ಔರಾದ, ಹುಮನಾಬಾದ ಹಾಗೂ ಬಸವಕಲ್ಯಾಣ ತಾಲ್ಲೂಕು. ಹೀಗೆ ಈ 5 ತಾಲ್ಲೂಕುಗಳು ಆಯ್ಕೆ ಮಾಡಿಕೊಳ್ಳಲಾಗಿದೆ. ಈ 5 ತಾಲ್ಲೂಕುಗಳಲ್ಲಿನ ಶೈಕ್ಷಣಿಕ ಪರಂಪರೆ ಒಂದೇ ರೀತಿಯಾಗಿದ್ದರೂ ಸರ್ಕಾರಿ ಪ್ರಾಥಮಿಕ ಶಾಲೆಗಳು, ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆಗಳು ಹಾಗೂ ಅನುದಾನರಹಿತ ಪ್ರಾಥಮಿಕ ಶಾಲೆಗಳು ಅಂಕಿ ಸಂಖ್ಯೆ ವ್ಯತ್ಯಾಸವಿರುವುದು ಕಂಡು ಕೊಳ್ಳಲಾಗಿದೆ. ಆಯಾ ತಾಲ್ಲೂಕಿನಲ್ಲಿ ಶಿಕ್ಷಣದ ಗುಣಮಟ್ಟ ಶಾಲೆಗಾಗಿ ಬೇಕಾದ ಮೂಲಭೂತ ಸೌಲಭ್ಯ, ಶಿಕ್ಷಕರ ಸಂಖ್ಯೆ, ಮಕ್ಕಳ ಸಂಖ್ಯೆ, ವಿಭಿನ್ನ ರೀತಿಯಾಗಿದೆ, ಮಕ್ಕಳ ಕಲಿಕೆಯ ಪ್ರಮಾಣ ಹಾಜರಾತಿ ಇತ್ಯಾದಿ ಅಂಶಗಳನ್ನು ಬೇರೆ ಬೇರೆ ಯಾಗಿರುತ್ತವೆ.

ಜಿಲ್ಲೆಯಲ್ಲಿನ 5 ತಾಲ್ಲೂಕುಗಳಲ್ಲಿ ಮಾತನಾಡುವ ಭಾಷೆ ಸುಮಾರು ವರ್ಷದಿಂದ ಪರಂಪರೆಯಾಗಿ ಬೆಳೆದು ಬಂದಿದೆ. ಭಾಲ್ಕಿ, ಔರಾದ ಹಾಗೂ ಬಸವಕಲ್ಯಾಣ ತಾಲ್ಲೂಕಿನಲ್ಲಿ ಕೆಲವು ಗ್ರಾಮಗಳಲ್ಲಿ ಮನೆಯಲ್ಲಿ ಮರಾಠಿ ಭಾಷೆ ಮಾತೃ ಭಾಷೆಯಾಗಿದ್ದು, ಶಾಲೆಯಲ್ಲಿ ಕನ್ನಡ ಭಾಷೆ ಮಕ್ಕಳು ಕಲಿಯುತ್ತಾರೆ, ಕೆಲವು ಕುಟುಂಬಗಳಲ್ಲಿ ಕನ್ನಡ ಮಾತೃ ಭಾಷೆ ಇದ್ದು ಶಾಲೆಯಲ್ಲಿಯು ಕನ್ನಡ ಭಾಷೆ ಕಲಿಯುತ್ತಾರೆ. ಇನ್ನು ಕೆಲವು ಗ್ರಾಮಗಳಲ್ಲಿ ಉರ್ದು ಮಾತೃ ಭಾಷೆಯನ್ನಾಗಿ ಶಾಲೆಯಲ್ಲಿ ಕನ್ನಡ ಭಾಷೆಯಲ್ಲಿ ಓದು ಬರಹ ಕಲಿಯುತ್ತಾರೆ. ಕೆಲವು ಉರ್ದು ಮಾತೃ ಭಾಷೆಯಾಗಿದ್ದು, ಉರ್ದು, ಕನ್ನಡ ಹಾಗೂ ಮರಾಠಿಯಲ್ಲಿಯು ಓದು ಬರಹ ಕಲಿಯುತ್ತಾರೆ.

ಅದೇ ರೀತಿ ಬೀದರ ತಾಲ್ಲೂಕು ಮತ್ತು ಹುಮನಾಬಾದ ತಾಲ್ಲುಕಿನಲ್ಲಿ ಹಿಂದಿ, ತೆಲಗು, ಕನ್ನಡ, ಉರ್ದು ಭಾಷೆಯಲ್ಲಿ ಮಾತನಾಡುವ ಜನರಿದ್ದರೂ ಮನೆಯಲ್ಲಿ ಉರ್ದು, ತೆಲಗು ಮಾತನಾಡುತ್ತಾರೆ. ಶಾಲೆಯಲ್ಲಿ ಕನ್ನಡ ಭಾಷೆಯಲ್ಲಿ ಕಲಿಯುತ್ತಾರೆ. ಕೆಲವರು ತಮ್ಮದೆ ಆದ ಮಾತೃ ಭಾಷೆಯಲ್ಲಿಯೇ ಶಾಲೆ ಕಲಿಯುತ್ತಿದ್ದಾರೆ. ಹೀಗಾಗಿ ಬೀದರ ಜಿಲ್ಲೆಯ 5 ತಾಲ್ಲೂಕುಗಳಲ್ಲಿನ ಜನರು ಮಾತನಾಡುವ ಮಿಶ್ರ ಭಾಷೆಯಾಗಿದ್ದು ಚೌಚೌಭಾತದಂತೆ ಆಗಿರುವುದರಿಂದ ಈ ಜಿಲ್ಲೆಯ ಜನರು ಮಾತನಾಡುವ ಭಾಷೆ, ಬೇರೆ ಜಿಲ್ಲೆ ಅಂದರೆ ಬೆಂಗಳೂರು, ಮೈಸೂರು, ಮಂಡ್ಯ ಇತ್ಯಾದಿ ಕಡೆ ಜನರು ಮಾತನಾಡುವ ಭಾಷೆಯು ಹಾಗೂ ಮಾತನಾಡುವ ಶೈಲಿ ಶಬ್ದ ಬಳಕೆ ವಿಭಿನ್ನ ರೀತಿಯ ಅರ್ಥ ಕೊಡುವಂತಾಗಿದೆ.

### 1) ಬೀದರ ತಾಲ್ಲೂಕಿನ ಶೈಕ್ಷಣಿಕ ಪರಂಪರೆ

ಕರುನಾಡಿನ ಮುಕುಟವಾಗಿರುವ ಬೀದರ ತನ್ನದೆ ಆದ ಭವ್ಯ ಪರಂಪರೆ ಸಾಹಿತ್ಯ ಸಂಸ್ಕೃತಿ ಕಲೆ ಇತಿಹಾಸ ಗತ ವೈಭವದಿ ಜಗತ್ತಿಗೆ ಶತ ಶತಮಾನಳಿಂದ ಸುಗಂಧ ಸೂಸುತ್ತಿರುವುದು ಬೀದರಿನ ಹಿರಿಮೆಯಾಗಿದೆ. ಕರ್ನಾಟಕದಲ್ಲಿಯೆ ಭೂ ಪ್ರದೇಶ ಕಡಿಮೆಯುಳ್ಳದ್ದು, ಆದರೂ ಸರ್ವ ಧರ್ಮ ಸಮನ್ವಯ ಬಾಳ್ವೆಯ ನೆಲೆ ಬೀಡಾಗಿದೆ. ಕಾಲಾನುಕಾಲ ಗತಿಸಿದಂತೆ ನಮ್ಮ ನಾಗರಿಕತೆಯ ಸಾಹಿತ್ಯದ ಕಡೆಗೆ ಹೆಜ್ಜೆ ಹಾಕಿದಷ್ಟು ಹಿಂದುಳಿದ ಜಿಲ್ಲೆಯಾಗಿರುವುದು ಇಂದಿನ ರಾಜಕೀಯ ವ್ಯವಸ್ಥೆ ದುರಂತವಾದರು ಜಿಲ್ಲೆಯಲ್ಲಿಯೇ

ಬೀದರ ಜಿಲ್ಲಾ ಕೇಂದ್ರವಾಗಿರುವುದರಿಂದ ಇತರ ನಾಲ್ಕು ತಾಲ್ಲೂಕಗಳಿಗಿಂತ ಅಭಿವೃದ್ಧಿ ಹೊಂದಿದೆ. ತಾಲೂಕನೊಂದಿಗೆ ಹಿಂದೂ, ಮುಸ್ಲಿಂ ಸಾಂಸ್ಕೃತಿಕ ಭಾಂಧವ್ಯದ ಕೇಂದ್ರವಾದ ಬೀದರ ಕಲೆಯ ತವರೂರು ಅನೇಕ ಅರಸು ಮನೆತನಗಳ ರಾಜಧಾನಿಯಾಗಿ ಆರ್ಥಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ ರಂಗದಲ್ಲಿ ಜಗತ್ಪ್ರಸಿದ್ದಿಯನ್ನೂ ಗಳಿಸಿದ ಬೀದರ ನಿಜಾಮನ ಆಡಳಿತ ಕೊನೆಗೊಂಡ ನಂತರ ಕನ್ನಡ ನಾಡಿನ ಧಾರ್ಮಿಕ ಸಾಂಸ್ಕೃತಿಕ ಪರಂಪರೆಯನ್ನು ಇಂದಿಗೂ ಮುಂದುವರೆಸಿಕೊಂಡು ಬರುತ್ತಿರುವುದು ಜಿಲ್ಲೆಯ 5 ತಾಲ್ಲೂಕುಗಳಲ್ಲಿ ಮುಂದುವರೆದಿದೆ.

ಶ್ರೀ ಗುರುಲಿಂಗ ಧಬಾಲೆ ಕನ್ನಡ ಅಧ್ಯಾಪಕ ಸಿ.ಬಿ.ಖೇಡಗೆ ಬಸವೇಶ್ವರ ಮಹಾವಿದ್ಯಾಲಯ ಅಕ್ಕಲಕೋಟ ಜಿ: ಸೊಲ್ಲಾಪುರ ಇವರು ಬರೆದ "ಗಡಿನುಡಿಯ ಬೆಡಗು" ಪುಸ್ತಕದಲ್ಲಿ 'ಬೀದರ ಜಿಲ್ಲೆಯ ಪ್ರಾಚೀನ ಸಾಹಿತ್ಯ ಒಂದು ಪಕ್ಷಿ ನೋಟ' ಅಧ್ಯಯನದಲ್ಲಿ ಬೀದರ ಜಿಲ್ಲೆ ಭೌಗೋಳಿಕವಾಗಿ ಭಾರತದ ದಖ್ಖನ್ನಿನ ಮಧ್ಯಭಾಗದಲ್ಲಿದೆ. ಕರ್ನಾಟಕ ರಾಜ್ಯದ ಉತ್ತರ ತುದಿಯಲ್ಲಿದೆ. ಇಂದು ಬೀದರ, ಬಸವಕಲ್ಯಾಣ, ಹುಮನಾಬಾದ, ಭಾಲ್ಕಿ, ಔರಾದ ಎಂಬ ಐದು ತಾಲ್ಲೂಕುಗಳನ್ನು ಒಳಗೊಂಡಿರುವ ಅದು ಸುಮಾರು ಎರಡುವರೆ ಸಾವಿರ ವರ್ಷಗಳಿಂದ ಐತಿಹಾಸಿಕ ಹಿನ್ನಲೆ ಪಡೆದಿದೆ ನಂದ, ಮೌರ್ಯ, ಶಾತವಾಹನರು, ಚಾಲುಕ್ಯ, ರಾಷ್ಟ್ರಕೂಟ, ಕಳಚೂರಿ ಬಹಮನಿ, ಮೊಗಲ ನಿಜಾಮಶಾಹಿ ಈ ಮೊದಲಾದ ರಾಜಮನೆತನಗಳ ಅರಸರು ಬೀದರ ಪ್ರದೇಶವನ್ನು ಆಳಿದ್ದಾರೆ.

ಬೀದರ ಪ್ರದೇಶ ಪ್ರಾಚೀನ ಕಾಲದಿಂದಲೂ ಭಾಷಾ ಸಾಮರಸ್ಯವನ್ನು ಕಾಪಾಡಿಕೊಂಡು ಬಂದಿದೆ. ಕನ್ನಡದ ಜತೆಗೆ ಇಲ್ಲಿ ಸಂಸ್ಕೃತ, ಪ್ರಾಕೃತ, ಉರ್ದು, ಮರಾಠಿ, ಭಾಷೆಗಳೂ ಬೆಳೆದು ಬಂದಿದೆ. ಈ ಪ್ರದೇಶವನ್ನು ಆಳಿದ ಅರಸರು ಸ್ವಭಾಷೆಯೊಂದಿಗೆ ಪರಭಾಷೆಯನ್ನು ಆದರದಿಂದ ಕಾಣುತ್ತಿದ್ದರು. ಅವರಲ್ಲಿ ಅನೇಕರು ಸಾಹಿತ್ಯದ ಬಗ್ಗೆ ಉತ್ಕಟ್ಟವಾದ ಆಸಕ್ತಿಯುಳ್ಳವರಾಗಿದ್ದರು. ಹಲವು ಕವಿಗಳಿಗೆ ಅವರು ಆಶ್ರಯ ನೀಡಿದಲ್ಲದೆ, ಸ್ವತ ಕಾವ್ಯ ಬರೆಯುವಂಥ ಪ್ರತಿಭೆ ಹೊಂದಿದ್ದರು. ಹೀಗಾಗಿ ಇಲ್ಲಿ ಶತಮಾನಗಳಿಂದಲೂ ವಿವಿಧ ಭಾಷೆಗಳಲ್ಲಿ ಸಮೃದ್ಧವಾದ ಸಾಹಿತ್ಯ ಸೃಷ್ಟಿಯಾಗಿರುವುದನ್ನು ಕಾಣಬಹುದು.

***ಪ್ರಾಕೃತ – ಸಂಸ್ಕೃತ ಸಾಹಿತ್ಯ:–***

ಕ್ರಿ.ಶ. 1ನೇ ಶತಮಾನದಲ್ಲಿ ಬೀದರ ಜಿಲ್ಲೆ ಶಾತವಾಹನರ ಆಳ್ವಿಕೆಗೆ ಒಳಗಾಗಿತ್ತು. ಅಂದು ಇಲ್ಲಿ ಪ್ರಾಕೃತ ಹಾಗೂ ಸಂಸ್ಕೃತ ಭಾಷೆಯ ಪರಂಪರೆ ಸಾಹಿತ್ಯ ಸೃಷ್ಟಿಯಾಯಿತು. ಶಾತವಾಹನರ ಹಾಲನು ಕವಿ ಹಾಗೂ ಬರಹಗಾರನಾಗಿದ್ದು, ಗಾಥಾ ಸಪ್ತಸತಿ ಎಂಬ ಶೃಂಗಾರ ಕಾವ್ಯವನ್ನು ಪ್ರಾಕೃತ ಭಾಷೆಯಲ್ಲಿ ರಚಿಸಿದನು. ಶಾತವಾಹನರ ಕಾಲದ ಶರ್ವವರ್ಮನು ಸಂಸ್ಕೃತದಲ್ಲಿ ಕಾತಂತ್ರ ವ್ಯಾಕರಣ ಎಂಬ ವ್ಯಾಕರಣ ಕೃತಿಯನ್ನು ಬರೆದನು. ಮುಂದೆ ಕ್ರಿ.ಶ. 6ನೇ ಶತಮಾನದಲ್ಲಿ ನಂತರ ಈ ಜಿಲ್ಲೆಯಲ್ಲಿ ಪ್ರಾಕೃತ ಸಾಹಿತ್ಯ ಕುಂಠಿತಗೊಂಡು ಸಂಸ್ಕೃತ ಸಾಹಿತ್ಯಕ್ಕೆ ಹೆಚ್ಚಿನ ಪ್ರಾಧ್ಯನತೆ ದೊರೆಯಿತು.

ಕ್ರಿ.ಶ. 10 ಮತ್ತು 11ನೇ ಶತಮಾನಗಳ ಅವಧಿಯಲ್ಲಿ ಬೀದರ ಪ್ರದೇಶದ ಆಧಿಪತ್ಯವನ್ನು ಕಲ್ಯಾಣಿ ಚಾಲುಕ್ಯರು ಪಡೆದಿದ್ದರು. ಅವರ ಕಾಲದಲ್ಲಿ ಇಲ್ಲಿ ಅಪಾರವಾದ ಸಂಸ್ಕೃತ ಸಾಹಿತ್ಯ ನಿರ್ಮಾಣವಾಯಿತು. ಚಾಲುಕ್ಯ 3ನೇ ಸೋಮೇಶ್ವರ ಮಾನಸೋಲ್ಲಾಸ ಎಂಬ ಗ್ರಂಥವನ್ನು ಬರೆದರೆ ಅವನ ಮಗ ಎರಡನೇ

ಜಗದೇಕಮಲ್ಲನು ಸಂಗೀತ ಚೂಡಾಮಣಿ ಎಂಬ ಕೃತಿಯನ್ನು ಬರೆದನು ಅದೇ ರೀತಿ ಇದೇ ಕಾಲದಲ್ಲಿ ಚಾಲುಕ್ಯ 6ನೇ ವಿಕ್ರಮಾದಿತ್ಯನ ಆಶ್ರಯದ ಬಿಲ್ಲಣನು ವಿಕ್ರಮದೇವ ಚರಿತೆ ಮತ್ತು ಬಿಲ್ಹಣ ಕಾವ್ಯ. ಎಂಬ ಕಾವ್ಯಗಳನ್ನು ರಚಿಸಿದರೆ ಇದೇ ವಿಕ್ರಮಾದಿತ್ಯನ ಆಸ್ಥಾನದ ಇನ್ನೋರ್ವ ಕವಿ ವಿಜ್ಞಾನೇಶ್ವರನು ಮಿತಾಕ್ಷರ ಎಂಬ ಚಾರಿತ್ರಿಕ ಗ್ರಂಥವನ್ನು ರಚಿಸಿದನು. ಮಾತ್ರವಲ್ಲದೆ ವಾದಿರಾಜ, ರುದ್ರಭಟ್ಟರಂಥ ಸಂಸ್ಕೃತದ ಶ್ರೇಷ್ಠ ಕವಿಗಳೂ ಕೂಡ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿಯೇ ಇದ್ದರೆಂದು ತಿಳಿದುಬರುತ್ತದೆ. ಹೀಗೆ ಕ್ರಿ.ಶ.ದ ಆರಂಭದಿಂದ ಕ್ರಿ.ಶ. 6ನೇ ಶತಮಾನದವರೆಗೆ ಪ್ರಾಕೃತ ಮತ್ತು ಸಂಸ್ಕೃತ ಹಾಗೂ 11ನೇ ಶತಮಾನದವರೆಗೆ ಸಂಸ್ಕೃತ ಈ ರೀತಿಯಾಗಿ ಈ ಭಾಷೆಗಳ ಸಾಹಿತ್ಯ ಇಲ್ಲಿ ಆಸ್ತಿತ್ವದಲ್ಲಿತ್ತು ಎಂದು ಹೇಳಬಹುದು.

***ಕನ್ನಡ ಸಾಹಿತ್ಯ:***

ಕನ್ನಡ ಸಾಹಿತ್ಯ ಸೃಷ್ಟಿಯು ಬೀದರ ಜಿಲ್ಲೆಯಲ್ಲಿ ಕನ್ನಡ ಸಾಹಿತ್ಯದ ಆರಂಭ ಕಾಲದಿಂದಲೂ ನಡೆದಿದೆ ಕನ್ನಡ ಪ್ರಪ್ರಥಮ ಗದ್ಯಕೃತಿ 'ವಡ್ಡಾರಾಧನೆ'ಯು ಇದೇ ಜಿಲ್ಲೆಗೆ ಸೆರಿದ್ದಾಗಿದೆ. ಈ ಕೃತಿಯ ಗುರುದತ್ತ ಭಟಾರಕರ ಕಥೆಯಲ್ಲಿ ಮಳಯಖೇಡ ಎಂಬ ಊರುಗಳ ಹೆಸರು ಉಲ್ಲೇಖವಾಗಿದೆ. ಪಳ್ಳಿಖೇಡ ಎಂಬುದು ಪಕಾರಕ್ಕೆ ಹಕಾರವಾಗಿ ಹಳ್ಳಿಖೇಡ ಎಂದಾಗಿದೆ. ಬೀದರ ಜಿಲ್ಲೆಯಲ್ಲಿ ಹಳ್ಳೀಖೇಡ ಹೆಸರಿನ ಎರಡು ಗ್ರಾಮಗಳಿವೆ, ಇನ್ನು ಮಳಯಖೇಡ ಎಂಬುದು ರಾಷ್ಟ್ರಕೂಟರ ರಾಜಧಾನಿಯಾದ ಮನ್ಯಖೇಟ ಎಂಬುದ್ದಾಗಿದೆ. ಈ ಮಾನ್ಯಖೇಟವು ಇಂದು ಗುಲಬರ್ಗಾ ಜಿಲ್ಲೆಯಲ್ಲಿದ್ದು, ಅದು ಬೀದರ ಜಿಲ್ಲೆಗೆ ತುಂಬ ಹತ್ತಿರವಾಗುತ್ತದೆ. ಹೀಗಾಗಿ ವಡ್ಡಾರಾಧನೆಯು ರಾಷ್ಟ್ರಕೂಟರ ಕಾಲದಲ್ಲಿ ರಚನೆಯಾದ ಬೀದರ ಜಿಲ್ಲೆಯ ಕೊಡುಗೆಯಾಗಿದೆ.

ರಾಷ್ಟ್ರಕೂಟರ ನಂತರ ಈ ಜಿಲ್ಲೆಯನ್ನು ಆಳಿದ ಕಲ್ಯಾಣಿ ಚಾಲುಕ್ಯರಲ್ಲಿ ಹಲವರು ಸಾಹಿತಾಸಕ್ತರಾಗಿದ್ದರು. ಕನ್ನಡದ ಅನೇಕ ಕವಿಗಳಿಗೆ ಅವರು ಆಶ್ರಯ ನೀಡಿದರು. ಹೀಗಾಗಿ ಅವರ ಕಾಲದಲ್ಲಿ ಇಲ್ಲಿ ಕನ್ನಡದಲ್ಲಿ ಅಪಾರವಾದ ಸಾಹಿತ್ಯ ಸೃಷ್ಟಿಯಾಯಿತು. ಕವಿ ಚಕ್ರವರ್ತಿ ರನ್ನನ ಗದಾಯುದ್ಧ, ಅಜಿತನಾಥ ಪುರಾಣ, ಚಾವುಂಡರಾಯನ ಲೋಕೋಪಕಾರ, ಚಂದ್ರರಾಜನ ಚಂದ್ರೋರ್ಣವ, ದುರ್ಗಸಿಂಹನ ಪಂಚತಂತ್ರ, ಶ್ರೀಧರಾಚಾರ್ಯನ ಜಾತಕ ತಿಲಕ, ಚಂದ್ರ ಚುಡಾಮಣಿ ಶತಕ ಮೊದಲಾದ ಗ್ರಂಥಗಳು ಬೆಳಕು ಕಂಡು ಕನ್ನಡ ಸಾಹಿತ್ಯದ ಕಣಜ ತುಂಬಿದ್ದವು.

ಬೀದರ ಜಿಲ್ಲೆಯು ಕನ್ನಡ ಸಾಹಿತ್ಯದ ದೃಷ್ಟಿಯಿಂದ 12ನೇ ಶತಮಾನವು ಅತ್ಯಂತ ಗಮನಾರ್ಹವಾಗಿದೆ. ಈ ಕಾಲದಲ್ಲಿ ಕೇವಲ ಜಿಲ್ಲೆಗೆ, ರಾಜ್ಯಕ್ಕೆ, ದೇಶಕ್ಕೆ ಮಾತ್ರವಲ್ಲ ಇಡೀ ವಿಶ್ವಕ್ಕೆ ಕಾಣಿಕೆಯಾಗುವಂಥ ವಚನ ಸ್ವರವಚನ ಸಾಹಿತ್ಯ ಈ ಜಿಲ್ಲೆಯಲ್ಲಿ ನಿರ್ಮಾಣವಾಯಿತು. ಬಸವಣ್ಣ, ಅಲ್ಲಮಪ್ರಭು, ಸಿದ್ದರಾಮ, ಅಂಬಿಗರ ಚೌಡಯ್ಯ, ನುಲಿಯ ಚಂದಯ್ಯ, ಮಡಿವಾಳ ಮಾಚಿದೇವ, ಅಕ್ಕಮಹಾದೇವಿ, ಅಕ್ಕಮ್ಮ, ಆಯ್ದಕ್ಕಿ ಲಕ್ಕಮ್ಮ, ಕಾಳವ್ವೆ, ನಿಲಾಂಬಿಕೆ ಮೊದಲಾದ ಅಸಂಖ್ಯಾತ ಶರಣ ಶರಣೆಯರು ಅಂದು ಜಿಲ್ಲೆಯ ಬಸವಕಲ್ಯಾಣದಲ್ಲಿ ಒಗ್ಗೂಡಿದರು. ತಮ್ಮ ತಮ್ಮ ಶುದ್ಧ ಕಾಯಕಗಳ ಮೂಲಕ ಸಂತೃಪ್ತ ಜೀವನ ನಡೆಸಿದ ಪ್ರತಿಯೊಬ್ಬರೂ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ರಾಜಕೀಯ ವಿಷಯಗಳಲ್ಲದೆ ಜೀವ-ಶಿವ, ಅಂಗ-ಲಿಂಗ, ಅಜ್ಞಾನ-ಜ್ಞಾನ, ಬಂಧ-ಮೋಕ್ಷ, ಅಧರ್ಮ-ಧರ್ಮ, ಮಿಥ್ಯ-

ಸತ್ಯ, ಮಾಹೆ-ಹೆಣ್ಣು, ಮರ್ತ್ಯಲೋಕ-ದೇವಲೋಕ, ನರಕ-ಸ್ವರ್ಗ ಇತ್ಯಾದಿ ಅಧ್ಯಾತ್ಮಿಕ ಶಕ್ತಿಗೆ ಮುಖಾಮುಖಿಯಾಗಿ ಅವುಗಳನ್ನು ಕುರಿತು ಆಳವಾಗಿ ಚಿಂತಿಸಿದರು. ಚಿಂತನೆಯ ಫಲವಾಗಿ ಹೊರಹೊಮ್ಮಿದ ವಿಚಾರಗಳನ್ನು ಅವರು ಕಲ್ಯಾಣದ ಅನುಭವ ಮಂಟಪದಲ್ಲಿ ಶರಣರೆಲ್ಲರ ಸಮಕ್ಷಮದಲ್ಲಿ ಮಂಥನಕ್ಕೆ ಒಳಮಾಡಿದರು. ಅವರ ಈ ಗಾಢವಾದ ವಿಚಾರ ಮಂಥನದಿಂದಾಗಿ ಜ್ಞಾನ ಪ್ರಭೆಯೊಂದು ಹೊರ ಹೊಮ್ಮಿತು. ಈ ಜ್ಞಾನ ಪ್ರಭೆಯನ್ನು ಪ್ರತಿಬಿಂಬಿಸಿ ಅಪಾರವಾದ ವಚನ, ಸ್ವರವಚನ ಸಾಹಿತ್ಯ ನಿರ್ಮಾಣವಾಯಿತು.

ಹೊಲಸು ತಿನ್ನುವವನೆ ಹೊಲೆಯ

ಸತ್ಯ ನುಡಿಯುವದೇ ದೇವಲೋಕ

ದಯವೇ ಧರ್ಮದ ಮೂಲ

ನಾನೆಂಬುದೇ ಮಾಯಾಧೀನ

ತಾನರಿದ ಬಳಿಕ ಮತ್ತೇನೂ ಇಲ್ಲ ಇತ್ಯಾದಿ ಸರಳ ಸುಂದರವಾದ ಕನ್ನಡ ಭಾಷೆಯಲ್ಲಿ ರಚನೆಯಾದ ಶರಣರ ಈ ವಚನಗಳು ಬೀದರ ಜಿಲ್ಲೆಯು ಜಗತ್ತಿಗೆ ನೀಡಿದ ಅದ್ಭುತ ಕಾಣಿಕೆಗಳಾದವು.

ವಚನ ಸಾಹಿತ್ಯದ ನಂತರ ಸುಮಾರು 18ನೆಯ ಶತಮಾನದವರೆಗೆ ಈ ಜಿಲ್ಲೆಯಲ್ಲಿ ಕನ್ನಡದಲ್ಲಿ ಯಾವ ಕೃತಿಗಳು ರಚನೆಯಾಗಿಲ್ಲ 18 & 19ನೆಯ ಶತಮಾನಗಳ ಅವಧಿಯಲ್ಲಿ ಇಲ್ಲಿ ಶಿಷ್ಟ ಸಾಹಿತ್ಯದ ಬದಲಾಗಿ ಕನ್ನಡದಲ್ಲಿ ಅಪಾರವಾದ ಜನಪದ ಅನುಭವ ಸಾಹಿತ್ಯ ಸೃಷ್ಟಿಯಾಯಿತು. ಮರಕುಂದಿ ಬಸವಣಪ್ಪ, ಧುಮ್ಮನಸೂರಿನ ಸಿದ್ದಪ್ರಭು, ನಿಡವಂಚಿ ಭದ್ರೇಶ್ವರ, ಚಿಂಚೋಳಿಯ ಮಲ್ಲಿಕಾರ್ಜುನ ಚಾಮರೆಡ್ಡಿ, ಅಪ್ಪರಾವ ಕುಲಕರ್ಣಿ ಚಿಕ್ಕ ಆಲೂರಿನ ಮಡಿವಾಳಪ್ಪ ಕೆಂಚಾ, ಕೊಳ್ಳುರಿನ ಹುಸನಾ, ಭದ್ರಪ್ಪಗೌಡ ಮೊದಲಾದ ಜನಪದ ಅನುಭವಿ ಕವಿಗಳು 12ನೇಯ ಶತಮಾನದ ವಚನಕಾರರ ಜಾಡಿನಲ್ಲಿ ಅನೇಕ ಅನುಭವ ಗೀತೆಗಳನ್ನು ರಚಿಸಿದರು. ತತ್ವಪದ, ಭಜನೆಹಾಡು, ಮೊಹರಂ ಹಾಡು. ಭುಲಾಯಿ ಹಾಡು, ಕುಟ್ಟುವ-ಬೀಸುವ ಹಾಗು ಮೊದಲಾದ ಜಾನಪದ ಅನುಭಾವ ಗೀತೆಗಳಲ್ಲಿ ಅವರು ತಮ್ಮ ದಟ್ಟವಾದ ಅನುಭಾವ ಜ್ಞಾನವನ್ನು ತುಂಬಿ ಬೀದರ ಜಿಲ್ಲೆಯ ಅನುಭಾವ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು.

*ಫಾರ್ಸಿ-ಉರ್ದು ಸಾಹಿತ್ಯ:-*

ಬೀದರ ಜಿಲ್ಲೆಯು 14ನೇ ಶತಮಾನದ ಕಾಲಕ್ಕಾಗಲೇ ಮುಸ್ಲಿಂ ಅರಸರ ಆಳ್ವಿಕೆಗೆ ಒಳಗಾಗಿತ್ತು. ಕ್ರಿ.ಶ.14ನೇ ಶತಮಾನದಿಂದ ಕ್ರಿ.ಶ. 1948ರ ವರೆಗೆ ತುಘಲಕ್, ಮೊಗಲ, ಬಹಮನಿ, ನೈಜ್ಯಾಂಶಾಹಿ ಮೊದಲಾದ ಮುಸ್ಲಿಂ ಮನೆತನದ ಅರಸರು ಬೀದರ ಪ್ರದೇಶವನ್ನು ಆಳಿದರು. ಈ ಅರಸರಲ್ಲಿ ಅನೇಕರು ಕಲೆ ಸಾಹಿತ್ಯದ ಬಗ್ಗೆ ವಿಶೇಷ ಒಲವು ಉಳ್ಳವರಾಗಿದ್ದರು. ಅವರ ಕಾಲದಲ್ಲಿ ಇಲ್ಲಿ ಉರ್ದು ಹಾಗೂ ಫರ್ಶಿಯನ್ ಭಾಷೆಯಲ್ಲಿ ಅದ್ಭುತವಾದ ಸಾಹಿತ್ಯ ಸೃಷ್ಟಿಯಾಯಿತು. ಬಹಮನಿ ಸುಲ್ತಾನ ಅಹಮದ್‌ಷಾನ್ ಆಸ್ಥಾನದ ಪರ್ಶಿಯನ್ ಕವಿ ಅಧರಿ ಬಹಮನ್ ನಾಮಾ ಗ್ರಂಥವನ್ನು ರಚಿಸಿದನು ಇದೇ ಬಹಮನಿ ಮನೆತನದ ಮೂರನೇ ಮಹಮದ್‌ಷಾನ್ ಪ್ರಧಾನ ಮಂತ್ರಿ ಮಹಮ್ಮದ್ ಗವಾನನು ಉತ್ತಮ ಆಡಳಿತಗಾರ ಮಾತ್ರವಲ್ಲದೆ

ಕಲೆ ಶಿಕ್ಷಣಗಳಂತೆ ಸಾಹಿತ್ಯಾಸಕ್ತನೂ ಆಗಿದ್ದನು. ಅವನು ಅನೇಕ ಕವಿಗಳಿಗೆ ಆಶ್ರಯ ನೀಡಿದನು. ಅವನು ಕಟ್ಟಿಸಿದ ಮದ್ರಸಾ ಮಹಾವಿದ್ಯಾಲಯ ಇಂದಿಗೂ ಬೀದರದಲ್ಲಿದ್ದು, ಅದು ಆಗ 2000 ಹಸ್ತ ಪ್ರತಿಗಳ ಗ್ರಂಥಾಲಯವನ್ನು ಹೊಂದಿತ್ತು. ಬಹಮನಿ ಅರಸರ ಕಾಲಕ್ಕೆ ಬೀದರಕ್ಕೆ ಬಂದಿದ್ದ ಬಂದೇನವಾಜ ಮತ್ತು ಇನ್ನಿತರ ಸೂಫಿ ಸಂತರು ಇಲ್ಲಿ ಧಾರ್ಮಿಕ ಸಾಹಿತ್ಯವನ್ನು ನಿರ್ಮಾಣ ಮಾಡಿದರು. ಮುಂದೆ ಹೈದ್ರಾಬಾದ್ ನಿಜಾಮರ ಕಾಲದಲ್ಲಿ ಇದೇ ಉರ್ದು ಹಾಗೂ ಫರ್ಶಿಯನ್ ಭಾಷೆಗಳಲ್ಲಿ ಶೇರಷಾಯರ್ ಹಾಗೂ ಖವ್ವಾಲಿ ಪ್ರಕಾರಗಳ ಸಾಹಿತ್ಯ ಸೃಷ್ಟಿಯಾಯಿತು. ಬದುರ್, ದಿದ್, ನಾಜೀರ್, ಅಫಜಲ್, ಸದೆರ್, ಅನಸಾರಿ, ನಖೀ, ಜಮಾಲೋದ್ದಿನ್, ಖುರುಷಿದ್, ಅತಾಕಲಾದಣಿ ಮೊದಲಾದ ಕವಿಗಳು ಈ ಪ್ರಕಾರದ ಕಾವ್ಯಗಳನ್ನು ರಚಿಸಿದರು.

***ಮರಾಠಿ ಸಾಹಿತ್ಯ:-***

ಮರಾಠಿ ಸಾಹಿತ್ಯವು ಈ ಜಿಲ್ಲೆಯಲ್ಲಿ ಕ್ರಿ.ಶ. 16ನೇ ಶತಮಾನದಿಂದಲೂ ಅಸ್ತಿತ್ವದಲ್ಲಿದೆ. ಈ ಕಾಲದಲ್ಲಿ ಬಸವಕಲ್ಯಾಣದ ರಾಘವೇಂದ್ರ ಗುಡಿಯಲ್ಲಿ ವಾಸವಾಗಿದ್ದ. ಶಿವರಾಮ ಶಾಸ್ತ್ರಿಗಳು ಮರಾಠಿ ಭಾಷೆಯಲ್ಲಿ ಆಧ್ಯಾತ್ಮ, ರಾಮಾಯಣ, ಗೀತ ಚಂದ್ರಿಕಾ, ಗೀತಾಟೀಕೆ ಮೊದಲಾದ ಕೃತಿಗಳನ್ನು ಬರೆದರು. ಅನಂತರ ಮೃತ್ಯುಂಜಯ ಎಂಬ ಕವಿ ಇಲ್ಲಿಸಿದ್ದ ಸಂಕೇತ, ಅಮೃತಸಾರ, ಅದ್ವೈತ ಪ್ರಕಾಶ, ಪ್ರಕಾಶ ಭೋದೆ ಎಂಬ ಇತ್ಯಾದಿ ಕೃತಿಗಳನ್ನು ರಚಿಸಿದರು. ಮುಂದೆ 18 ಮತ್ತು 19ನೇ ಶತಮಾನದಲ್ಲಿ ಮಾಣಿಕ ಪ್ರಭುಗಳ ಮನೋಹರ ಪ್ರಭುಗಳು ಮರಾಠಿ ಭಾಷೆಯಲ್ಲಿ ಅನೇಕ ಭಕ್ತಿಗೀತೆಗಳನ್ನು ರಚಿಸಿದರು.

ಹೀಗೆ ಬೀದರ ಜಿಲ್ಲೆ ಭಾಷಾ ಸಮನ್ವಯತೆಯನ್ನು ಮೆರೆದು ಹಲವು ಭಾಷೆಗಳಲ್ಲಿ ಅದ್ಭುತ ಸಾಹಿತ್ಯ ಸೃಷ್ಟಿಗೈದು ಜಾಗತಿಕ ಕ್ಷೇತ್ರದಲ್ಲಿ ವಿಶಿಷ್ಟವಾದ ಸ್ಥಾನ ಪಡೆದಿದೆ.

***ಜಿಲ್ಲೆಯ ತತ್ವಪದಕಾರರು:-***

ಬೀದರ ಜಿಲ್ಲೆಯಲ್ಲಿ ಔರಾದ, ಬಸವಕಲ್ಯಾಣ, ಬೀದರ, ಭಾಲ್ಕಿ ಮತ್ತು ಹುಮನಾಬಾದ ಎಂಬ ಐದು ತಾಲ್ಲೂಕುಗಳನ್ನು ಒಳಗೊಂಡು ಭೌಗೋಳಿಕವಾಗಿ ಅದು ಭಾರತದ ದಕ್ಕನ್ನಿನ ಮಧ್ಯಭಾಗದಲ್ಲಿದೆ. ಕರ್ನಾಟಕ ರಾಜ್ಯದ ಉತ್ತರ ತುದಿಯಲ್ಲಿರುವ ಈ ಜಿಲ್ಲೆಯ ಮಹಾರಾಷ್ಟ್ರದ ಹಾಗೂ ಆಂದ್ರಪ್ರದೇಶ ರಾಜ್ಯಗಳಿಗೆ ಹೊಂದಿಕೊಂಡಿದೆ.

ಬೀದರ ಜಿಲ್ಲೆ ಇಂದು 'ಕಲ್ಯಾಣ ನಾಡು' ಎಂದು ಪ್ರಸಿದ್ಧವಾಗಿದೆ ಹಿಂದೆ ಕುಂತಳ ಪ್ರದೇಶ ಎಂದು ಕರೆಸಿಕೊಂಡಿದ್ದ ಈ ಜಿಲ್ಲೆಗೆ ಅನೇಕ ಶತಮಾನಗಳ ಇತಿಹಾಸವಿದೆ. ನಂದ, ಮೌರ್ಯ, ಶಾತವಾಹನ, ರಾಷ್ಟ್ರಕೂಟ, ಚಾಲುಕ್ಯ, ಕಳಚೂರಿ, ಯಾದವರು. ರಾಜ್ಯವನ್ನಾಳಿದ ಈ ಪ್ರದೇಶದಲ್ಲಿ ತುಘಲಖ್ ಬಹಮನಿ, ಬರೀದಶಾಹಿ, ಆದಿಲ್‌ಶಾಹಿ, ಮೊಗಲ್, ನಿಜಾಮಶಾಹಿ ಅರಸರೂ ಆಳ್ವಿಕೆ ನಡೆಸಿದ್ದಾರೆ. ಹೀಗೆ ವಿಭಿನ್ನ ಧರ್ಮ, ಭಾಷೆ ಹಾಗೂ ಬೇರೆ ಬೇರೆ ಭಾಗದ ಅರಸರು ಈ ಭಾಗವನ್ನು ಆಳಿದ್ದಾರೆ.

ಬೀದರ ಜಿಲ್ಲೆ ಸಾಂಸ್ಕೃತಿಕವಾಗಿಯೂ ಗಮನ ಸೆಳೆಯುವಂತಹದ್ದಾಗಿದೆ. ಇಲ್ಲಿ ಹಲವು ಧರ್ಮಗಳು ಬಾಳಿ ಬೆಳಗಿವೆ, ವಿವಿಧ ಕಲೆಗಳು ಅರಳಿವೆ, ಅನಂತ ಭಾಷೆಗಳು ಉಳಿದಿವೆ, ಅನುಭಾವಿಗಳು ಹಾಡಿದ್ದಾರೆ, ಶರಣರು ನುಡಿದಿದ್ದಾರೆ, ಕವಿಗಳು ಬರೆದಿದ್ದಾರೆ, ವೈವಿಧ್ಯತೆಯಿಂದೊಡಗೂಡಿದ ಅದ್ಭುತವಾದ ಸಾಹಿತ್ಯ ಇಲ್ಲಿ ಸೃಷ್ಟಿಯಾಗಿದೆ.

ಸಾಹಿತ್ಯಿಕವಾಗಿ ಬೀದರ ಜಿಲ್ಲೆಗೆ ರಾಜ್ಯ, ದೇಶದಲ್ಲೇಕೆ ಜಗತ್ತಿನಲ್ಲಿಯೇ ಅಗ್ರ ಗಣ್ಯ ಸ್ಥಾನವಿದೆ. 12ನೇ ಶತಮಾನದಲ್ಲಿ ಇಡಿ ವಿಶ್ವದ ಕಣ್ಣು ತೆರೆಸಿದ ವಚನ ಸಾಹಿತ್ಯ ಈ ಜಿಲ್ಲೆಗೆ ಬಹು ದೊಡ್ಡ ಕೊಡುಗೆ 10ನೇ ಶತಮಾನದ ಮಹಾಕವಿ ರನ್ನ ಕೂಡ ಒಂದು ದೃಷ್ಟಿಯಿಂದ ಇದೇ ಜಿಲ್ಲೆಗೆ ಸೇರಿದವನು ಕನ್ನಡದ ಪ್ರಪ್ರಥಮ ಗದ್ಯ ಎನಿಸಿದ "ವಡ್ಡಾರಾಧನೆ" ಈ ಜಿಲ್ಲೆಯ ಹಳ್ಳಿಖೇಡ ಗ್ರಾಮದಲ್ಲಿ ರಚನೆಯಾಗಿದೆ. ಸಂಸ್ಕೃತದಲ್ಲಿ ಮಿತಾಕ್ಷರ ಎಂಬ ನ್ಯಾಯ ಸಂಹಿತೆಯ ಗ್ರಂಥ ರಚಿಸಿದ ವಿಜ್ಞಾನೇಶ್ವರ ಬೀದರ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಮಾಸಿಮಾಡ ಗ್ರಾಮದವನು. ಅನೇಕ ಶತಮಾನಗಳವರೆಗೆ ಮುಸ್ಲಿಂ ಅರಸರ ಆಳ್ವಿಕೆಗೆ ಒಳಗಾಗಿದ್ದ ಈ ಪ್ರದೇಶ ಉರ್ದು ಭಾಷಾ ಸಾಹಿತ್ಯಕ್ಕೂ ಅಮೋಘವಾದ ಕಾಣಿಕೆ ನೀಡಿದೆ. ಬಹಮನಿ ಸುಲ್ತಾನ್ ಅಹ್ಮದ್‌ಷಾನ್ ಅಸ್ಥಾನ ಕವಿ "ಅಧರಿ" ಇಲ್ಲಿ ಬಹಮನ್ ನಾಮಾ ಎಂಬ ಗ್ರಂಥವನ್ನು ರಚಿಸಿದ. ಇದೇ ಬಹಮನಿ ಅರಸರ ಕಾಲದಲ್ಲಿ ಈ ಜಿಲ್ಲೆ ಶೇರ್‌ಶಾಹೇರ ಹಾಗೂ ಖವ್ವಾಲಿ ಪ್ರಕಾರಗಳ ಸಾಹಿತ್ಯದ ನಿರ್ಮಾಣಕ್ಕೆ ಕಾರಣವಾಹಿತು. 16ನೇ ಶತಮಾನದಲ್ಲಿ ಈ ಪ್ರದೇಶದಲ್ಲಿ ಮರಾಠಿ ಭಾಷೆಯ ಸಾಹಿತ್ಯವು ಹುಟ್ಟಿಕೊಂಡಿತು ಈ ಶತಮಾನದ ಶಿವರಾಮ ಸ್ವಾಮಿಗಳು ಬಸವಕಲ್ಯಾಣದಲ್ಲಿ ಅಧ್ಯಾತ್ಮ ರಾಮಾಯಣ, ಗೀತಾ ಚಂದ್ರಿಕೆ ಎಂಬ ಮೊದಲಾದ ಕೃತಿಗಳನ್ನು ಮರಾಠಿಯಲ್ಲಿ ಬರೆದರು. ಅನಂತರ ಇದೇ ಭಾಷೆಯಲ್ಲಿ ಮೃತ್ಯುಂಜಯ ಎಂಬ ಕವಿ ಇಲ್ಲಿ ಸಿದ್ದ ಸಂಕೇತ, ಅಮೃತಸಾರ, ಅದ್ವೈತ ಪ್ರಕಾಶ ಎಂಬ ಇತ್ಯಾದಿ ಕೃತಿಗಳನ್ನು ರಚಿಸಿದನು. ಹೀಗೆ ಬೀದರ ಜಿಲ್ಲೆಯ ಸಾಹಿತ್ಯದ ವಿವಿಧ ಭಾಷೆ ಸಂಸ್ಕೃತಗಳ ಅರ್ಥಪೂರ್ಣ ಸಮ್ಮಿಲನದ ಪರಂಪರೆಯಿಂದ ಕೂಡಿದೆ. ಪ್ರಸ್ತುತ ಅಧ್ಯಯನದ ತತ್ವ ಪದಕಾರರು ಇಂಥ ಒಂದು ಶ್ರೀಮಂತ ಪರಂಪರೆಯ ಪ್ರಮುಖ ಭಾಗವಾಗಿ ಗಮನ ಸೆಳೆಯುತ್ತಾರೆ.

ತತ್ವಪದ ಎಂಬುದು 9 ಧ್ವನಿ ಮೊತ್ತಗಳಿಂದ ಕೂಡಿದೆ 'ತತ್ವ' ಎಂಬುದಕ್ಕೆ ನಿಯಮ, ಸಿದ್ದಾಂತ, ನಿಜಸ್ಥಿತಿ, ಸ್ವರೂಪ, ಬ್ರಹ್ಮಜ್ಞಾನ, ಪರಮಾತ್ಮ ಎಂಬ ಇತ್ಯಾದಿ ಅರ್ಥಗಳಿದ್ದರೆ, ಪ್ರಸಂಗ, ಹದಗೊಂಡದ್ದು ಹಾಡು ಮೊದಲಾದ ಅರ್ಥಗಳು ಪದ ಎಂಬ ಶಬ್ದಕ್ಕಿವೆ. ಪರಮಾತ್ಮನ ಬಗ್ಗೆ ಇರುವ ಸಮಗ್ರ ಅನುಭವವನ್ನು ರಾಗಬದ್ದವಾಗಿ ಅಭಿವ್ಯಕ್ತಿಸುವ ಒಂದು ಪ್ರಕ್ರಿಯೆಗೆ ತತ್ವಪದ ಎಂದು ಕರೆಯುತ್ತಾರೆ.

ತತ್ವಪದಗಳು ಮಾನವನ ದೇಹವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆ ದೇಹದೊಳಗಿನ ಅರಿವಿನ ಮೂಲಭೂತ ತತ್ವಗಳನ್ನು ಅಧ್ಯಾತ್ಮಿಕ ವಿಚಾರಗಳನ್ನು ಸುಂದರವಾಗಿ ಸಾಂಕೇತಿಕ ನೆಲೆಯಲ್ಲಿ ನಿರೂಪಿಸುತ್ತವೆ. ಸ್ವರ ವಚನ, ಅನುಭಾವ ಪದ, ಕೈವಲ್ಯ ಪದ, ಭಜನೆ ಹಾಡು, ಧ್ಯಾಯದ ಪದ ಎಂದು ಬೇರೆ ಬೇರೆ ನಾಮಗಳಿಂದ ಅವು ಕರೆಸಿಕೊಳ್ಳುತ್ತವೆ. ಇಂಥ ತತ್ವಪದಗಳ ಕೃಷಿ ವಚನಗಳನ್ನು ಬರೆದ 12ನೇ ಶತಮಾನದ ವಚನಕಾರರಿಂದಲೇ ಪ್ರಾರಂಭವಾಯಿತಾದರೂ ಅವುಗಳಿಗೆ ನಿಜವಾದ ಅರ್ಥದಲ್ಲಿ ಒಂದು ಸುಭದ್ರವಾದ ತಳಹದಿಯನ್ನು ಒದಗಿಸಿದವರು 19ನೇ ಶತಮನಾದ ನಿಜಗುಣ ಶಿವಯೋಗಿಗಳು ಅವರ ಕೈವಲ್ಯ ಪದ್ಧತಿ ತತ್ವ ಪದಗಳ ಅಧ್ಯಕೃತಿ.

ನಿಜಗುಣ ಶಿವಯೋಗಿಗಗಳಿಂದ ಪ್ರಾರಂಭವಾದ ಕನ್ನಡ ತತ್ವ ಪದಕಾರರ ಪರಂಪರೆ 18 & 19ನೇ ಶತಮಾನಗಳಲ್ಲಿ ತುಂಬ ಸಮೃದ್ಧವಾಗಿ ಹಾಗೂ ವಿಸ್ತೃತವಾಗಿ ಬೆಳೆಯಿತು. ಈ ಕಾಲದಲ್ಲಿ ಕನ್ನಡ ನಾಡಿನ ಅದರಲ್ಲೂ ಉತ್ತರ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲೂ ನೂರಾರು ತತ್ವ ಪದಕಾರರು ಅಪಾರ ಸಂಖ್ಯೆಯಲ್ಲಿ ತತ್ವ ಪದಗಳನ್ನು ರಚಿಸಿದರು. ಇದೇ ಕಾಲದಲ್ಲಿ ಬೀದರ ಜಿಲ್ಲೆಯಲ್ಲೂ ಅನೇಕ ತತ್ವ ಪದಕಾರರು ಕಾಣಿಸಿಕೊಂಡರು.

ಬೀದರ ಜಿಲ್ಲೆಯ ತತ್ವ ಪದಕಾರರ ಪರಂಪರೆ 18ನೇ ಶತಮಾನದಿಂದ ಪ್ರಾರಂಭವಾಗುತ್ತದೆ. ಈಗ ದೊರಕಿರುವ ಅಧಿಕೃತ ಮಾಹಿತಿಗಳ ಪ್ರಕಾರ ಈ ಶತಮಾನದ ಮರಕುಂದಿ ಬಸವಣ್ಣಪ್ಪ ಈ ಜಿಲ್ಲೆಯ ಪ್ರಥಮ ತತ್ವಪದ ಕಾರನಾಗಿದ್ದಾನೆ.

ಮರಕುಂದಿ ಬಸವಣಪ್ಪನಿಂದ ಪ್ರಾರಂಬವಾಗುವ ಬೀದರ ಜಿಲ್ಲೆಯ ತತ್ವಪದಕಾರರ ಪರಂಪರೆ ಹುಲಸೂರಿನ ಶಿವಾನಂದ ಸ್ವಾಮಿಜಿ, ಗೌಡಗಾಂವದ ಪಂಚಾಕ್ಷರಿ ಹಿರೇಮಠ, ಕಲಖೋರಾದ ರೇವಣ್ಣ ತತ್ವಪದಕಾರರು ಈ ಪರಂಪರೆಯನ್ನು ಇಲ್ಲಿ ಇಂದಿಗೂ ಜೀವಂತವಾಗಿರಿಸಿದ್ದಾರೆ. ಕೊಹಿನೂರ ಭದ್ರಪ್ಪಾ ಹಾಗೂ ಕೊಳ್ಳುರು ಹುಸನಾನ ಗ್ರಾಮದ ರೇವಣಸಿದ್ದಪ್ಪಾ ಸೂಗುರೆ ಎಂಬ ತತ್ವ ಪದಕಾರನಿಗೆ ಈಗ ಕೇವಲ 31ರ ಹರೆಯ ರೇವಣಪ್ಪ ಶ್ರೀಮಂತ ಎಂಬ ಅಂಕಿತದಲ್ಲಿ ಅನೇಕ ತತ್ವ ಪದಗಳನ್ನು ರಚಿಸಿರುವ ಈತ ಬೀದರ ಜಿಲ್ಲೆಯ ತತ್ವಪದ ಸಾಹಿತ್ಯ ಸೃಷ್ಟಿ ಇನ್ನೂ ಬತ್ತಿಲ್ಲ ಎನ್ನುವದಕ್ಕೆ ದಟ್ಟ ಸಾಕ್ಷಿಯಾಗಿದೆ.

ಬೀದರ ಜಿಲ್ಲೆಯ ತತ್ವ ಪದಕಾರರ ಪರಂಪರೆ ತುಂಬ ಬೆಳೆದಿದೆ ಇದುವರೆಗೆ ಇಲ್ಲಿ 20ಕ್ಕೂ ಹೆಚ್ಚು ಜನ ತತ್ವಪದಕಾರರು ಕಾಣಿಸಿಕೊಂಡಿದ್ದಾರೆ. ಆದರೆ ಇವರಲ್ಲಿ ಬಹುತೇಕ ಜನ ತತ್ವಪದಕಾರರು ಇನ್ನೂ ಎಲೆಯ ಮರೆಯ ಹೂವಿನ ಹಾಗೆ ಅಜ್ಞಾತವಾಗಿಯೇ ಉಳಿದಿದ್ದಾರೆ. ಅವರ ಹೆಸರಾಗಲಿ ತತ್ವಪದಗಳಾಗಲಿ ಎಲ್ಲೂ ಪ್ರಕಟವಾಗಿಲ್ಲ. ಹೀಗೆಂದು ಅವರೆಲ್ಲರನ್ನು ಇಲ್ಲಿ ವಿವರವಾಗಿ ನೋಡುವ ಉದ್ದೇಶ ನಮ್ಮದಲ್ಲ. ಏಕೆಂದರೆ ಇದೊಂದು ಚಿಕ್ಕ ಹೊತ್ತಗೆ.

ಬೀದರ ಜಿಲ್ಲೆಯ ತತ್ವಪದಕಾರರ ಹೆಸರುಗಳು ಹೀಗಿವೆ 1. ಮರಕುಂದಿಯ ಬಸವಣ್ಣ 2.ನಿಡವಂಚಿಯ ನಿಜಲಿಂಗ ಭದ್ರೇಶ್ವರ 3. ಆಣದೂರದ ಜಹೂರ ಅಲಿಷಾ 4. ಅಷ್ಟೂರಿನ ಲಕ್ಷ್ಮಣ ಸಾಧು 5. ಅಣದೂರದ ಮೋನಪ್ಪಾ ಕೊಂಡಾರ 6. ಬೀದರದ ಕಾಶಿನಾಥ ಶೀಂಧೆ (ಪಂಚಶೀಲ ಗವಾಯಿ) 7. ಕಂಗಟಿಯ ಶರಣಪ್ಪಾ ಶಾಸ್ತ್ರಿ 8. ಬೀದರದ ರಘುನಾಥ ಹಡಪದ 9. ಅಣದೂರದ ಶಂಬಣ್ಣ ಹರಿಜನ 10. ನೇಮತಾಬಾದನ ಶಿವರಾಮ ಹರಿಜನ 11. ಬೀದರನ ಸಿದ್ರಾಮಪ್ಪಾ ಹೊಸಮನಿ 12. ಅಷ್ಟೂರದ ನರಸಪ್ಪ 13. ಚಿದ್ರಿಯ ಬಸವಲಿಂಗ ಸ್ವಾಮಿ 14. ನವಲಸಪೂರದ ದೇವೆಂದ್ರಪ್ಪಾ 15. ಮಿರ್ಜಾಪುರದ ಕಲ್ಲಪ್ಪಾ 16. ಇಸ್ಲಾಂಪುರದ ಅಣ್ಣೆಪ್ಪ 17. ಅಣದೂರದ ಮಾರುತಿ ಸಿಂಧೋಲ 18. ಕೊಹಿನೂರಿನ ಭದ್ರಪ್ಪಾ ಪಾಟೀಲ 19. ಖಾನಾಪೂರದ ಗಣಪ್ಪ ಜಮಾದಾರ 20. ಗೋಕುಲದ ಶಿಲರ್‌ಸಾಬ ಶೇಖ 21. ಕೊಳ್ಳುರಿನ ಹುಸಣ 22. ಮುಡಬಿಯ ಮಸ್ತ ಅಲಿಷಾ ಖಾದರಿ 23. ಬಾಗಹಿಪ್ಪರಗಾದ ನಬಿಲಾಲ 24. ಖೇರ್ಡಾದ ಲಕ್ಷ್ಮಣರಾವ ಕಮಲಾಪೂರೆ 25.ಕೊಹಿನೂರಿನ ವೀರಣ್ಣಾ ಸಂತಾಜಿ 26. ಸಿರಗಾಪೂರದ ನಾಗೇಂದ್ರಪ್ಪಾ ಬಿರಾದಾರ 27. ಬಸವಕಲ್ಯಾಣದ ಮಾಣಿಕಪ್ಪಾ ಮೀನಕೇರೆ 28. ಹಾರಕೂಡದ ಶಂಕರ ಶೀಲವಂತ 29. ಹೂಲಸೂರಿನ ಶಿವಾನಂದ ಸ್ವಾಮಿಜಿ 30. ಕಲಖೋರಾದ ರೇವಣಸಿದ್ದಪ್ಪಾ ನಾಟಿಕಾರ 31. ಹಾರಕೂಡದ ಬಸವಣಪ್ಪಾ ಸಿಂಪಿ 32. ಶಾಂತಣ್ಣಾ ಶೀಲವಂತ 33. ಗೋರ್ಟಾದ ವಿರುಪಾಕ್ಷಯ್ಯ ಮಠಪತಿ 34. ಗದಲೇಗಾಂವದ ಅಣ್ಣಾರಾವ ಮಾಸ್ತರ

35.ಏಕಲೂರದ ಶ್ರೀಮಲ್ಲಪ್ಪ ಪಾಟೀಲ 36. ಕೊಹಿನೂರಿನ ರೇವಣಸಿದ್ದಪ್ಪಾ ಸುಗುರೆ 37. ಚಿಕ್ಕ ಆಲೂರಿನ ಮಡಿವಾಳಪ್ಪಾ ಕೆಂಚಾ 38. ಕಾಳಗಾಪೂರದ ಸಿದ್ರಾಮಪ್ಪಾ ಬಿರಾದಾರ 39. ಲಾಧಾದ ಶಿವರಾಯ ಮುಚಳಂಬೆ 40. ಬೊಂತಿಯ ರಹಿಮನ್‌ಸಾಬ್ ಪಟೇಲ 41. ಶೆಂಬೆಳ್ಳಿಯ ಬಾಬಣ್ಣಾ ಹರಿಜನ 42.ಹೆಡಗಾಪೂರದ ಸಿದ್ದರಾಮ ಮುಕರಂಬೆ 43. ಜೀರ್ಗಾದ ರತ್ನಪ್ಪಾ ಮಾನಕಾರಿ 44. ನಾಗೂರದ ಝುರೆಪ್ಪಾ ಭಂಗಾರೆ 45. ಏಕಲಾರದ ಶಂಕರರಾವ ಪಾಂಚಾಳ 46. ಶರಣಯ್ಯಾ ಸ್ವಾಮಿ 47. ಜೊನ್ನಿಕೇರಿಯ ಗುಂಡಪ್ಪಾ 48. ಖಾಸೆಂಪೂರದ ನಾಗಪ್ಪಾ ಹರಿಜನ 49. ಖಟಕ ಚಿಂಚೊಳಿಯ ಮಲ್ಲಿಕಾರ್ಜುನ ಚಾಮರೆಡ್ಡಿ 50. ಅಪ್ಪಾರಾವ ಕುಲಕರ್ಣಿ 51. ಬ್ಯಾಲಹಳ್ಳಿಯ ಕರಿಬಸವೇಶ್ವರ ಸಿಂಪಿ 52. ಕರಡ್ಯಾಳದ ಸಂಗಪ್ಪಾ ಬಿರಾದಾರ 53. ದಾಡಗಿಯ ಭೀಮಾ ಶಂಕರ ವಳಸಂಗೆ 54. ಸಿಕಿಂದ್ರಾಬಾದ್ ವಾಡಿಯ ಕಲ್ಲಪ್ಪಾ ಗೋರಚಿಂಚೋಳಿ 55. ಕಣಜಿಯ ಮನೋಹರ ಮೂಲಗೆ 56. ಗೌಡಗಾಂವದ ಪಂಚಾಕ್ಷರಿ ಸ್ವಾಮಿ 57.ನಾವದಗಿಯ ನಾಗಲಿಂಗ ಕವಿ 58. ಕೋಸಂನ ಕಲ್ಲಪ್ಪಾ ಮ್ಯಾಲದೊಡ್ಡಿ 59. ಹಜನಾಳದ ದೇವೆಂದ್ರಪ್ಪಾ 60. ಹಿಪ್ಪಳಗಾಂವದ ಬಾಬುರಾವ 61. ಮಾಣಿಕನಗರದ ಮಾಣಿಕ ಪ್ರಭು 62. ಧುಮ್ಮನಸೂರಿನ ಸಿದ್ದಪ್ರಭು 63. ಮಂಗಲಗಿಯ ನನ್ನೇಸಾಬ 64. ಬೆಳಗೇರಿಯ ತುಕಾರಾಮ ಉಪಾರ 65. ಚಿಟಗುಪ್ಪಾದ ಹಣಮಂತಪ್ಪಾ ಮಂಕಾಲ್ 66. ಶಿಲ್ಲಪ್ಪಾ ಭೂತಾಳೆ 67. ಹುಡುಗಿಯ ಶಾಂತಪ್ಪಾ ದೇವರಾಯ 68. ಮದ್ದಿನವಾಡಿಯ ಅಜೀಜ ಪಟೇಲ 69. ಹುಡುಗಿಯ ಗುರುಪಾದಪ್ಪಾ ಶಿವರೆಡ್ಡಿ 70. ಡಾಕುಳಗಿಯ ಮಲ್ಲಪ್ಪಾ ಹರಿಜನ 71.ಮಾಣಿಕ ನಗರದ ಮನೋಹರ ಮಾಣಿಕ ಪ್ರಭು 72. ಮಾರ್ತಂಡ ಮಾಣಿಕ ಪ್ರಭು 73. ಸಿದ್ದರಾಜ ಮಾಣಿಕ ಪ್ರಭು 74. ಘಾಟಬೋರಾಳದ ಸಂತರಾಮ ಮಹಾರಾಜ ಹೀಗೆ ಬೀದರ ಜಿಲ್ಲೆ 74 ಜನ ತತ್ವ ಪದಕಾರರಿಗೆ ಜನ್ಮ ನೀಡಿರುವುದು ಗಮನಕ್ಕೆ ಬಂದಿದೆ. ಈ ನಿಟ್ಟಿನಲ್ಲಿ ಹುಡುಕಿದರೆ ಇನ್ನು ಹೆಚ್ಚಿನ ಪದಕಾರರು ಇಲ್ಲಿ ಸಿಗುವ ಸಾಧ್ಯತೆ ಇದೆ.

ಬೀದರ ಜಿಲ್ಲೆಯ ಈ 74 ಜನ ತತ್ವ ಪದಕಾರರಲ್ಲಿ ಮೊದಲಿನ 12 ಜನ ತತ್ವ ಪದಕಾರರು ಬೀದರ ತಾಲ್ಲೂಕಿಗೆ ಸೇರಿದವರಾಗಿದ್ದಾರೆ. 13 ರಿಂದ 36 ರವರೆಗಿನ 19 ಜನ ತತ್ವಪದಕಾರರು ಬಸವಕಲ್ಯಾಣ ತಾಲ್ಲೂಕಿಗೆ ಸೇರಿದವರಾಗಿದ್ದಾರೆ. 37 ರಿಂದ 48 ರವರೆಗಿನ 12 ಜನ ತತ್ವಪದಕಾರರು ಔರಾದ ತಾಲುಕಿನಲ್ಲಿದ್ದರೆ 49 ರಿಂದ 60 ರವರೆಗಿನ 12 ಜನ ತತ್ವಪದಕಾರರು ಭಾಲ್ಕಿ ತಾಲೂಕಿನವರಾಗಿದ್ದಾರೆ. 61 ರಿಂದ 74 ರವರೆಗಿನ 14 ಜನ ತತ್ವ ಪದಕಾರರು ಹುಮನಾಬಾದ ತಾಲ್ಲೂಕಿಗೆ ಸೇರಿದವರಾಗಿದ್ದಾರೆ.

ಬೀದರ ಜಿಲ್ಲೆಯ ತತ್ವ ಪದಕಾರರು ಈ ಸಂಖ್ಯೆಯನ್ನು ಗಮನಿಸಿದಾಗ 18ನೇ ಶತಮಾನದಿಂದ ಇದೂವರೆಗಿನ ಕಡಿಮೆ ಅವಧಿಯಲ್ಲಿ ಒಂದು ಯುಗವನ್ನೇ ನಿರ್ಮಿಸುವಷ್ಟು ತತ್ವಪದಕಾರರು ಇಲ್ಲಿದ್ದಾರೆ. ಎಂಬುದು ಸ್ಪಷ್ಟವಾಗುತ್ತದೆ. ಇದೇ ಅವಧಿಯಲ್ಲಿ ಕನ್ನಡ ನಾಡಿನ ಬೇರೆ ಬೇರೆ ಜಿಲ್ಲೆಗಳಲ್ಲೂ ಇಂಥ ತತ್ವಪದಕಾರರು ಕಂಡುಬರುತ್ತಾರಾದರೂ ಆ ಸಂಖ್ಯೆ ಈ ಜಿಲ್ಲೆಯಲ್ಲಿಯೆ ಅಧಿಕವಾಗಿದೆ. ಹೀಗಾಗಿ 18 & 19ನೇ ಶತಮಾನದ ಕನ್ನಡ ಸಾಹಿತ್ಯದ ಕೊರತೆಯನ್ನು ತುಂಬಿರುವ ಶ್ರೇಯಸ್ಸಿನಲ್ಲಿ ಬೀದರ ಜಿಲ್ಲೆಯ ಹೆಚ್ಚಿನ ಪಾಲಿದೆ ಎಂದೆನಿಸುತ್ತದೆ.

ಬೀದರ ಜಿಲ್ಲೆಯ ಮೇಲಿನ ತತ್ವ ಪದಕಾರರ ಪಟ್ಟಿಯಲ್ಲಿ ಎಲ್ಲಾ ತತ್ವಪದಕಾರರು ಪುರುಷರೇ ಆಗಿದ್ದಾರೆ ಅವರಲ್ಲಿ ಒಬ್ಬರಾದರೂ ಮಹಿಳೆಯರಿಲ್ಲದಿರುವುದು ಕಂಡು ಬರುತ್ತದೆ. ಹಾರಕೂಡದ ಗುಂಡಮ್ಮಾ ಬೀದರ ಜಿಲ್ಲೆಯ ಏಕೈಕ ತತ್ವಪದಕಾರ್ತಿ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಆದರೆ ಆಕೆ ಒಬ್ಬ ತತ್ವಪದಕಾರ್ತಿಯಲ್ಲ ಎಂಬುದು ನಮ್ಮ ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿದೆ. ಗುಂಡಮ್ಮ ಮೂಲತ ನಮ್ಮ ಜಿಲ್ಲೆಯವಳಲ್ಲ ಬೇರೆ ಯಾವುದೋ ಗ್ರಾಮದಿಂದ ಇಲ್ಲಿಗೆ ಒಂದು ನೆಲೆಸಿದ್ದಳು ಚೆನ್ನಬಸವೇಶ್ವರ ಶಿವಯೋಗಿಗಳ ಮಂದಿರದಲ್ಲಿ ಕುಳಿತು ಅವರ ಬಗ್ಗೆ ಯಾರೋ ಕಟ್ಟಿದ ಒಂದೆರಡು ಪದ ಹಾಡುತ್ತಿದ್ದಳು ಹೊರತು ಆಕೆ ಯಾವುದೇ ಪದಗಳನ್ನು ಸ್ವತ: ಕಟ್ಟಿಲ್ಲ ಎಂದು ಹಾರಕೂಡದ ಗ್ರಾಮದ ಜನರು ಹೇಳುತ್ತಾರೆ. ಹಾರಕೂಡದ ಚೆನ್ನವೀರ ಶಿವಚಾರ್ಯ ಹಾಗೂ ಆ ಭಾಗದ ತತ್ವಪದಕಾರ ಸಿರಗಾಪೂರದ ನಾಗೇಂದ್ರಪ್ಪಾ ಕೂಡ ಇದೇ ಅಭಿಪ್ರಾಯ ಪಡುತ್ತಾರೆ. ಹೀಗಾಗಿ ಹಾರಕೂಡ ಗುಂಡಮ್ಮ ಒಬ್ಬ ತತ್ವಪದ ಕಾರ್ತಿಯರಲ್ಲ ಎಂಬುದು ಸ್ಪಷ್ಟವಾಗುತ್ತದೆ. 12ನೇ ಶತಮಾನದಲ್ಲಿ ಅನೇಕ ವಚನ ಕಾರ್ತಿಯನ್ನು ಕಂಡ ಈ ಜಿಲ್ಲೆಯಲ್ಲಿ ಇಂದು ಒಬ್ಬಳಾದರೂ ತತ್ವಪದ ಕಾರ್ತಿ ಇಲ್ಲದಿರುವುದು ಸೋಜಿಗದ ಸಂಗತಿಯಾಗಿದೆ.

ಬೀದರ ಜಿಲ್ಲೆಯ ತತ್ವಪದಕಾರರು ಬೇರೆ ಬೇರೆ ಜಾತಿ, ಮತ, ಪಂಗಡಗಳಿಗೆ ಸೇರಿದವರಾಗಿದ್ದಾರೆ. ಶೆಂಬೆಳ್ಳಿ ಬಾಬಣ್ಣ, ಜೀರ್ಗಾದ ರತ್ನಪ್ಪ, ನಾಗೂರದ ಝುರೆಪ್ಪಾ ಸಿಕಿಂದ್ರಾಬಾದ ವಾಡಿಯ ಕಲ್ಲಪ್ಪ ಬೀದರದ ಪಂಚಶೀಲ ಗವಾಯಿ ಅಪ್ಪೂರಿನ ಲಕ್ಷ್ಮಣ ಸಾಧು ಈ ಮೊದಲಾದವರು ದಲಿತ ಮೂಲದಿಂದ ಬಂದ ತತ್ವಪದಕಾರರಾಗಿದ್ದಾರೆ. ಆಣದೂರದ ಜಯಾರ್ ಅಲಿಷಾ, ಮುಡಬಿಯ ಮಸ್ತ ಅಲಿಷಾ, ಕೊಳ್ಳುರಿನ ಹುಸನಾ, ಬಾಗಿಹಿಪ್ಪರಗಾದ ನಬಿಲಾಲ, ಬೊರಗೆಯ ರೆಹಮಾನ್‌ಸಾಬ, ಮದ್ದಿನವಾಡಿಯ ಅಜೀಜ್ ಪಟೇಲ ಈ ಮುಂತಾದವರು ಮುಸ್ಲಿಂ ಜನಾಂಗಕ್ಕೆ ಸೇರಿದ ತತ್ವಪದಕಾರರಾಗಿದ್ದಾರೆ. ಲಾದಾದ ಶಿವರಾಯ, ಕಾಳಗಾಪೂರದ ಸಿದ್ರಾಮಪ್ಪಾ ಹುಡುಗಿಯ ಶಾಂತಪ್ಪಾ ಚಿಕ್ಕ ಆಲೂರಿನ ಮಡಿವಾಳಪ್ಪ, ಕೊರಿನೂರಿನ ಭದ್ರಪ್ಪ, ವೀರಣ್ಣ, ರೇವಣಸಿದ್ದಪ್ಪಾ, ಧುಮ್ಮನಸೂರಿನ ಸಿದ್ದಪ್ರಭು ಇವರು ಲಿಂಗಾಯತ ಮನೆತನಕ್ಕೆ ಸೇರಿದ ತತ್ವಪದಕಾರರಾದರೆ ಹುಲಸೂರಿನ ಶಿವಾನಂದ ಸ್ವಾಮಿಜಿ, ಚಿದ್ರಿಯ ಬಸವಲಿಂಗ ಸ್ವಾಮಿಜಿ, ಗೌಡಗಾಂವದ ಪಂಚಾಕ್ಷರಿ ಮರಕುಂದಿಯ ಬಸವಣ್ಣಪ್ಪ, ನಿಡವಂಚಿಯ ಭದ್ರೇಶ್ವರ ಇವರು ಜಂಗಮ ಮನೆತನದ ತತ್ವಪದಕಾರರಾಗಿದ್ದಾರೆ. ಖಿಟಕಚಿಂಚೋಳಿಯ ಅಪ್ಪಾರಾವ ಕುಲಕರ್ಣಿ, ಮಾಣಿಕನಗರದ ಮಾಣಿಕಪ್ರಭು, ಮಾರ್ತಂಡ ಮಾಣಿಕ ಪ್ರಭು, ಸಿದ್ಧರಾಜ ಮಾಣಿಕಪ್ರಭು, ಮನೋಹರ ಮಾಣಿಕ ಪ್ರಭು, ಬ್ರಾಹ್ಮಣ ಮನೆತನದ ತತ್ವಪದಕಾರರಾದರೆ ಉಳಿದ ತತ್ವಪದಕಾರರು ಹಡಪಿಗ, ಉಪ್ಪಾರ, ಕೋಳಿ, ಕಬ್ಬಲಿಗ, ರೆಡ್ಡಿ, ಕುರುಬ, ಸಿಂಪಿ, ಬೇಡ, ಅಕ್ಕಸಾಲಿಗ ಜನಾಂಗಗಳಿಗೆ ಸೇರಿದವರಾಗಿದ್ದಾರೆ. ಹೀಗೆ ಇಲ್ಲಿಯ ತತ್ವಪದಕಾರರು 12ನೇ ಶತಮಾನದ ಶರಣರಂತೆ ಸಮಾಜದ ವಿವಿಧ ಜನಾಂಗಗಳಿಂದ ಮೂಡಿಬಂದವರಾಗಿದ್ದಾರೆ.

ಬೀದರ ಜಿಲ್ಲೆಯ ಈ ತತ್ವಪದಕಾರರು ತಮ್ಮ ಉಪಜೀವನಕ್ಕಾಗಿ ವಿವಿಧ ವೃತ್ತಿಗಳನ್ನು ಅವಲಂಬಿಸಿದವರಾಗಿದ್ದಾರೆ. ಗುಮಾಸ್ತ, ಶಿಕ್ಷಕ, ಕೂಲಿ, ವ್ಯಾಪಾರ, ಒಕ್ಕಲುತನ, ಉಪ್ಪಾರ, ಕ್ಷೌರ, ಚಿನಿವಾರ ಪಟವಾರಿ, ಭಿಕ್ಷೆ ಇವು ಇವರು ಕೈಗೊಂಡಿರುವ ವಿಭಿನ್ನ ಉದ್ಯೋಗಗಳಾಗಿವೆ. ಈ ತತ್ವಪದಕಾರರಲ್ಲಿ ಮಾಣಿಕನಗರದ ಮಾಣಿಕ ಪ್ರಭು, ಮಾರ್ತಂಡ ಮಾಣಿಕ ಪ್ರಭು, ಮನೋಹರ ಮಾಣಿಕ ಪ್ರಭು ನಿಡವಂಚಿಯ ಭದ್ರೇಶ್ವರ, ಮುಡಬಿಯ ಮಸ್ತ ಅಲಿಷಾ, ಚಿಟಗುಪ್ಪಾದ ಹಣಮಂತಪ್ಪ, ಶಿಲ್ಲಪ್ಪ ಭುತಾಳೆ ಬಹುಭಾಷಾ

ತತ್ವಪದಕಾರರಾಗಿದ್ದಾರೆ. ಕನ್ನಡದ ಜೊತೆಗೆ ಮರಾಠಿ, ಹಿಂದಿ, ಉರ್ದು, ತೆಲುಗು ಭಾಷೆಗಳಲ್ಲೂ ಇವರು ತತ್ವಪದಗಳನ್ನು ಬರೆದಿದ್ದಾರೆ. ಮುಡಬಿಯ ಮಸ್ತ ಆಲಿಷಾ ಮತ್ತು ಧುಮ್ಮನಸೂರಿನ ಸಿದ್ದಪ್ರಭುವಿನಂಥವರು ಕನ್ನಡ, ಮರಾಠಿ, ತೆಲುಗು, ಉರ್ದು, ಹಿಂದಿ ಭಾಷೆಗಳನ್ನು ಬೆರೆಸಿ ತತ್ವಪದಗಳನ್ನು ರಚಿಸುವುದರ ಮೂಲಕ ಬೀದರ ಭಾಗದಲ್ಲಿ ಭಾಷಾ ಸಾಮರಸ್ಯತೆ ಹಾಗೂ ಮತೀಯ ಸೌಹಾರ್ದತೆಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ.

ಬೀದರ ಜಿಲ್ಲೆಯ ದಲಿತ ತತ್ವಪದಕಾರರಲ್ಲಿ ಔರಾದ ತಾಲ್ಲೂಕಿನ ಶೆಂಬೆಳ್ಳಿ ಗ್ರಾಮದ ಬಾಬಣ್ಣ ಮೊದಲಿನಾಗಿದ್ದಾನೆ. 1905 ರಲ್ಲಿ ಜನಿಸಿದ ಈತನನ್ನು ವಿದ್ವಾಂಸರು ಬೊರಗಿ ಗ್ರಾಮದವನೆಂದು ಹೇಳಿದ್ದಾರೆ ಆದರೆ ಬಾಬಣ್ಣ ಬೋರಗಿ ಗ್ರಾಮದವನಾಗಿರದೆ ಶೆಂಬೆಳ್ಳಿ ಗ್ರಾಮದವನಾಗಿದ್ದಾನೆ. ಈಗಲೂ ಶಂಬೆಳ್ಳಿ ಗ್ರಾಮದಲ್ಲಿ ಈತನ ಮನೆ ಇದೆ. ಈ ಮನೆಯಲ್ಲಿ ಈತನ ಮಗ ದಶರಥ ವಾಸವಾಗಿದ್ದಾನೆ. ಶಂಬೆಳ್ಳಿ ಗ್ರಾಮದ ಪಕ್ಕದಲ್ಲಿ ಕೇವಲ ಒಂದು ಕಿ.ಮೀ. ಅಂತರದಲ್ಲಿ ಜೀರ್ಗಾ ಎಂಬ ಗ್ರಾಮವಿದೆ. ಈ ಗ್ರಾಮದ ತತ್ವಪದಕಾರ ರತ್ನಪ್ಪಾ ಮಾನಕಾರಿ ಬಾಬಣ್ಣನ ಶಿಷ್ಯನಾಗಿದ್ದು, ಆತನ ಸಾಹಿತ್ಯವನ್ನು ಕಾಪಾಡಿಕೊಂಡು ಬಂದಿದ್ದಾನೆ.

ಬೀದರ ತಾಲ್ಲೂಕಿನ ಅಣದೂರ ಗ್ರಾಮದ ಜಹೂರ ಅಲಿಷಾ ಬೀದರ ಜಿಲ್ಲೆಯ ಪ್ರಥಮ ಮುಸ್ಲಿಂ ತತ್ವಪದಕಾರನಾಗಿದ್ದಾನೆ. ಇಲ್ಲಿಯ ಮುಸ್ಲಿಂ ತತ್ವಪದಕಾರರು ಇಸ್ಲಾಂ ಧರ್ಮದಲ್ಲಿ ಜನಿಸಿ ವೀರಶೈವ ಸಂಸ್ಕೃತಿಯನ್ನೂ ತೀವ್ರವಾಗಿ ಅಳವಡಿಸಿಕೊಂಡಿದ್ದಾರೆ. ಮುಡಬಿಯ ಮಸ್ತನ ಅಲಿಷಾ ಖಾದ್ರಿ ಗುರು ಆನಂದಯ್ಯನ ಶಿಷ್ಯಾನಾಗಿದ್ದು ತನ್ನ ತತ್ವಪದಗಳಿಗೆ ಆತನ ಹೆಸರನ್ನೇ ಅಂಕಿತವಾಗಿರಿಸಿಕೊಂಡಿದ್ದಾನೆ. ಟೊಂಕದಲ್ಲಿ ಉಡಿದಾರ ಕಟ್ಟುವ ಈ ಶತವೃದ್ಧ ಈಗಲೂ ಹಣೆಗೆ ವಿಭೂತಿ ಧರಿಸಿ ಪ್ರತಿನಿತ್ಯ 108 ಸಲ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತಾನೆ. ಮಾತ್ರವಲ್ಲದೇ ಸ್ವತ: ಗುರುವಿನ ಸ್ಥಾನದಲ್ಲಿ ನಿಂತು ಅನೇಕ ಶಿಷ್ಯರಿಗೆ ಲಿಂಗದಿಕ್ಷೆ ನೀಡಿದ್ದಾರೆ. ಅದೇ ರೀತಿ ಕೊಹಿನೂರಿನ ಚನ್ನಮಲ್ಲದೇವರ ಭಕ್ತನಾದ ಕೊಳ್ಳುರ ಹುಸನಾ ಹಾರಕೂಡದ ಚನ್ನಬಸವ ಶಿವಯೋಗಿಗಳಿಂದ ಲಿಂಗದೀಕ್ಷೆ ಪಡೆದು ಅವರನ್ನು ಕುರಿತು ಅನೇಕ ಹಾಡುಗಳನ್ನು ರಚಿಸಿದ್ದಾನೆ. ಮದ್ದಿನವಾಡಿಯ ಅಜೀಜ್ ಪಟೇಲ್ ಬಾಗಹಿಪ್ಪರಗಾದ ನಬಿಲಾಲ್, ಅಣದೂರದ ಜಹೂರ ಅಲಿಷಾ ಕೂಡ ವೀರಶೈವ ದೇವತೆಗಳನ್ನೇ ತಮ್ಮ ಆರಾಧ್ಯ ದೈವಗಳನ್ನಾಗಿ ಮಾಡಿಕೊಂಡು ಆ ಧರ್ಮದ ಗುರುಗಳ ಮಾರ್ಗದಲ್ಲಿ ಅನೇಕ ತತ್ವಪದಗಳನ್ನು ರಚಿಸಿ ಶಿವಶರಣರ ಸಂದೇಶಗಳನ್ನು ಜಗತ್ತಿಗೆ ಸಾರಿದ್ದಾರೆ. ಹೀಗೆ ಬೀದರ ಜಿಲ್ಲೆಯ ಮುಸ್ಲಿಂ ತತ್ವ ಪದಕಾರರು ತಮ್ಮ ತಾಯಿಭಾಷೆ-ಸಂಸ್ಕೃತಿ ಧರ್ಮಕ್ಕಿಂತಲೂ ತಾವು ಹುಟ್ಟಿ ಬೆಳೆದ ನೆಲದ ಭಾಷೆ-ಸಂಸ್ಕೃತಿ-ಧರ್ಮಕ್ಕೆ ಹೆಚ್ಚಿನ ಮಹತ್ವ ನೀಡಿದ್ದಾರೆ. ನಿಜಾಮ ಶಾಹಿಗಳ ಕಾಲದಲ್ಲಿ ನಲುಗಿ ಹೋಗಿದ್ದ ಈ ಭಾಗದ ಕನ್ನಡ ಭಾಷೆ-ಸಂಸ್ಕೃತಿ-ಧರ್ಮಕ್ಕೆ ಸ್ವತ: ಮುಸ್ಲಿಂರೇ ತತ್ವಪದಗಳ ಮೂಲಕ ಹೊಸ ಜೀವ ನೀಡಿರುವುದು ವಿಶೇಷವಾಗಿದೆ.

ಜಾನಪದ ನೆಲೆಯಿಂದ ಬಂದ ಈ ತತ್ವಪದಕಾರರು ತತ್ವಪದಗಳ ಜೊತೆಗೆ ಜನಪದ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಸಾಹಿತ್ಯವನ್ನು ರಚಿಸಿದ್ದಾರೆ. ಮೋಹರಮ್, ಗೀಗಿ, ಕುಟ್ಟುವ, ಬೀಸುವ, ಸೋಬಾನ, ಮದುವೆ, ಹಂತಿ, ಜೋಗುಳ, ಕೋಲಾಟ, [illegible], ಆರತಿ, ಸೀಗಿ, ಕುಟುಂಬ ಯೋಜನಾ, ಸಾಕ್ಷರತಾ. ನಾಟಕ, ಪುರಾಣ ಈ ಮೊದಲಾದ ರೂಪಗಳಲ್ಲಿ ಅವರು ಬೀದರ ನೆಲದಿಂದ ಕನ್ನಡ ನಾಡಿನ ಜನಪದ ಸಾಹಿತ್ಯ ಲೋಕಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ.

ತತ್ವ ಪದಕಾರರಿಗೆ ಬಹುಮುಖ್ಯವಾದ ತತ್ವವೆಂದರೆ ಅನುಭಾವ. ಬೀದರ ಜಿಲ್ಲೆಯ ತತ್ವಪದಕಾರರು ಈ ಅನುಭಾವ ಅಭಿವ್ಯಕ್ತಿಗಾಗಿ ತತ್ವಪದಗಳನ್ನಷ್ಟೆ ಅಲ್ಲದೆ, ಮೇಲೆ ಹೇಳಿದ ಜನಪದ ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ತತ್ವಪದಗಳಂತೆ ಭುಲಾಯಿ, ಗೀಗಿ, ಮೋಹರಮ್ ಎಲ್ಲದರಲ್ಲೂ ಅವರು ಅನುಭಾವವನ್ನು ದಟ್ಟವಾಗಿ ತುಂಬಿದ್ದಾರೆ.

ಗರ್ವ ಅಹಂ ಅಹಂ ಕಾರ ಸೊಕ್ಕಿತೊ

ಆರು ಮಂದಿ ಕಳ್ಳರ ಕುಲ

ಜ್ಞಾನ ಕೊರಡಿಲೆ ಘಲ್ ಕಡಿದು

ಸುಟ್ಟು ಸಪ್ಪೆ ಮಾಡಿದರು ನಿರ್ಬಯಲ.

ಇದೊಂದು ಮೋಹರಮ್ ಹಾಡು. ಬೋರಗಿ ರೆಹಮಾನ್ ಸಾಬನ ಈ ಮೊಹರಮ್ ಹಾಡಿನಲ್ಲಿ ಅನುಭಾವ ಸಾಧಕರಾದವರು ತಮ್ಮ ಶರೀರದಲ್ಲಿ ಭಯಂಕರವಾಗಿರುವ ಗರ್ವ ಅಹಂಕಾರವೆಂಬ ಘಟ ಮತ್ತು ಈ ಘಟದಲ್ಲಿ ಅಡಗಿರುವ ಷಡ್ವೈರಿಗಳೆಂಬ ಆರು ಮಂದಿ ಕಳ್ಳರನ್ನು 'ಆತ್ಮ ಜ್ಞಾನ' ಎಂಬ ಕಿಡಿ–ಕೊರಡಿಯಿಂದ ಕಡಿದು ಸುಟ್ಟು ಶರೀರವನ್ನು ಬಯಲು–ನಿರ್ಬಯಲು ಮಾಡಿದರೆಂಬ ವಿಚಾರ ತುಂಬ ಮಾರ್ಮಿಕವಾಗಿದೆ.

ಹೀಗೆ ಇಲ್ಲಿಯ ತತ್ವಪದಕಾರರು ತಮ್ಮ ಪ್ರತಿಯೊಂದು ರಚನೆಯಲ್ಲಿ ಅನುಭಾವದ ಎತ್ತರವನ್ನು ಬಿತ್ತರಿಸಿದ್ದಾರೆ. ಇದನ್ನೆಲ್ಲಾ ಗಮನಿಸಿದಾಗ ಅವರ ಸಾಹಿತ್ಯ ಸೃಷ್ಟಿಯ ಮೂಲ ಆಶಯ ಅನುಭಾವವೇ ಆಗಿದೆ ಎಂಬುದು ಸ್ಪಷ್ಟವಾಗುತ್ತದೆ. ಹೀಗಾಗಿ ಅವರನ್ನು ತತ್ವಪದಕಾರರು ಎಂದು ಸೀಮಿತ ಗೊಳಿಸುವದಕ್ಕಿಂತಲೂ ವಿಶಾಲವಾಗಿ, ಅನುಭಾವಿ ಕವಿಗಳು ಎಂದು ಕರೆಯುವುದು ಸೂಕ್ತವೆನಿಸುತ್ತದೆ.

ಬೀದರ ಜಿಲ್ಲೆಯ ತತ್ವಪದಕಾರರು ಅಧ್ಯಾತ್ಮದ ಜತೆಗೆ ಸಮಾಜದ ಕಡೆಗೂ ಗಮನ ಹರಿಸಿದ್ದಾರೆ. ಧಾರ್ಮಿಕ ಔದಾರ್ಯತೆ, ಧರ್ಮ ಸಹಿಷ್ಣುಯತೆ, ಮಾನವಿಯ ತುಡಿತ ಇಲ್ಲಿಯ ಪ್ರತಿಯೊಬ್ಬ ತತ್ವಪದಕಾರರ ಕಾಳಜಿಪರ ವಿಷಯವಾಗಿದೆ. ಬದುಕಿನ ಅನ್ಯೋನತೆ ಜೀವಪರ ನಿಲುವು ಎಲ್ಲರ ಮನೋಧೋರಣೆಯಾಗಿದೆ ಅಂತೆಯೇ ಅವರು ಜಾತಿ–ಮತ–ಪಂಥಗಳನ್ನು ಮೀರಿ ನಿಂತಿದ್ದಾರೆ.

ಹರಿಹರ ಎಲ್ಲ ಶಿವ ಬ್ಯಾರೆ ಇಲ್ಲ!
ಎಷ್ಟು ತಿಳಿಸಲಿ ಹಾಹಾ!
ಮಂದಿರ ಮಜ್ಜಿದ, ಮಜ್ಜಿದ–ಮಂದಿರ! ಬ್ಯಾರೆ ಇಲ್ಲೋವನ ಹಾಹಾ!
ಮದಿನಾದೊಳಗೆ ಕುರಿ ಕಾಯುವ ರಸೂಲ!
ಕೇಳೊ ತಮ್ಮ ನೀನು ಹಾಹಾ!
ಗೋಕುಲದೊಳಗೆ ಗೋವು ಕಾಯುವ ಕೃಷ್ಣ! ಒಬ್ಬನೇ ಹಾನ ಹಾಹಾ!
ಇಬ್ಬರಲ್ಲಿ ಭೇದ ಇಲ್ಲೋ ತಮ್ಮ ಯಾಕ್ಕೋ ಸನ್ಮತ ಕೊಟ್ಟ ಶಿವ ಒಬ್ಬನೇ ಹಾನ ಹಾಹಾ!
ಎನ್ನುವ ಮೋಹರಮ್ ಹಾಡಿನಲ್ಲಿ ಉದಾರ ಧಾರ್ಮಿಕ ದೃಷ್ಟಿಯ ಕಹಳೆ ಮೊಳಗಿದೆ.

ಬೀದರ ಜಿಲ್ಲೆಯ ತತ್ವಪದಕಾರರು ಸಮಕಾಲಿನ ಸಮಸ್ಯೆಗಳಿಗೂ ಸ್ಪಂದಿಸಿದ್ದಾರೆ. ಜನಸಂಖ್ಯಾ ಸಮಸ್ಯೆ ಸಾಕ್ಷರತಾ ಆಂದೋಲನ ಸ್ವಾತಂತ್ರ್ಯ ಪ್ರೇಮ ಇವುಗಳನ್ನು ಕುರಿತು ಪದಕಟ್ಟಿ ಹಾಡಿ ಜನಮನದ ಮೇಲೆ ಪ್ರಭಾವ ಬೀರಿದ್ದಾರೆ.

ಜೋಡಿಲಿಂಗ ಒಂದು ಎರಡು ಸಂಸಾರ ಮಕ್ಕಳಿರಬೇಕ

ಉಡಸಿ, ತೊಡಸಿ ಸುಖದಿಂದ ಸಂಸಾರ ಸಾಗಬೇಕು

ಪುಂಡರಾಗಿ ಗುಂಡು ಹಾರಿಸಿ ಶತೃಗ ಹೊಡಿಬೇಕ

ದುಂಡರಾಗಿ ದುಡಿರಿ ಅಖಂಡ ಭಾರತ ದೇಶಕ

ಎನ್ನುವ ಪದ ಜನಸಂಖ್ಯಾ ಸಮಸ್ಯೆಗೆ ಸ್ಪಂದಿಸುವದರ ಜೊತೆಗೆ ದೇಶಭಕ್ತಿಯನ್ನು ಪ್ರತಿಬಿಂಬಿಸುತ್ತದೆ. ಜನಸಂಖ್ಯೆ ನಿಯಂತ್ರಣದಿಂದ ಸದೃಢ ಭಾರತ ಕಟ್ಟಲು ಸಾಧ್ಯ ಎನ್ನುವ ಭಾವ ವ್ಯಕ್ತಪಡಿಸುತ್ತದೆ.

ವಿದ್ಯದ ಬಲದಿಂದ ಕಳಿತೋ ಸಂಕಷ್ಟ

ಬುದ್ಧಿನಿಡಿತ್ತೊ ಅಕ್ಷರ ಲಿಪಿ ಕರ್ಮಕ್ಕೆ ಸುಟ್ಟ

ಸದಾ ಬೆಳೀಲಿ ವಿದ್ಯದ ಲೇಖ ಮೃಷ್ಟ

ಬಿದ್ದ ಜನ ವಿದ್ಯ ಕಲಿತು ಎದ್ದು ಹಿಡಿದು ಬಾವುಟ

ಜನರು ಸಾಕ್ಷರಾಗದ ಹೊರತು ಅವರಿಗೆ ಸಂಕಷ್ಟ ತಪ್ಪಿದಲ್ಲ. ಎಲ್ಲರೂ ಸಾಕ್ಷರರಾಗಿ ದೇಶದ ಪ್ರತಿಷ್ಠೆ ಹೆಚ್ಚಿಸಬೇಕು. ಎಂದು ಹೇಳಿ ಜನಸಾಮಾನ್ಯರ ಅಶೋತ್ತರಗಳಿಗೆ ಸ್ಪಂದಿಸಿದ್ದಾರೆ. ಅಷ್ಟ ಅಲ್ಲದೆ ದೇಶಭಕ್ತಿ ವಿಜ್ಞಾನ ತಂತ್ರಜ್ಞಾನ ಮುಂತಾದ ವಿಷಯಗಳ ಬಗ್ಗೆ ಪದಗಳನ್ನು ರಚಿಸಿ ದೇಶದ ಪ್ರಸ್ತುತ ವಿದ್ಯಾಮಾನಗಳಿಗೆ ಪ್ರತಿಕ್ರಿಯೆ ನೀಡಿದ್ದರು.

ಈ ತತ್ವಪದಕಾರರ ಮೇಲೆ ಕಲ್ಯಾಣ ಶರಣರ ಹಾಗೂ ಮರಾಠಿ ಸಂತರ ಪ್ರಭಾವ ದಟ್ಟವಾಗಿದೆ. ಬಸವಣ್ಣ ಸಿದ್ಧರಾಮ, ಚನ್ನಬಸವಣ್ಣ, ಅಕ್ಕಮಹಾದೇವಿ, ಅಲ್ಲಮ ಮೊದಲಾದ ಕನ್ನಡ ಶರಣರನ್ನು ಕುರಿತು ಹೇಗೋ ಹಾಗಯೇ ಜ್ಞಾನೇಶ್ವರ, ತುಕಾರಾಮ, ದಾಮಾಜಿ ಪಂತ, ಸಕೂಬಾಯಿ ಮುಂತಾದ ಮರಾಠಿ ಸಂತರನ್ನು ಕುರಿತಾಗಿಯೂ ಇವರು ಪದಕಟ್ಟಿ ಹಾಡಿದ್ದಾರೇ ಈ ಪ್ರವಾದಿಗಳು ಸಾರಿದ ತತ್ವಗಳನ್ನು ತಮ್ಮ ಪದಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಮಾತ್ರವಲ್ಲದೆ ಎಷ್ಟೋ ಜನ ತತ್ವಪದಕಾರರು ಪಂಡರಪುರವಿಠಲ, ತುಳಜಾಪೂರ ಅಂಭಾಭವಾನೀಯ ಭಕ್ತರಾಗಿದ್ದಾರೆ. ಶಿವಭಕ್ತಿಯೊಂದಿಗೆ ಹರಿಭಕ್ತಿಯನ್ನು ಅನುಸರಿಸಿದ ಈ ತತ್ವಪದಕಾರರು ಎರಡು ನಾಡು-ನುಡಿ ಧರ್ಮಗಳ ಮಧ್ಯ ಸುಮಧುರ ಬಾಂಧವ್ಯದ ನಿರ್ಮಾಣಕ್ಕೆ ಒಳ್ಳೆಯ ನಿದರ್ಶನರಾಗಿದ್ದಾರೆ.

ಭಾಷಾ ದೃಷ್ಟಿಯಿಂದ ನೋಡುವುದಾದರೆ, ಬೀದರ ಜಿಲ್ಲೆ ಬಹುಕಾಲದವರೆಗೆ ಮುಸ್ಲಿಂ ಅರಸರ ಆಳ್ವಿಕೆಗೆ ಒಳಗಾಗಿತ್ತು. ಮೇಲಾಗಿ ... ಈಗ ಮರಾರಾಷ್ಟ್ರ ಹಾಗೂ ಆಂದ್ರ ಪ್ರದೇಶ ರಾಜ್ಯಗಳಿಗೆ ಹೊಂದಿಕೊಂಡಿದೆ. ಹೀಗಾಗಿ ಈ ಭಾಗದ ಕನ್ನಡ ಭಾಷೆಯ ಮೇಲೆ ಉರ್ದು, ತೆಲಗು, ಮರಾಠಿ ಭಾಷೆಗಳ ಪ್ರಭಾವ ಗಾಢವಾಗಿದೆ. ಇಲ್ಲಿಯ ಕನ್ನಡದಲ್ಲಿ ಈ ಭಾಷೆಗಳ ಎಷ್ಟೋ ಪದಗಳು ಬೆರೆತುಹೋಗಿವೆ. ಅನ್ಯ

ಭಾಷೆಗಳೊಂದಿಗೆ ಕೂಡಿಕೊಂಡು ಹೊಸ ರೂಪ ಪಡೆದಿರುವ ಇಲ್ಲಿಯ ಕನ್ನಡ ಬಿದರಿ ಕನ್ನಡ ಎನಿಸಿದೆ. ಬೀದರದ ಈ ಬಿದರಿ ಕನ್ನಡದಲ್ಲಿಯೇ ಈ ತತ್ವಪದಕಾರರು ಅಪಾರವಾದ ಸಾಹಿತ್ಯವನ್ನು ರಚಿಸುವುದರ ಮೂಲಕ ಬೀದರ ಭಾಗದಲ್ಲಿ ಭಾಷೆ ಸಂಸ್ಕೃತಿ–ಸಾಹಿತ್ಯಗಳ ಸಮನ್ವಯತೆನ್ನು ಮೆರೆದಿರುವುದು ವಿಶೇಷವಾಗಿದೆ.

*ಗಡಿನಾಡಿನಲ್ಲಿ ಕನ್ನಡ ಕಟ್ಟಿದ ಮಹನೀಯರು:–*

ಅಮೋಘವರ್ಷ ನೃಪತುಂಗನ ಕಾಲದಲ್ಲಿ ಕಾವೇರಿಯಿಂದ ಗೋದಾವರಿವರೆಗೆ ಹರಡಿಕೊಂಡಿದ್ದ ವಿಶಾಲ ಕರ್ನಾಟಕ ಬ್ರಿಟಿಷರ ಕಾಲದಲ್ಲಿ ಇಪ್ಪತ್ತು ಆಡಳಿತಗಳಲ್ಲಿ ಹರಿದು ಹಂಚಿ ಹೋಗಿತ್ತು. ಸ್ವಾತಂತ್ರ್ಯದ ನಂತರ ಇದು ಮದ್ರಾಸ್, ಮುಂಬೈ, ಹೈದ್ರಾಬಾದ್, ಕೊಡಗು ಹಾಗೂ ಮೈಸೂರು ಪ್ರಾಂತಗಳೆಂಬ ಈ ಐದು ಆಡಳಿತಗಳಿಗೆ ಒಳಪಟ್ಟು ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು ಎಂಬ ಕವಿಗಳ ಕನಸು ಕನಸಾಗಿಯೆ ಉಳಿಯಿತು. ಕನ್ನಡದ ಎಷ್ಟೋ ಪ್ರದೇಶಗಳು ಮಹಾರಾಷ್ಟ್ರ, ಆಂದ್ರ, ತಮಿಳುನಾಡು ಹಾಗೂ ಕೇರಳ ರಾಜ್ಯಗಳ ಮಡಿಲನ್ನು ಸೇರಿದವು. ಹೀಗೆ ಸೇರಿದವುಗಳಲ್ಲಿ ಸದ್ಯ ಮಹಾರಾಷ್ಟ್ರದಲ್ಲಿ ಉಸಿರಾಡುತ್ತಿರುವ ಅಕ್ಕಲಕೋಟ ಭಾಗವು ಒಂದು.

ಶಾತವಾಹನರಾದಿಯಾಗಿ ಕನ್ನಡದ ಎಲ್ಲ ಅರಸು ಮನೆತನಗಳು ಅಕ್ಕಲಕೋಟ ಪ್ರದೇಶವನ್ನು ತುಂಬಾ ವೈಭವದಿಂದ ಆಳಿವೆ. 'ವಿಜಾಪೂರ ಹಾಗೂ ಗುಲಬರ್ಗಾಗಳನ್ನು ಅನುಕ್ರಮವಾಗಿ ರಾಜಧಾನಿಯನ್ನಾಗಿ ಮಾಡಿಕೊಂಡ ಬಹುಮನಿ ಸುಲ್ತಾನರೂ ಅಕ್ಕಲಕೋಟದಲ್ಲಿ ರಾಜ್ಯಭಾರ ಮಾಡಿದ್ದಾರೆ. ಕನ್ನಡದಲ್ಲಿ ವಚನಗಳನ್ನು ರಚಿಸಿರುವ ಶಿವಯೋಗಿ ಸಿದ್ದರಾಮೇಶ್ವರ ಅಮುಗೆದೇವಯ್ಯ ಗಣೇಶ ಮಸಣಯ್ಯ ಮುಂತಾದ ಶರಣರು ಅಕ್ಕಲಕೋಟದ ಸುತ್ತಮುತ್ತಲಿನ ಊರುಗಳವರೇ 'ಆಗಿದ್ದಾರೆ. ಹೀಗೆ ಯಾವುದೆ ಮಗ್ಗಲ್ಲಿನಿಂದ ವೀಕ್ಷಿಸಿದರೂ ಅಕ್ಕಲಕೋಟ ಪ್ರದೇಶ ಅಪ್ಪಟ ಕನ್ನಡ ನೆಲೆಮನೆಯಾಗಿದೆ ಎಂಬುದು ಸಾಬೀತಾಗುತ್ತದೆ.

20ನೇ ಶತಮಾನದ ಮಧ್ಯಂತರದವರೆಗೆ ಭಾರತವನ್ನಾಳಿದ ಬ್ರಿಟಿಷರು ಸಂಪೂರ್ಣ ಭಾರತವನ್ನು ಸುಮಾರು 260 ಸಂಸ್ಥಾನಗಳಲ್ಲಿ ವಿಭಜಿಸಿದ್ದರು. ಈ ಸಂಸ್ಥಾನದಲ್ಲಿ ಅಕ್ಕಲಕೋಟ ಕೂಡ ಒಂದು ಸಂಸ್ಥಾನವಾಗಿತ್ತು. ಆದರೆ ದು:ಖದ ಸಂಗತಿಯೆಂದರೆ ಸಂಸ್ಥಾನಕ್ಕೆ ನೇಮಕಗೊಂಡ ರಾಜರು ಮರಾಠಿ ಭಾಷಿಕರಾಗಿದ್ದರು. ಹೀಗಾಗಿ ಶಿಕ್ಷಣ ಆಡಳಿತ ಎಲ್ಲವೂ ಮರಾಠಿಮಯವಾಗಿ ಪರಿಣಮಿಸಿದ್ದವು. ನೋಡುತ್ತೆನೆಂದರೂ ಕನ್ನಡ ಶಾಲೆಗಳಿರಲಿಲ್ಲ ತತ್ಪರಿಣಾಮವಾಗಿ ಸ್ವಾತಂತ್ರ್ಯದ ನಂತರ ನ್ಯಾಯವಾಗಿ ಕರ್ನಾಟಕ ರಾಜ್ಯಕ್ಕೆ ಸೇರಬೇಕಾದ ಅಕ್ಕಲಕೋಟ ಸಂಸ್ಥಾನ 1948 ಜನೇವರಿ 3 ರಂದು ಭಾರತದ ಇತರ ಸಂಸ್ಥಾನಗಳಲ್ಲಿಯೇ ಪ್ರಪ್ರಥಮವಾಗಿ ಮಹಾರಾಷ್ಟ್ರದ ಮುಂಬೈ ಆಡಳಿತಕ್ಕೆ ಒಳಪಟ್ಟು ಸೋಲಾಪುರ ಜಿಲ್ಲೆಯನ್ನು ಸೇರಿಕೊಂಡಿತ್ತು. ಕನ್ನಡಮ್ಮಳ ಸೆರಗೊಂದು ಹರಿದು ಮಹಾರಾಷ್ಟ್ರದ ಅಂಚನ್ನೂ ಕೂಡಿಕೊಂಡಿತ್ತು.

ಇದರಿಂದಾಗಿ ಈ ಭಾಗದ ಕನ್ನಡ ಜನ ಪೇಚಿಗೋಳಗಾದರು ತುಂಬ ನೊಂದುಕೊಂಡರು ಅಖಂಡ ಕರ್ನಾಟಕ ಒಂದಾಗಲಿ ಎಂಬ ಹಿರಿದಾಸೆಯನ್ನು ಹೊಂದಿದರು. ಕನ್ನಡ ಕಟ್ಟುವ ಮಹತ್ವಕಾರ್ಯದಲ್ಲಿ ಕಂಕಣಬದ್ದರಾದರು ಅಕ್ಕಲಕೋಟದವರೇ ಆದ ಅಣ್ಣಾರಾವ ಮೋದಿ, ಶಂಕ್ರೆಪ್ಪಾ ಲೋಕಾಪುರೆ, ಕಾಶಿಸಾಬ, ಬೇಕಲಿ, ದಾನಕ್ಕ ಶಿವಗೊಂಡೆ, ನಾಗಯ್ಯ ಸ್ವಾಮಿ, ಗುರುಲಿಂಗಪ್ಪ ಖೇಡಗಿ, ಶಿರವಾಳದ ಶರಣಪ್ಪ ತಾನವಾಡೆ ವಳಸಂಗದ ಚಂದ್ರಮಪ್ಪ ಬಳೂರಗಿ ದುದನಿಯವರಾದ ಬಸವಣಪ್ಪ ಸೋಳಸೆ, ಊಗರಿಯ ಚೆನ್ನಪ್ಪ ಪಾಟೀಲ

ಅಪ್ಪಾಸಾಹೇಬ ಹಾಲಹಳ್ಳಿ ಮೊದಲಾದ ಮಹನೀಯರು ತಮ್ಮ ಭಾಗದಲ್ಲಿ ಕನ್ನಡ ಕಟ್ಟುವ ಕೆಲಸವನ್ನು ಪ್ರಾರಂಭ ಮಾಡಿದರು.

ಶುದ್ಧ ಕನ್ನಡಭಿಮಾನಿಗಳಾದ ಇವರು ಮರಾಠಿ ಮಯವಾದ ಅಕ್ಕಲಕೋಟ ಪ್ರಾಂತದಲ್ಲಿ ಕನ್ನಡವನ್ನು ಮತ್ತೆ ನೆಲೆಗೊಳಿಸುವ ವಿಷಯದಲ್ಲಿ ಅಪಾರವಾದ ಪ್ರಯತ್ನ ಪಟ್ಟಿದ್ದಾರೆ. ಆ ಸಂಧರ್ಬದಲ್ಲಿ ಅವರು ಅನುಭವಿಸಿದ ಕಷ್ಟ ನಷ್ಟಗಳು ಅನಂತವಾಗಿವೆ.

***ಕನ್ನಡ ಶಾಲೆ:-***

1948ರಲ್ಲಿ ಮೈಂದರ್ಗಿಯಲ್ಲಿ ಸ್ಥಾಪಿತವಾದ ನೇಕಾರ ಸಂಘದ ಉದ್ಘಾಟನೆಗೆಂದು ಮೈಂದರ್ಗಿಗೆ ಆಗಮಿಸುತ್ತಿದ್ದ ಮುಂಬೈ ಇಲಾಖೆಯ ಶಿಕ್ಷಣ ನಿರ್ದೇಶಕರಾದ ಕನ್ನಡದ ಹೆಮ್ಮೆಯ ಪುತ್ರ ರಾದಂಗಲರ್ ಪಾವಡೆಯವರನ್ನು ಅಣ್ಣಾರಾವ ಮೋದಿ ಮೊದಲಾದ ಪ್ರಮುಖರು ತಮ್ಮೂರಲ್ಲಿ ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಅವರೊಂದಿಗೆ ಅಕ್ಕಲಕೋಟ ಪ್ರಾಂತದ ಕನ್ನಡಿಗರ ಸ್ಥಿತಿ-ಗತಿಗಳನ್ನು ಕುರಿತು ಚರ್ಚಿಸಿದರು. ಈ ಹಿಂದೆ ಅಕ್ಕಲಕೋಟ ಸಂಸ್ಥಾನವನ್ನು ಮರಾಠಿಗರಾದ ಭೋಸ್ಲೆ ಮನೆತನದವರು ಆಳಿದ್ದರಿಂದ, ಮೇಲಾಗಿ ಈಗ ಇದು ಮಹಾರಾಷ್ಟ್ರ ಸರಕಾರದ ಆಡಳಿತಕ್ಕೆ ಒಳಪಟ್ಟಿದ್ದರಿಂದ ಇಲ್ಲಿ ಕನ್ನಡ ಶಾಲೆಗಳಿಲ್ಲ. ಹೀಗಾಗಿ 100ಕ್ಕೆ 90ರಷ್ಟು ಕನ್ನಡಿಗರನ್ನು ಹೊಂದಿದ ಅಕ್ಕಲಕೋಟವು ತಾಯಿಯನ್ನಗಲಿದ ಕರುವಿನಂತಾಗಿದೆ. ನಾವು ಕರ್ನಾಟಕದ ಹೊರಗಿದ್ದರೂ ಚಿಂತೆ ಇಲ್ಲ ನಮಗೆ ಕನ್ನಡ ಬೇಕು ಕನ್ನಡ ಶಾಲೆ ಬೇಕು ಎಂದು ಮಾನ್ಯ ಪಾವಟೆಯವರಲ್ಲಿ ವಿನಂತಿಸಿಕೊಂಡರು. ನೊಂದ ಕನ್ನಡಿಗರ ಈ ಅಳಲನ್ನೂ ಮನಗಂಡ ಪಾವಟೆಯವರು ಶುಭಶ್ಯಶೀಘ್ರ ಎನ್ನುವಂತೆ 1949ರಲ್ಲಿ 1ನೇ ತರಗತಿಯಿಂದ 2ನೇ ತರಗತಿಯವರೆಗೆ ಅಕ್ಕಲಕೋಟದಲ್ಲಿ ಕನ್ನಡ ಶಾಲೆಯೊಂದನ್ನು ತೆರೆಯುವುದಕ್ಕಾಗಿ ಅನುಮತಿ ನೀಡಿದರು. ಅಣ್ಣಾರಾವ ಮೋದಿ ಮೊದಲಾದ ಕನ್ನಡ ಪ್ರಮುಖರು ಶಾಲೆಯನ್ನು ಸ್ಥಳೀಯ ಶಿವಬಸಪ್ಪ ಮಠದಲ್ಲಿ ಪ್ರಾರಂಭಿಸಿದರು. ಈಗಾಗಲೆ ಮರಾಠಿ ಓದುತ್ತಿದ್ದ ಮಕ್ಕಳ ಮನಸ್ಸನ್ನು ಅಣ್ಣಾರಾವ ಮೋದಿಯವರು ಚಾಕಲೇಟು, ಬಿಸ್ಕೀಟ, ಚೆಂಡು, ಬುಗರಿ, ಗಿಣಿದಾಂಡುಗಳ ಮೂಲಕ ಕನ್ನಡ ಶಾಲೆಯತ್ತ ಆಕರ್ಷಿಸಿದರು. ಪಾಠಿ, ಬಳಪ, ಪುಸ್ತಕ, ಪೆನ್ನುಗಳನ್ನು ಸ್ವಂತ ಹಣದಿಂದ ಖರೀದಿಸಿ ಅವುಗಳನ್ನು ಮಕ್ಕಳಿಗೆ ಉಚಿತವಾಗಿ ನೀಡಿದರು. ಬಡ ವಿದ್ಯಾರ್ಥಿಗಳಿಗೆ ವಸತಿ ವ್ಯವಸ್ಥೆಯೊಂದಿಗೆ ಊಟ, ಬಟ್ಟೆ ಕೊಡುವ ಏರ್ಪಾಡು ಮಾಡಿದರು. ಹೀಗಾಗಿ ಕನ್ನಡ ಶಾಲೆ ತುಂಬ ಯಶಸ್ವಿಯಾಯಿತು. ಇದರಿಂದಾಗಿ ಅಣ್ಣಾರಾವ ಮೋದಿಯವರಿಗಾದ ಸಂತೋಷ ಅಷ್ಟಿಷ್ಟಲ್ಲ!

ಆನಂತರ ಕನ್ನಡಾಭಿಮಾನಿಗಳ ಸಹಕಾರದಿಂದ ಅಕ್ಕಲಕೋಟ ತಾಲ್ಲೂಕಿನ ಪ್ರತಿ ಹಳ್ಳಿಯಲ್ಲೂ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿದರು. ಇದರ ಬೆನ್ನ ಹಿಂದೆಯೇ ಅಂದರೆ 1952ರಲ್ಲಿ ಅಕ್ಕಲಕೋಟದಲ್ಲಿ ಕನ್ನಡ ಪ್ರೌಢ ಶಾಲೆಯೊಂದನ್ನು ಪ್ರಾರಂಭಿಸಿದರು. ಈ ಶಾಲೆಗೆ ಕಟ್ಟಡ ಹೊಂದಿದ ನಿವೇಶನವೊಂದನ್ನು ಕನ್ನಡ ಪ್ರೇಮಿಗಳಾದ ರೇವಣಸಿದ್ದಪ್ಪ ಮಂಗಳೂರೆಯವರು ಕಾಣಿಕೆಯಾಗಿ ನೀಡಿದರು.

***ಆಡಳಿತದಲ್ಲಿ ಕನ್ನಡ:-***

ಗಡಿಭಾಗದಲ್ಲಿ ಅಕ್ಕಲಕೋಟ ಪ್ರದೇಶದಲ್ಲಿ ಕನ್ನಡ ಶಿಕ್ಷಣವನ್ನು ಪ್ರಾರಂಭಿಸುವ ದಿಶೆಯಲ್ಲಿ ಭಾರೀ ಗೆಲುವು ಸಾಧಿಸಿದ ಅಣ್ಣಾರಾವ ಮೋದಿಯವರು ಆಡಳಿತ ಕಛೇರಿಗಳಲ್ಲೂ ಕನ್ನಡ ಅನುಷ್ಠಾನಗೊಳಿಸುವ ವಿಷಯದಲ್ಲಿ ಕಾರ್ಯ ಪ್ರವೃತ್ತರಾದರು. ಈ ಕುರಿತು ಅಂದಿನ ಮುಂಬೈ ಸರಕಾರದ ಮುಖ್ಯಮಂತ್ರಿ ಮಾನ್ಯ ಶ್ರೀ ಬಾಳಾ ಸಾಹೇಬ ಖೇರರ್‌ವರಿಗೆ ಅರ್ಜಿಯೊಂದನ್ನು ಸಲ್ಲಿಸಿದರು ಈ ಅರ್ಜಿಯಿಂದ ಅವರ ಅಳಲನ್ನು ತಿಳಿದುಕೊಂಡ ಮಾನ್ಯ ಮುಖ್ಯಮಂತ್ರಿಯವರು ಅಕ್ಕಲಕೋಟದ ಪ್ರತಿಯೊಂದು ಆಡಳಿತ ಕಛೇರಿಗಳಲ್ಲಿ ಗುಮಾಸ್ತನಿಂದ ಮೊದಲು ಮಾಡಿ ಮೇಲಾಧಿಕಾರಿಗಳವರೆಗೂ ದ್ವಿಭಾಷಾ ಪರಿಣಿತರನ್ನು ನೇಮಕ ಮಾಡುವುದರೊಂದಿಗೆ ಎರಡೂ ಭಾಷೆಗಳಲ್ಲಿಯೂ ವ್ಯವಹಾರ ನಡೆಯುವಂತೆ ಆಜ್ಞೆಯೊಂದನ್ನು ಹೊರಡಿಸಿದರು. ಆ ಸಮಯದಲ್ಲಿ ಧಾರವಾಡದ ಹಂಗರಗಿ ನೇಮಕಗೊಂಡಿದ್ದರೆ, ಉಪಪೋಲಿಸ ಅಧಿಕಾರಿಯಾಗಿ ಬಾದಾಮಿಯ ಕಲ್ಯಾಣ ಶೆಟ್ಟಿಯವರು ನೇಮಕವಾಗಿದ್ದರು.

ಹೀಗೆ ಬರೀ ಅಸ್ತಿಪಂಜರವಾಗಿದ್ದ ಅಕ್ಕಲಕೋಟದ ಕನ್ನಡಮ್ಮಳಲ್ಲಿ ರಕ್ತಮಾಂಸ ತುಂಬಿ ಅವಳಿಗೆ ಹೊಸ ಜೀವ ಬರಿಸಿದ ಮೋದಿಯವರ ಸಾಧನೆ ನಿಜಕ್ಕೂ ಸ್ತುತ್ಯಾರ್ಹವಾಗಿದೆ.

***ಅನುಭವಿಸಿದ ಕಷ್ಟ ನಷ್ಟಗಳು:-***

ಅಕ್ಕಲಕೋಟ ಪ್ರದೇಶದಲ್ಲಿ ಕನ್ನಡ ಕಟ್ಟುವ ಸಂಧರ್ಭದಲ್ಲಿ ಅಣ್ಣಾರಾವ ಮೋದಿಯವರಿಗೆ ಎದುರಾದ ಕಷ್ಟಗಳು ಅನಂತವಾಗಿವೆ. ಕನ್ನಡದ ಹೋರಾಟದಿಂದ ಇಡೀ ನನ್ನ ಮನೆಯೇ ಹಾಳಾಗಿದೆ. ಜೈಲಿನಲ್ಲಿ ಕೊಳೆಯುವ ಪ್ರಸಂಗವನ್ನು ಬಂದೊದಗಿದೆ ಎಂದು ಅವರು ಹೇಳುತ್ತಾರೆ. ಅಣ್ಣಾರಾವ ಮೋದಿಯವರು ಎಷ್ಟು ಭಯಾನಕ ಕಷ್ಟ-ನಷ್ಟಗಳನ್ನು ಅನುಭವಿಸಿದ್ದರು ಎಂಬುದು ಅವರ ಈ ಮಾತೊಂದರಲ್ಲಿಯೇ ಸಂಪೂರ್ಣವಾಗಿ ಅಡಕವಾಗಿದೆ.

***ಶರಣಪ್ಪ ಸದಾಶಿವಪ್ಪ ತಾನವಾಡೆ:-***

ಅಕ್ಕಲಕೋಟ ಭಾಗದಲ್ಲಿ ಕನ್ನಡಕ್ಕಾಗಿ ಟೊಂಕ ಕಟ್ಟಿ ಹೋರಾಡಿದವರಲ್ಲಿ ಶರಣಪ್ಪ ತಾನವಾಡೆಯವರೂ ಒಬ್ಬರಾಗಿದ್ದಾರೆ. ಅಕ್ಕಲಕೋಟೆ ತಾಲ್ಲೂಕಿನ ಶಿರವಾಳ ಗ್ರಾಮದ ಸದಾಶಿವಪ್ಪ ಮತ್ತು ಬಸವ್ವ ಎಂಬ ದಂಪತಿಗಳಿಗೆ 10/1/1910 ರಂದು ಜನಿಸಿದ ಶರಣಪ್ಪನವರು 2ನೇ ವರೆಗೆ ಮರಾಠಿ ಶಿಕ್ಷಣವನ್ನು ಮುಗಿಸಿದ್ದಾರೆ. ತಮ್ಮಲ್ಲಿರುವ ಅನನ್ಯವಾದ ಕನ್ನಡ ಪ್ರೇಮದಿಂದ ಕನ್ನಡ ಕಲಿತ್ತಿರುತ್ತಾರೆ.

ಹೈದ್ರಾಬಾದ ಕರ್ನಾಟಕದಲ್ಲಿ ಕನ್ನಡ ಚಳುವಳಿ ನಡೆದ 1948ರ ಸಂದರ್ಭದಲ್ಲಿ ಅಕ್ಕಲಕೋಟ ಭಾಗದಲ್ಲಿಯೂ ಕನ್ನಡಪರ ಚಳುವಳಿ ಪ್ರಾರಂಭವಾಗಿತ್ತು. ಈ ಚಳುವಳಿಯಲ್ಲಿ ಅಣ್ಣಾರಾವ ಮೋದಿ ಮೊದಲಾದವರೊಂದಿಗೆ ಶರಣಪ್ಪಾ ತಾನವಾಡೆಯವರೂ ಪಾಲ್ಗೊಂಡು ಅತ್ಯಂತ ಧೈರ್ಯದಿಂದ ಹೋರಾಡಿದ್ದಾರೆ. ಇದೇ ಸಂದರ್ಭದಲ್ಲಿ ಅಕ್ಕಲಕೋಟದಲ್ಲಿ ಜರುಗಿದ ತಾಲ್ಲೂಕು ಪ್ರಥಮ ಪ್ರಜಾ ಅಧಿವೇಶನದಲ್ಲಿ ಕನ್ನಡ ಭಾಷೆಯನ್ನು ಕುರಿತು ಬರೆದ ಗೊತ್ತುವಳಿಯನ್ನು ಮಂಡಿಸಿದ್ದರು. ಅಕ್ಕಲಕೋಟ

ಭಾಗದಲ್ಲಿ ಮರಾಠಿ ಭಾಷೆಯೊಂದಿಗೆ ಕನ್ನಡವೂ ಬೆಳೆಯಬೇಕು ಎಂಬುದು ಈ ಗೊತ್ತುವಳಿಯ ವಿಷಯವಾಗಿತ್ತು.

ಅಂದಿನ ಮುಂಬೈ ಇಲಾಖೆಯ ಶಿಕ್ಷಣ ನಿರ್ದೇಶಕರಾದ ರಾಂಗಲ್ ಪಾವಟೆಯವರ ಅನುಮತಿ ಪಡೆದು 1948ರ ಸುಮಾರಿಗೆ ತಮ್ಮೂರಲ್ಲಿ ಕನ್ನಡ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು. ಸ್ವತ: ಈ ಶಾಲೆಯ ಅಧ್ಯಕ್ಷರಾಗಿ ತಮ್ಮ ಸ್ವಂತ ಕೆಲಸಗಳನ್ನು ಬದಿಗೊತ್ತಿ ಶಾಲೆಯ ಪ್ರಗತಿಗಾಗಿ ಅವಿರತ ಶ್ರಮಿಸಿದ್ದಾರೆ. ಪ್ರಾರಂಭದಲ್ಲಿ ಕನ್ನಡ ವಿದ್ಯಾರ್ಥಿಗಳ ಅಭಾವ ದಟ್ಟವಾಗಿರುವುದನ್ನು ಗಮನಿಸಿದ ತಾನವಾಡೆಯವರು ಅಂದಿನ ಶಿಕ್ಷಣಾಧಿಕಾರಿಗಳಾದ ಮಲಗೊಂಡ ಪಾಟೀಲರ ಸಹಕಾರ ಪಡೆದು ಮರಾಠಿಯ ಕೆಳಗಿನ ವರ್ಗಗಳನ್ನು ತಾತ್ಕಾಲಿಕವಾಗಿ ಒಂದು ಮಾಡಿ ಕನ್ನಡ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿಸಿದರು.

ತಾನವಾಡೆಯವರು ತಮ್ಮೂರಲ್ಲಷ್ಟೆ ಅಲ್ಲ ಅಕ್ಕಲಕೋಟ ತಾಲ್ಲೂಕಿನ ಪ್ರತಿಯೊಂದು ಹಳ್ಳಿಯಲ್ಲೂ ಕನ್ನಡ ಶಾಲೆಗಳನ್ನು ತೆರೆಯುವದಕ್ಕಾಗಿ ಸತತ ಶ್ರಮಿಸಿದ್ದಾರೆ. ಹೀಗೆ ತಾನವಾಡೆ ಮೊದಲಾದ ಕನ್ನಡ ಹೃದಯಿಗಳು ಅಂದು ಈ ಭಾಗದಲ್ಲಿ ಹೋರಾಡಿದ್ದರಿಂದಲೇ ಇಂದಿಗೂ ಇಲ್ಲಿ ಕನ್ನಡ ಜೀವಂತವಾಗಿದೆ.

ಮೈನಳ್ಳೆ ಅವರು ಬರೆದ ಬೀದರ ತಾಲ್ಲೂಕು ಪರಂಪರೆ ಕುರಿತು **ಶ್ರೀ ಅಶೋಕುಮಾರ ವಿ.:-**

ಕ್ರಿ.ಪೂ ಮೂರನೆಯ ಶತಮಾನದಲ್ಲಿ ಇಡೀ ದಕ್ಷಿಣ ಪ್ರಥಮ ಸಾಮ್ರಾಟ ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು. ಮೌರ್ಯರ ನಂತರ ಶಾತವಾಹನರು ದಕ್ಷಿಣ ಭಾರತದ ಮೇಲೆ ಅಧಿಕಾರ ಸ್ಥಾಪಿಸಿದರು. ನಂತರ ಬಂದ ಪ್ರಭಾವಶಾಲಿ ಮನೆತನಗಳಲ್ಲಿ ಕ್ರಿ.ಶ. ಆರನೆಯ ಶತಮಾನದ ಬಾದಾಮಿ ಚಾಲುಕ್ಯರು ಎಂಟನೆಯ ಶತಮಾನದಲ್ಲಿ ರಾಷ್ಟ್ರಕೂಟರಿಂದ ಪರಾಭವಗೊಂಡರು 923ರಲ್ಲಿ ಚಾಲುಕ್ಯರು ಅಧಿಕಾರಕ್ಕೆ ಬಂದ ಮೊದಲು ಮಳಖೇಡದಿಂದ ಆಮೇಲೆ ಕಲ್ಯಾಣದಿಂದ ಆಳಿದರು. ಹಲವು ವರ್ಷ ಕಲಚೂರ್ಯರ ಆಡಳಿತವಿತ್ತು. ಮುಂದೆ ಪುನ 1184 ರಿಂದ 1200ರವರೆಗೆ ಚಾಲುಕ್ಯರೆ ಆಳಿದರು ಆನಂತರ ದೇವಗೀರಿಯ ಸೇವುಣರ ವಶಕ್ಕೆ ಹೋಯಿತು ಸೇವಣರಿಗೂ ದೂರ ಸಮುದ್ರದ ಹೊಯ್ಸಳರಿಗೂ ಹಾಗೂ ವಾರಂಗಲ್ಲಿನ ಕಾಕತಿಯರಿಗೂ 1294ರಲ್ಲಿ ಘರ್ಷಣೆಗಳಾದವು.

ಬೀದರ ಭಾಗವು ಹಿಂದೂ ಅರಸರ ಅಧೀನದಲ್ಲಿದ್ದಾಗ, ಕಟ್ಟಲ್ಪಟ್ಟಿದ್ದರೂ ಬಹುಮನಿಯ ಕಾಲದಲ್ಲಿ ಪ್ರಸಿದ್ಧಿ ಪಡೆಯಿತು. ಈ ಭಾಗ ಕಾಕತಿಯರ ಕಾಲದಲ್ಲಿ ಕಟ್ಟಿದ್ದು, ಬಸತೆ ಹಯಾತ್ ಎಂಬ ಉರ್ದುವಾರ ಪತ್ರಿಕೆ (2-9-1949) ರಂದು ಉಲ್ಲೇಖಿಸಿದ ಹಾಗೆಯೇ ಬಷಿರೊದ್ದಿನ ಎಂಬ ಇತಿಹಾಸಕಾರರು ಚೌಬಾರ ಗೋಪುರಗಳು ಹಿಂದು ಅರಸರ ಕಾಲದಲ್ಲಿ ಕಟ್ಟಲಾಗಿದೆ ಎಂದು ಹೇಳಿದರೆ ಇನ್ನೋರ್ವ ಯಜಧಾನಿ ಎಂಬ ಬೀದರಿನ ಇತಿಹಾಸ ಬರೆದ ಲೇಖಕ ಮುಸ್ಲಿಂರ ಆಡಳಿತ ಪೂರ್ವ ಚೌಬಾರ ಇತ್ತು ಎಂದು ಹೇಳಿದ್ದನ್ನು ಅವಲೋಕಿಸಿದಾಗ ಬಹುಮನಿ ಸಾಮ್ರಾಜ್ಯ ಗುಲಬರ್ಗಾದಿಂದ ಬೀದರಕ್ಕೆ ಗವಾನ ಮದರ್ಸ 1472 ರಲ್ಲಿ ಕಟ್ಟಿದ್ದಾಗಿದೆ, ಆದರೆ ಚೌಬಾರಾ ಗೋಪುರ ಅದಕ್ಕೆ ಇನ್ನು ಪೂರ್ವ 200 ವರ್ಷ ಹಳೆಯದ್ದು ಎಂಬ ಉಲ್ಲೇಖ ಇಂದಿನ ಸಂಶೋಧನೆಗೆ ಅನುವು ಮಾಡಿಕೊಡುತ್ತದೆ ಹಾಗೂ ಈಗಿರುವ ಬಹುಮನಿ ಕೋಟೆ ಹಿಂದು ಅರಸರ ಕೋಟೆಯನ್ನು ಭದ್ರವಾಗಿ ಕಟ್ಟಿ ಅಭಿವೃದ್ಧಿಪಡಿಸಲಾಗಿದೆ. ಎಂಬ ದಾಖಲೆಗಳ ಆಧಾರವಾಗಿದ್ದರಿಂದ

ಈ ನಿಟ್ಟಿನಲ್ಲಿ ಸಂಶೋಧಕರಿಂದ ಹೆಚ್ಚಿನದನ್ನು ನಿರೀಕ್ಷಿಸಲಾಗಿದೆ. ಆದರೆ ಯಾರು ಗಮನ ಹರಿಸುತ್ತಾರೆ? ಸಮಯವೇ ಹೇಳಬಲ್ಲದು.

ಕ್ರಿ.ಶ. 1325ರಲ್ಲಿ ಮಹಮ್ಮದ್ ಬಿನ್ ತುಘಲಕ್ ಕ್ರಿ.ಶಿ. 1347ರಲ್ಲಿ ಬಹುಮನಿ ಸಾಮ್ರಾಜ್ಯ ಇವರ ಮನೆತನದ ಮಹಮ್ಮದ ಶಹಾನು 1422 ರಿಂದ 1433ರವರೆಗೆ ಆಳಿದರು. ಅಲ್ಲಾವುದ್ದಿನ ದೊರೆ ಕ್ರಿ.ಶ. 1436 ರಿಂದ 1458 ರವರೆಗೆ ಆಳಿದರು. ಇವರ ಕಾಲದಲ್ಲಿ ಪ್ರಗತಿ ಸಾಧಿಸದಿದ್ದರೂ ತನ್ನ ತಂದೆಯ ನೆನಪಿಗಾಗಿ (ಸಮಾಧಿ) ಬೀದರ ಬಳಿ ಇರುವ ಅಷ್ಟೂರನಲ್ಲಿ ಗುಮ್ಮಟಗಳನ್ನು ಕಟ್ಟಿಸಿದನು. ಇಂದಿಗೂ ಈ ಸಮಾಧಿಯು ಪೂಜನೀಯ ಸ್ಥಳ ಮತ್ತು ಭವ್ಯಸ್ಥಳದಲ್ಲೊಂದಾಗಿದೆ. ಇದು ಹಿಂದು ಮುಸ್ಲಿಂರ ಪೂಜಾ ಕೇಂದ್ರವಾದದ್ದು ಅತಿ ಮಹತ್ವದ ಸಂಗತಿ ಹಾಗೂ ಇಂದಿಗೂ ಬೀದರ ನಗರ ನಿರ್ಮಾಪಕನಿಗೆ ಬೀದರನ ವಾಸಿಗಳು ಜಾತಿ ಭೇದವೆನ್ನದೆ ಸಲ್ಲಿಸುವ ಮನಪೂರ್ವಕ ಗೌರವ ವಂದನೆ ಇಡೀ ರಾಷ್ಟ್ರಕ್ಕೆ  ಇದರಿಂದ ಭಾವೈಕ್ಯತೆಯ ಸಂದೇಶದ ರೂಪದಲ್ಲಿ ಕೊಡುತ್ತಿರುವುದು ವಿದ್ವಾಂಸರು ಗಮನ ಹರಿಸಬೇಕಾಗಿದೆ. ತದನಂತರ ಹುಮಾಯನ ಶಾಹ ಆಳಿದರು, ಮೂರನೆಯ ಮಹಮ್ಮದ ಶಹ ಇವನ ಕಾಲದಲ್ಲಿ ದಕ್ಷ ಹಾಗೂ ಪ್ರಾಮಾಣಿಕ ಸಮರ್ಥ ಪ್ರಧಾನ ಮಂತ್ರಿಯಾಗಿ ಅಧಿಕಾರವನ್ನು ವಹಿಸಿಕೊಂಡವನು ಮಹಮ್ಮದ ಗವಾನ ಇವನು ಇರಾನ ರಾಷ್ಟ್ರದ ಗಿಲಾನ ಪ್ರಾಂತದ ಗವನ ಹಳ್ಳಿಯಲ್ಲಿ ಜನಿಸಿ ಕ್ರಿ.ಶ. 1453 ರಲ್ಲಿ ವ್ಯಾಪಾರಕ್ಕೆಂದು ಬೀದರಕ್ಕೆ ಬಂದು ನೆಲೆಸಿ ತನ್ನ ಸ್ವ ಸಾಮರ್ಥ್ಯ, ಚತುರತೆ, ನಿಷ್ಠೆಯಿಂದ ಬಹುಮನಿ ಅರಸರ ಸೇನೆಯನ್ನು ಸೇರಿದನು. ತನ್ನ ದೈಹಿಕ ಮಾನಸಿಕ ಬಲದಿಂದ ಅಧಿಕಾರದಲ್ಲಿ ಉನ್ನತಿಯನ್ನು ಹೊಂದಿದ್ದಾನೆ.

ಮಹಮ್ಮದ ಗವಾನನು ಆಡಳಿತದಲ್ಲಿ ರಾಜ್ಯದ ವಿಸ್ತಾರದೊಂದಿಗೆ ಶೈಕ್ಷಣಿಕ ಅಭಿವೃದ್ಧಿಯು ಬಲಪಡಿಸಿದನು ಕ್ರಿ.ಶ. 1472ರಲ್ಲಿ ಮದರಸಾ-ಎ-ಮಹಮ್ಮದ ಗವಾನ ಎಂಬ ವಿಶ್ವವಿದ್ಯಾಲಯ ಸ್ಥಾಪಿಸಿದನು ಇಂದಿಗೂ ಈ ಶಿಕ್ಷಣ ಮಂದಿರವು ಬೀದರ ನಗರದ ಮಧ್ಯದಲ್ಲಿ ನಿಂತು ಗವಾನನ ಶಿಕ್ಷಣಾಭಿಮಾನದ ಪ್ರತಿರೂಪವಾಗಿ ನಿಂತಿದೆ. ಆ ಕಾಲದಲ್ಲಿ ಈ ವಿಶ್ವವಿದ್ಯಾಲಯ ಬೃಹತ ಗ್ರಂಥಾಲಯ ಹೊಂದಿತ್ತು. ಆದರೆ ಪ್ರಸ್ತುತ ಇರುವ ಜಿಲ್ಲಾ ಗ್ರಂಥಾಲಯದಲ್ಲೂ ಉತ್ತಮವಾದ ಮತ್ತು ಜ್ಞಾನಪೀಠ ಪ್ರಶಸ್ತಿ ಪಡೆದ ಹಾಗೂ ಕೇಂದ್ರ ಮತ್ತು ರಾಜ್ಯ ಆಕಾಡೆಮಿ ಪ್ರಶಸ್ತಿ ಪಡೆದ ಕೃತಿಗಳು ದೊರೆಯದಿರುವುದು ನಮ್ಮ ದುರಂತ. ಆ ಕಾಲದಲ್ಲಿ ರಷ್ಯಾದ ಪ್ರವಾಸಿ ನಿಕಿಟನ ಬೀದರಕ್ಕೆ ಸಂದರ್ಶನ ನೀಡಿದ ಇಡಿ ಹಿಂದುಸ್ಥಾನದಲ್ಲಿ ಬೀದರ ಪ್ರಸಿದ್ಧ ನಗರವೆಂದು ವರ್ಣಿಸಿದ ತದ ನಂತರ ಕ್ರಿ.ಶ. 1929ರಲ್ಲಿ ಶಾಹೀ ಸಾಮ್ರಾಜ್ಯ ಆಳಿದನು. ಕ್ರಿ.ಶ. 1656 ರಲ್ಲಿ ಬೀದರ ಔರಂಗಜೇಬ ಗೆದ್ದುಕೊಂಡನು. ಮಹಮ್ಮದಾಬಾದ ಬೀದರಿನ ಹೆಸರು ಜಾಫರಬಾದ ಬೀದರ ಎಂದು ನಾಮಕರಣ ಮಾಡಿದನು. ಕ್ರಿ.ಶ. 1774 ರಲ್ಲಿ ನಿಜಾಮ-ಎಲ್-ಮುಲ್ಕನು ಮೊಗಲರಿಂದ ದಖ್ಖನಿನ ಸುಭೇದಾರಿಯನ್ನು ಗಳಿಸಿಕೊಂಡು ಹೈದ್ರಾಬಾದದಿಂದ ಆಳಲಾರಂಭಿಸಿ 1948 ಸೆಪ್ಟೆಂಬರ 17 ರಂದು ಹೈದ್ರಾಬಾದ ನಿಜಾಮನಿಂದ ಬೀದರ ಮುಕ್ತಗೊಂಡಿತು. ಬೀದರದಲ್ಲಿ ಅನೇಕ ಪ್ರೇಕ್ಷಣಿಯ ಸ್ಥಳಗಳು ಇವೆ ಅವುಗಳು ಬೀದರ ಕೋಟೆ, ರಂಗಿನ ಮಹಲ, ಹೊನ್ನಿಕೇರಿ, ಮೈಲಾರ ಮಲ್ಲಣ್ಣಾ, ಪಾಪನಾಶ, ರಾಘವೇಂದ್ರ ದೇವಸ್ಥಾನ, ಕೌಠಾ ಸೇತುವೆ, ಜನವಾಡ ಗುರುದ್ವಾರ, ಸುಕ್ಲತೀರ್ಥ, ಶಿನಿ ಶಿಫ್ನಾಪೂರ ಮತ್ತು ಗಾಯಮುಖ ಸಬ್ಬಲ ಬರೀದ ಶಾಹಿ ಉದ್ಯಾನವನ, ನರಸಿಂಹ ಝರಣಿ, ಮಂಗಲಪೇಟ ಚರ್ಚ್, ಚೌಬಾರ, ಸಾಧುಘಾಟಮ ಅಗ್ರಹಾರ, ಬೌದ್ಧವಿಹಾರ, ನಾನಕ ಝರಿ, ಅಬ್ದುಲ ಫೈಸ್ ದರ್ಗಾ, ಶೆಖಿನೂರ ದರ್ಗಾ, ರಾಮಮಂದಿರ, ಶಾರಹನುಮಾನ, ಜೈನಮಂದಿರ, ಮುಲ್ತಾನಿ ಪಾಷಾ ದರ್ಗಾ ಮತ್ತು ಇತರ ದರ್ಗಾಗಳು, ಮಂಗಲ ಪೇಟ,

ಮಹಮ್ಮದ ಗವಾನ ಮದರಸಾ, ಚಿತ್ರಮಂದಿರ, ನ್ಯಾಯ ಬೆಲೆ ಅಂಗಡಿ, ಪೋಲಿಸ ಠಾಣೆಗಳು, ಉದ್ಯಾನಗಳು, ಹಬ್ಬಗಳಂದು ಸಂತೆ ಮತ್ತು ಜಾತ್ರೆಗಳು ನಡೆಯುತ್ತವೆ. ಜಾನಪದ ಕಲೆಗಳು, ಗೊಂದಲಿಗರು, ಭೂತೇರ, ಪುರವಂತರು, ಬಹುರೂಪಿಗಳು, ಹುಲಿವೇಷಕುಣಿತ, ಅಲಾಯಿ ಕುಣಿತ, ಪೈತ್ರಿ(ಆಲಾಯಿ) ದೊಡ್ಡಾಟ, ಡಪ್ಪಿನಾಟ, ಕೋಲಾಟ, ಚಿಟಕಿ, ಜನಪದ ಹಾಡುಗಳು, ಕರಕುಶಲ ಕಲೆಗಳು, ಬುಡಕಟ್ಟು ಜನಾಂಗ, ಸಂಗೀತ ಶಾಸನಗಳು, ಜನವರ್ಗ, ಲಮಾಣಿ ಜನರು, ಮೈತಾರರು, ಕಲೆ ಸಂಸ್ಕೃತಿ, ಧರ್ಮ ಸಂಸ್ಕೃತಿ, ಸಾಹಿತ್ಯ, ಒಕ್ಕಲುತನ (ಕೃಷಿ), ರೇಷ್ಮೆ ಬೇಸಾಯಿ, ಪಶುಪಾಲನೆ, ಕೈಗಾರಿಕೆಗಳು, ಮೀನುಗಾರಿಕೆ, ಶಿಕ್ಷಣ ಸೌಕರ್ಯ, ಆರೋಗ್ಯ, ಸಾರಿಗೆ ಸಂಪರ್ಕ, ಸಹಕಾರಿ ಕ್ಷೇತ್ರದ ಸೇವೆ, ಎನ್.ಎಸ್.ಎಸ್.ಕೆ. ಈ ತಾಲ್ಲೂಕಿನಲ್ಲಿ ಕಾರ್ಯ ತತ್ಪರವಾಗಿದೆ.

ಸರ್ಕಾರದ ಯೋಜನೆಗಳು ಮತ್ತು ಇತರ ಅಭಿವೃದ್ಧಿ ಕಾರ್ಯಗಳ ಬಗ್ಗೆ ಜನರೆದುರಿಗಿಡಲು ಮಾಧ್ಯಮಗಳ ಕೊರತೆಯಂತು ಈ ತಾಲ್ಲೂಕಿನಲ್ಲಿ ಇಲ್ಲ. ಸುಮಾರು 80 ಪತ್ರಿಕೆಗಳು ನೊಂದಾಯಿಸಲ್ಪಟ್ಟಿವೆ. ಸುಮಾರು 55 ಪತ್ರಿಕೆಗಳು ಕಾರ್ಯ ನಿರ್ವಹಿಸುತ್ತಿವೆ ವಾರ, ಪಾಕ್ಷಿಕ, ಮಾಸ ಪತ್ರಿಕೆಗಳುಂಟು. ಸ್ಥಳೀಯ ದೂರದರ್ಶನ (ಸಿ.ಸಿ.ಎನ್) ಪ್ರಸಾರದ ಕೇಂದ್ರದ ಸೇವೆ ಇಲ್ಲಿದೆ. ರಾಜ್ಯಮಟ್ಟದ, ರಾಷ್ಟ್ರಮಟ್ಟದ ಕೆಲವು ಪತ್ರಿಕೆಗಳ ಕಾರ್ಯಾಲಯ ಇಲ್ಲಿದ್ದು ಎಲ್ಲಾ ವರದಿಗಾರರು ವಸ್ತು ನಿಷ್ಠ ವರದಿಗಳು ಮಾಡುತ್ತ ಸ್ಥಳೀಯ ಸಮಸ್ಯೆಗಳಿಗೆ ಸ್ಪಂದಿಸಿ ಬೀದರಿನ ಅಭಿವೃದ್ಧಿಗಾಗಿ ತಮ್ಮದೆ ಆದಂತಹ ಕೊಡುಗೆಯನ್ನು ನೀಡುತ್ತಿದ್ದಾರೆ.

**ಬೀದರ ಜಿಲ್ಲೆಯಿಂದ ಪ್ರಕಟವಾಗುತ್ತಿರುವ ಪತ್ರಿಕೆಗಳು:–**

| | |
|---|---|
| 1. ಉತ್ತರ ಕರ್ನಾಟಕ | ಶ್ರೀ ಶಿವಶರಣಪ್ಪಾ ವಾಲಿ |
| 2. ಪಬ್ಲಿಕ್ | ಶ್ರೀ ಗಂಧರ್ವ ಸೇನಾ |
| 3. ಜನದನಿ | ಶ್ರೀ ಮಲ್ಲಿಕಾರ್ಜುನ ಸ್ವಾಮಿ |
| 4. ಜನಪರ | ಶ್ರೀ ಶಿವರಾಜ ಕಾಡೋದೆ |
| 5. ವಚನ ಕ್ರಾಂತಿ | ಶ್ರೀ ಬಾಬು ವಾಲಿ |
| 6. ಪರಿಹಾರ | ಶ್ರೀ ಮಲ್ಲಿಕಾರ್ಜುನ ಬಿರಾದಾರ |
| 7. ಬೀದರ ರಹಸ್ಯ | ಶ್ರೀ ಡಿ.ಕೆ. ಸಿದ್ರಾಮ |
| 8. ಕಾರಂಜಾ ಎಕ್ಸಪ್ರೇಸ್ | ಶ್ರೀ ತಿಪ್ಪಣ್ಣ ಭೋಸಲೆ |
| 9. ಬಹಿರಂಗ ಸುದ್ಧಿ | ಶ್ರೀ ಗುರುನಾಥ ಗಡ್ಡೆ |
| 10. ತರುಣ ಶಕ್ತಿ | ಶ್ರೀ ಅನಿಲಕುಮಾರ ಪಾಟಿಲ |
| 11. ಸಪ್ತ ಸ್ವರ | ಶ್ರೀ ಮಹಾಲಿಂಗ ಶೀಲವಂತ |
| 12. ಬಹಮನಿ ಕೋಟೆ | ಶ್ರೀ ಶಿವಕುಮಾರ ವಣಗೇರಿ |
| 13. ಬೀದರ ಸಂಪರ್ಕ | ಶ್ರೀ ದೀಪಕ ಮನ್ನಳ್ಳಿ |
| 14. ಬಸವ ದನಿ | ಶ್ರೀ ದಿಲೀಪ ಕಮಠಾಣೆ |
| 15. ಕ್ರಾಂತಿ ಕಲ್ಯಾಣ | ಶ್ರೀ ಜಗನ್ನಾಥ ಕನಶೆಟ್ಟಿ |
| 16. ರಾಜೋಳೆ ಸಂಘರ್ಷ | ಶ್ರೀ ಎಂ.ಜಿ.ರಾಜೋಳೆ |
| 17. ಯುವರಂಗ | ಶ್ರೀ ಶಶಿಕಾಂತ ಪಾಟಿಲ |
| 18. ಈ ಸೂರ್ಯಾಸ್ತ | ಶ್ರೀ ವಿಜಯಕುಮಾರ ಕರಂಜೆ |
| 19. ಸಂಜೆ ಅಂತರ ಸುದ್ದಿ | ಶ್ರೀ ಮಾಳಪ್ಪಾ ಅಡಸಾರೆ |
| 20. ಸ್ವಾಭಿಮಾನಿ ಕರ್ನಾಟಕ | ಶ್ರೀ ಚಂದ್ರಕಾಂತ ಪಾಟೀಲ |
| 21. ಅಶೋಕ ಕೋಟೆ | ಶ್ರೀ ಅನಿಲಕುಮಾರ ಕರಂಜೆ |
| 22. ಬೀದರ ಜಂಗ | ಶ್ರೀ ಪ್ರಭುರಾವ ವಾಸಮತೆ |
| 23. ದೃಷ್ಟಿ | ಶ್ರೀ ಚಂದ್ರಕಾಂತ ಪಾಟೀಲ |
| 24. ಜನತಾ ಟೈಮ್ಸ | ಶ್ರೀ ರಾಮಕೃಷ್ಣ ಬಡಶೇಸಿ |
| 25. ಕ್ರಾಂತಿ ಭೂಮಿ | ಶ್ರೀ ನಾಗಶೆಟ್ಟಿ ಧರಮಪೂರ |

| | |
|---|---|
| 26. ಬಸವ ಭೂಮಿ | ಶ್ರೀ ಶಿವರಾಜ ಕನಶೆಟ್ಟಿ |
| 27. ಬೀದರ ಚಳುವಳಿ | ಶ್ರೀ ಕಲ್ಯಾಣರಾವ ಪಾಟೀಲ |
| 28. ಶಾಂತಿ ಕಿರಣ | ಶ್ರೀ ಪೂಜ್ಯ ಶ್ರೀ ಬಸವಲಿಂಗ ಪಟ್ಟದೇವರು |
| 29. ಸೀಮಾ ವಾರ್ತಾ | ಶ್ರೀ ಗುರುನಾಥ ಗಡ್ಡೆ |
| 30. ಉಸೂಲ | ಶ್ರೀ ಮಾರುತಿ ಹಾಕಾ |
| 31. ನಾರಂಜಾ ಎಕ್ಸಪ್ರೇಸ್ | ಶ್ರೀ ಸದಾನಂದ ಹಮಿಲಾಪೂರ |
| 32. ಹಿತರಕ್ಷಕ | ಶ್ರೀ ರೇವಣಸಿದ್ದಪ್ಪಾ ದರ್ಗೆ |
| 33. ಬೀದರ ಪೋಸ್ಟ | ಶ್ರೀ ರೇವಣಸಿದ್ದಪ್ಪಾ ದರ್ಗೆ |
| 34. ಬಡ ಭಾರತ | ಶ್ರೀ ವಿಜಯಕುಮಾರ ಪರ್ಮಾ |
| 35. ಕಲ್ಯಾಣ ಶಾಸನ | ಶ್ರೀ ಪ್ರಭು ಪಾಟಿಲ |
| 36. ಕೆಂಪು ಭೂಮಿ | ಶ್ರೀ ಶ್ರೀಧರ ಮಾಲೆ |
| 37. ಕರ್ಮಭೂಮಿ | ಶ್ರೀ ಅರವಿಂದ ಅರಳಿ |
| 38. ವಿಸ್ವಾಸಿಗೆ | ಶ್ರೀ ಭಗವಾನ ನೌಬಾದಕರ |
| 39. ಬೀದರ ರಾಜಣ್ಣಾ | ಶ್ರೀ ಶಾಂತಕುಮಾರ |
| 40. ಪ್ರಜಾಚಳುವಳಿ | ಶ್ರೀ ರಮೇಶ ಬಿರಾದಾರ |
| 41. ಮಾಂಜ್ರಾ ಎಕ್ಸಪ್ರೇಸ್ | ಶ್ರೀ ಚಂದ್ರಕಾಂತ ಜೋಪಾಟೆ |
| 42. ಬೀದರ ಜಾಗೃತಿ | ಶ್ರೀ ವಿ. ಕಲ್ಯಾಣರಾವ |

## ಹಿಂದಿ ಪತ್ರಿಕೆಗಳು

| | |
|---|---|
| 1. ಬೀದರ ಕಿ ಆವಾಜ್ | ಶ್ರೀ ಖಾಜಿ ಹರ್ಷದ ಅಲಿ |
| 2. ಬೀದರ ಸಂದೇಶ | ಶ್ರೀ ಕಮಲಾಕಾರ ಜೋಷಿ |
| 3. ಧಮನ್ | ಶ್ರೀ ಸಿದ್ರಾಮಯ್ಯಾ ಸ್ವಾಮಿ |
| 4. ನಾನಕ ಟೈಮ್ಸ | ಶ್ರೀ ಬಂಟೀ ಸಿಂಗ್ |
| 5. ಮಹಾಕಾಯಾಸ | ಶ್ರೀ ಮುರಳೀಧರರಾವ ಕಾಳೆ |
| 6. ಮಾಣಿಕ ರತನಾ | ಶ್ರೀ ಜ್ಞಾನದಾಸ ಮಹಾರಾಜ |
| 7. ಮನ್ಸೂಬಾ | ಶ್ರೀ ಜ್ಞಾನದಾಸ ಮಹಾರಾಜ |
| 8. ಬೀದರ ಜಾಗೃತಿ | ಶ್ರೀ ಜ್ಞಾನದಾಸ ಮಹಾರಾಜ |
| 9. ಬಿಜಲಿ | ಶ್ರೀ ಗೋವರ್ಧನ ಪಾಲಂ |
| 10. ಬಂಜಾರ ಗರ್ಜನೆ | ಶ್ರೀ ಬಸವರಾಜ ಪಾವರ |

## ಮರಾಠಿ ಪತ್ರಿಕೆಗಳು

| | |
|---|---|
| 1. ಸೀಮಾ ವಾರ್ತಾ | ಶ್ರೀ ಗುರುನಾಥ ಗಡ್ಡೆ |

## ಉರ್ದು ಪತ್ರಿಕೆಗಳು

| | |
|---|---|
| 1. ಹೈದ್ರಾಬಾದ ಕರ್ನಾಟಕ | ಶ್ರೀ ಅಬ್ದುಲ್ ಆಹಿದ್ |
| 2. ಸುರ್ಖ್ ಜಮೀನ್ | ಶ್ರೀ ಕಾಜಿ ಅರ್ಷದ ಅಲಿ |
| 3. ಅದಾಬಿ ಅಕ್ಕಾಸ್ | ಶ್ರೀ ಎಸ್.ಎಸ್.ಖಾದ್ರಿ |
| 4. ಬಸಾತೆ ಹಯಾತ್ | ಶ್ರೀ |

## ಇಂಗ್ಲೀಷ ಪತ್ರಿಕೆಗಳು

| | |
|---|---|
| 1. ಪಬ್ಲಿಕ್ ಕಾನ್ಸರ್ನ್ಸ | ಶ್ರೀ ಅಬ್ದುಲ್ ಖದೀರ್ |

## *ಗ್ರಾಮ ಪಂಚಾಯತ ಮತ್ತು ನಗರ ಸಭೆಗಳು*

ಬೀದರ ತಾಲ್ಲೂಕು ಹಾಗೂ ಜಿಲ್ಲಾ ಕೇಂದ್ರವಾಗಿದ್ದರಿಂದ ಜನಸಂಖ್ಯೆ 2 ಲಕ್ಷಕ್ಕೂ ಮೇಲ್ಪಟ್ಟಿದ್ದರಿಂದ ನಗರ ಸಭೆ ಸಂಸ್ಥೆ ಇದೆ. ಈ ಸಂಸ್ಥೆಯು 35 ಸದಸ್ಯರನ್ನು ಹೊಂದಿದೆ. ಹಳೆ ನಗರವಾದ ಮಂಗಲಪೇಟಿನ ಸಂಖ್ಯೆ 1 ರಿಂದ ಆರಂಭಗೊಂಡು 35 ಕ್ಕೆ ಮುಕ್ತಾಯಗೊಳ್ಳುತ್ತದೆ. ಹಳೆ ನಗರದಲ್ಲಿ ಹೆಚ್ಚಿನವರು ಮುಸ್ಲಿಂರು ಆಗಿರುವುದರಿಂದ ಮುಸ್ಲಿಂ ಸದಸ್ಯರೆ ಆರಿಸಿ ಬರುತ್ತಾರೆ. 2–3 ಜನರು ಹಿಂದುಗಳು ಗೆಲ್ಲುತ್ತಾರೆ. ಅಧಿಕಾರ ಪಾಲು ಸಿಗಬೇಕೆನ್ನುವ ಉದ್ದೇಶದಿಂದ ಎಲ್ಲಾ ವರ್ಗಗಳ ಆಧಾರದ ಮೇಲೆ ಮೀಸಲಾತಿ ಪ್ರಭಾವ ಈ ನಗರ ಸಭೆ ಮೇಲೆ ಬಿದ್ದಿದೆ. ಪ್ರಸ್ತುತ ಮತ್ತು ಪ್ರಥಮ ಬಾರಿಗೆ ಮುಸ್ಲಿಂ ಸಮುದಾಯದ ಮಹಿಳೆ ನಗರ ಸಭೆ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದಾರೆ. ಸ್ಥಾಯಿ ಸಮಿತಿ ಮತ್ತು ಉಪಾಧ್ಯಕ್ಷ ಸ್ಥಾನಗಳುಂಟು ಮಂಗಲ ಪೇಟ ಬ್ರಹ್ಮನವಾಡಿ, ಗೋಲೆಖಾನ್ ಸಿದ್ದಿತಾಲಿಮ, ರೊಹತಿಗಲ್ಲಿ, ಮುಲ್ತಾನಿ ಕಾಲೋನಿ, ರಂಗರೇಜಗಲ್ಲಿ, ಶಾಹಗಂಜ, ಮನಿಯಾರ್ ತಾಲೀಮ್, ನೂರತಾಲಿಮ, ನಯಾಕಮಾನ, ಆದರ್ಶ ಕಾಲೋನಿ, ಆನಂದನಗರ, ಶಿವನಗರ, ಮಾಧವನಗರ, ಪ್ರತಾಪನಗರ, ಹುಡ್ಕೋಕಾಲೊನಿ (ಎಲ್.ಐ.ಜಿ), ರಾಮನಗರ, ಜೈ ಭೀಮನಗರ, ಅಲ್ಲಮ ಪ್ರಭು ನಗರ, ಇದು ಬೀದರ ನಗರ ಸಭೆಯ ಅಲ್ಪ ಚಿತ್ರಣವಾದರೆ ಬೀದರ ತಾಲ್ಲೂಕಿನಲ್ಲಿ 33 ಗ್ರಾಮ ಪಂಚಾಯತಗಳಿವೆ. 9 ಹೋಬಳಿಗಳು ಅವುಗಳು ಯರನ್ನಳ್ಳಿ, ಹಳೆಂಬರ, ಮನ್ನಳ್ಳಿ, ಹಳ್ಳದಕೇರಿ, ಚಿಟ್ಟಾ, ಯಕತಪೂರ, ಗಾದಗಿ, ಚಿಲ್ಲರ್ಗಿ, ಜಾಂಪಾಡಗಳಲ್ಲದೆ ಅನೇಕ ಹಳ್ಳಿಗಳಿಂದ ಕೂಡಿದೆ 19 ಜನವಸತಿ ಇಲ್ಲದ ಗ್ರಾಮಗಳು 17 ತಾಂಡಗಳು ಇವೆ.

### *ಬೀದರ ತಾಲ್ಲೂಕಿನ ಗ್ರಾಮ ಪಂಚಾಯತಗಳು*

| ಕ್ರ.ಸಂ. | ಪಂಚಾಯತ ಹೆಸರು | ಗ್ರಾಮಗಳ ಹೆಸರು |
|---|---|---|
| 1 | ಗಾದಗಿ | ಗಾದಗಿ, ಶಮರಾಜಪೂರ, ಸೋಲಪುರ, ಕಬೀರವಾಡಿ, ಸಿಪ್ಪಲಗೇರಾ, ಕಮಲಾಪೂರ, ಮಾಮನಕೇರಿ |
| 2. | ಚಿಲ್ಲರ್ಗಿ | ಚಿಲ್ಲರ್ಗಿ, ಮಿರ್ಜಾಪುರ(ಜೆ), ಬಸಂತಪೂರ, ಜಾಂಪಡ |
| 3 | ಅಷ್ಟೂರ | ಅಷ್ಟೂರ, ಇಮಾಮಪೂರ, ಗುಮ್ಮಾ, ತಾಜಲಾಪೂತ, ವಡವಾಡ |
| 4. | ಮಾಳೆಗಾಂವ | ಮಾಳೆಗಾಂವ, ಅಮದಲವಾಡ, ಕಪಲಾಪೂರ(ಜೆ) ಅಲಮಾಸಪೂರ, ರಸೂಲಬಾದ, ನಂದಗಾಂವ |
| 5. | ಚಿಟ್ಟಾ | ಚಿಟ್ಟಾ, ಚಿಟ್ಟಾವಾಡಿ, ಗುನ್ನಳ್ಳಿ |
| 6. | ಅಮಲಾಪೂರ | ಅಮಲ್ಲಾಪೂರ, ಗೋರನಳ್ಳಿ |
| 7. | ಕಮಠಾಣಾ | ಕಮಠಾಣಾ |
| 8. | ನಾಗೂರ | ನಾಗೂರ, ಯಾತ್‌ಕಪೂರ, ಸಾತೋಳಿ, ಮಿರ್ಜಾಪೂರ, ಗೋಡಪಳ್ಳೀ |
| 9. | ಮನ್ನಳ್ಳಿ | ಮನ್ನಳ್ಳಿ |

| | | |
|---|---|---|
| 10. | ಬರೂರ | ಬರೂರ, ಹೊಕ್ರಾಣಾ(ಬಿ), ಹೊಕ್ರಾಣಾ(ಕೆ), ಗೌಸಪೂರ, ಚಿಂತಲಗೇರಾ, ಧರ್ಮಪುರ |
| 11. | ಸಿಂದೋಲ | ಸಿಂದೋಲ, ರಾಜಗೇರಾ, ತರಪಳ್ಳಿ, ಪಾತರಪಳ್ಳಿ, ಶೇಕಪೂರ |
| 12. | ಮರಕುಂದಾ | ಮರಕುಂದಾ, ಬಂಗೂರ, ಮಾಗರಾಳ, ಬಾಪೂರ |
| 13. | ರೇಕುಳಗಿ | ರೇಕುಳಗಿ, ಬಂಬಳಗಿ, ನಿಡವಂಚಾ |
| 14. | ರಂಜೋಳ ಖೇಣಿ | ರಂಜೋಳ ಖೇಣಿ, ಹುಚಕನಳ್ಳಿ, ಶ್ರೀಕಟನಳ್ಳಿ |
| 15. | ಬಗದಲ್ | ಬಗದಲ್, ಬಗದಲ್ ತಾಂಡಾ (ಎ) |
| 16. | ಔರಾದ (ಎಸ್) | ಔರಾದ (ಎಸ್) |
| 17. | ಕಾಡವಾದ | ಕಾಡವಾದ 049308 |
| 18. | ಮಂದಕನಳ್ಳಿ | ಮಂದಕನಳ್ಳಿ |
| 19. | ಚಟ್ನಳ್ಳಿ | ಚಟ್ನಳ್ಳಿ |
| 20 | ಸಂಗೋಳಗಿ | ಸಂಗೋಳಗಿ |
| 21 | ಅಣದೂರ | ಅಣದೂರ |
| 22 | ಕಪಲಾಪೂರ(ಎ) | ಕಪಲಾಪೂರ(ಎ), ಹೊನ್ನಿಕೇರಿ, ಅತಿವಾಳ, ಕೊಳಾರ(ಬಿ) |
| 23 | ಕೋಳಾರ (ಕೆ) | ಕೋಳಾರ (ಕೆ), |
| 24 | ಅಲಿಯಾಬಾದ | ಅಲಿಯಾಬಾದ, ಚೌಳಿ, ಚೊಂಡಿ |
| 25 | ಅಲಿಯಂಬರ | ಅಲಿಯಂಬರ, ಮಮದಾಪೂರ, ರಾಜನಾಳ, ವಿಳಾಸಪುರ |
| 26 | ಯರನ್ನಳ್ಳಿ | ಯರನ್ನಳ್ಳಿ, ಇಸ್ಲಾಂಪುರ, ಬಂಪಳ್ಳಿ, ಸಾಂಗ್ವಿ, ಸಿದಾಪುರ |
| 27 | ಜನವಾಡಾ | ಜನವಾಡಾ, ಸಂಗನಳ್ಳಿ, ದದ್ದಾಪೂರ |
| 28 | ಚಾಂಬೋಳ | ಚಾಂಬೋಳ, ಹಿಪ್ಪಳಗಾಂವ, ನವಲಸಪೂರ, ಶ್ರೀಮಂಡಲ, ಕನ್ನಳ್ಳಿ |
| 29 | ಮರಖಲ | ಮರಖಲ, ಬೆನಕನಳ್ಳಿ, ಚಿಕ್ಕಪೇಟೆ, ನಾವದಗೇರಿ |
| 30 | ಚಿಮಕೋಡ | ಚಿಮಕೋಡ, ಪತ್ತೆಪೂರ, ತಂಗಟ್ಟಿ, ಅಲ್ಲಾಪೂರ, ನೇಮತಾಬಾದ, ಖಾಜಾಪೂರ |
| 31 | ಮಲ್ಕಾಪೂರ | ಮಲ್ಕಾಪೂರ, ಮಿರ್ಜಾಪೂರ |
| 32 | ಸಿರ್ಸಿ(ಎ) | ಸಿರ್ಸಿ(ಎ), ಖಾಸೆಂಪೂರ |
| 33 | ಯದ್ಲಾಪೂರ | ಯದ್ಲಾಪೂರ |

## ಬೀದರ ತಾಲ್ಲೂಕಿನಲ್ಲಿನ ಕವಿಗಳು ಹಾಗೂ ಸಾಹಿತಿಗಳ ಹೆಸರು

ಡಾ: ಜಗನ್ನಾಥ ಹೆಬ್ಬಾಳೆ
ವಿರೇಂದ್ರ ಸಿಂಪಿ
ಎಂ.ಜಿ.ಗಂಗನಪಳ್ಳಿ
ಚಂದ್ರಪ್ಪಾ ಹೆಬ್ಬಾಳಕರ
ಎಸ್.ಎಂ. ಜನವಾಡಕರ
ಪ್ರೇಮಲಾ ಸಿರ್ಸೆ
ಖಾಜಿ ಅರ್ಷದ ಅಲಿ
ಮುರಲಿಧರರಾವ ಕಾಳೆ
ಎಸ್.ಬಿ.ಕುಲಕರ್ಣಿ
ಬಸವರಾಜ ಮಯೂರ
ಎಂ.ಎಸ್.ಕುಚ್‌ಬಾಳ
ಕಂಟೆಪ್ಪಾ ಗುಮ್ಮೆ
ಸಿದ್ರಾಮಪ್ಪಾ ಮಾಸಿಮಾಡೆ
ಪ್ರೋ.ಎಸ್.ಎಸ್.ದೇವರಕರ್
ರಾಜೇಂದ್ರ ಜೊನ್ನಿಕೇರಿ
ರಾಜೆಪ್ಪಾ ಗುನ್ನಳ್ಳಿ
ಶರಣಪ್ಪಾ ನಾಟೇಕರ
ಶಂಬುಲಿಂಗ ವಾಲದೊಡ್ಡಿ
ವೀರಶೆಟ್ಟಿ ಚೌಕನಪಟ್ಟಿ
ಶೀವಯೋಗಿಶ್ವರ ಮಹಾಸ್ವಾಮಿ
ಅನ್ನಪೂರ್ಣ ಅಕ್ಕ
ಅಮರ ಸೋಲಾಪೂರೆ
ಅರುಂಧತಿ ಚಾಂದಕವಠೆ
ಓಂ ಪ್ರಕಾಶ ಧಡ್ಡೆ
ಕಲಾವತಿ ಬಿರಾದಾರ
ಕಲ್ಯಾಣರಾವ ದಾವರಗಾವೆ
ಗಂಗಾಂಬಿಕೆ ಪಾಟೀಲ
ಗಂಧರ್ವಸೇನಾ
ಜಗನ್ನಾಥ ಗಡ್ಡೆ
ಚಂದ್ರಕಾಂತ ಪಾಟೀಲ
ಚಂದ್ರಗುಪ್ತ ಚಾಂದಕವಠೆ

ದೇಶಪಾಂಡೆ ಎಂ. ಜಿ. (ಲಕ್ಷ್ಮಿಸುತ)
ನಾಗಶ್ಚೆಟ್ಟಿ ಪಾಟೀಲ
ಪಂಚಾಕ್ಷರಿ ಪುಣ್ಯಶೆಟ್ಟಿ
ಪಾಟೀಲ ಸಿ.ಎಸ್.(ಡಾ)
ಪ್ರಯೋಗ ಅ ಎರೋಳ್ಕರ
ಬಸವರಾಜ ಪಿ. ಬಸವಲಿಂಗ
ಭತಮುರ್ಗೆ ಚಂದ್ರಪ್ಪಾ (ಡಾ)
ಮುದಾಳೆ ಎಂ.ಪಿ.
ಯಶೋಧಮ್ಮ ಸಿದಬಟ್ಟೆ
ರಮೇಶ ಮುಲಗೆ (ಡಾ)
ರಶ್ಮಿ ಎಸ್
ವಜ್ರಾ ಪಾಟೀಲ
ವಿದ್ಯಾಶೀತಲ
ಶಾಂತಪ್ಪಾ ದೇವರಾಯ (ದೇಶಾಂತ ಹುಡುಗಿ)
ಶಾಂತಲಿಂಗಯ್ಯಾ ಸ್ವಾಮಿ ಹಿರೇಮಠ
ಶಿರೋಮಣಿ ತಾರೆ,
ಶಿವಕುಮಾರ ನಾಗವಾರ
ಶಿವಕುಮಾರ ಮಹಾಸ್ವಾಮಿಗಳು (ಪುಜ್ಯಶ್ರೀ)
ಶ್ರೀನಿವಾಸ ಕುಲಕರ್ಣಿ(ನಂದೀಶ)
ಸುಭಾಷ ನೇಳಗೆ
ಸೂಗಯ್ಯಾ ಹಿರೇಮಠ (ಪ್ರೋ)

## ೨) ಭಾಲ್ಕಿ ತಾಲೂಕಿನ ಶೈಕ್ಷಣಿಕ ಪರಂಪರೆ

ಶ್ರೀ ಸೋಮನಾಥ ಮುದ್ದಾ ಶಿಕ್ಷಕರವರು ಬರೆದ ಭಾಲ್ಕಿ ತಾಲ್ಲೂಕು ಪರಿಚಯ ಗ್ರಂಥದಲ್ಲಿ ಭಾಲ್ಕಿಯ ಶೈಕ್ಷಣಿಕ ಪರಂಪರೆ ಕುರಿತು ಈ ರೀತಿ ವಿವರಿಸುತ್ತಾರೆ. ಗೋದಾವರಿಯಿಂದ ಕಾವೇರಿವರೆಗೆ ಕನ್ನಡ ನಾಡು ಪಸರಿಸಿದ ಕಾಲದಲ್ಲಿ "ಕಲ್ಯಾಣ" ನಾಡಿನ ಕೇಂದ್ರ ಸ್ಥಾನದಲ್ಲಿತ್ತು. ಆದರೆ ಈಗ ಗಡಿ ಸ್ಥಾನದಲ್ಲಿದೆ. 12ನೇ ಶತಮಾನದಲ್ಲಿ ವಚನಗಳನ್ನು ರಚಿಸುವುದರ ಮೂಲಕ ಕನ್ನಡ ಸಾಹಿತ್ಯವನ್ನು ವಿಶ್ವ ಸಾಹಿತ್ಯ ಮಟ್ಟದಲ್ಲಿ ಎದ್ದು ಕಾಣುವಂತೆ ಮಾಡಿದವರು ಇಲ್ಲಿಯ ಬಸವಾದಿ ಶರಣರು ಅಂದು ಮತ್ತು ನಂತರದ ಹಲವಾರು ದಶಕಗಳ ಕಾಲ ಇಲ್ಲಿ ಕನ್ನಡ ಅತ್ಯಂತ ಉಚ್ಚಾಯ ಸ್ಥಿತಿಯಲ್ಲಿತ್ತು. ಜಾತಿ ಮತ ಪಂಥಗಳನ್ನು ಮೀರಿ ಮುಕ್ತ ವಾತಾವರಣದಲ್ಲಿ ನಿತ್ಯ ಸಾಹಿತ್ಯ ಗೋಷ್ಠಿಗಳು ಇಲ್ಲಿ ನಡೆದು ಸಾಹಿತ್ಯದ ತವರು ಮನೆ ಎಂಬ ಖ್ಯಾತಿ ಈ ಪಟ್ಟಣದ್ದಾಗಿತ್ತು. ಆದರೆ ಈಗ ಇಲ್ಲಿ ಸಾಹಿತ್ಯಕ್ಕೆ ಬರ ಬಂದಂತಾಗಿದೆ. ಗಡಿ ಭಾಗದಲ್ಲಿಯ ಬೇರೆ ಬೇರೆ ಭಾಷೆಗಳ ಪ್ರಭಾವದಿಂದಾಗಿ ಇಲ್ಲಿಯ ಕನ್ನಡದ ಸ್ಥಿತಿ ಶೋಚನೀಯವಾಗಿದೆ.

ಗಡಿಭಾಗದಲ್ಲಿ ಕೇವಲ ಕಾಟಾಚಾರಕ್ಕಾಗಿ ಕೆಲವು ಸರ್ಕಾರಿ ಕನ್ನಡ ಶಾಲೆಗಳು ತೆರೆದಿರುತ್ತಾರೆ. ಭಾಲ್ಕಿ ತಾಲ್ಲೂಕಿನಲ್ಲಿ ಕೆಂಪು ಮತ್ತು ಕಪ್ಪು (ಎರೆಮಣ್ಣು) ಮಣ್ಣು ಇರುವ ಎರಡು ಪ್ರಕಾರದ ಭೂಮಿ ಇದೆ. ಭೂಮಿಯ ಫಲವತ್ತತೆಯಿಂದ ಕೂಡಿದೆ. ಅಕ್ಟೋಬರ್‌ನಿಂದ ಫೆಬ್ರವರಿ ತಿಂಗಳ ಮಧ್ಯದವರೆಗೆ ಚಳಿಗಾಲವಿದ್ದು, ಚಳಿ ಹೆಚ್ಚು ಮಾರ್ಚನಿಂದ ಮೇ ತಿಂಗಳವರೆಗೆ ಬೇಸಿಗೆಕಾಲವಿದ್ದು, ತುಂಬಾ ಉಷ್ಣತೆಯಿರುತ್ತದೆ. ಬೇಸಿಗೆಯಲ್ಲಿ ಗರಿಷ್ಠ $40^0$ ಸೆಂಟಿ ಗ್ರೇಡ ನಿಂದ $42^0$ ರ ವರೆಗೂ ಏರಿಕೆಯಾಗುತ್ತದೆ. ಜೂನ್‌ನಿಂದ ಮಳೆಗಾಲ ಆರಂಭಗೊಳ್ಳುತ್ತದೆ. ಗರಿಷ್ಠ ಮಳೆಯ ಪ್ರಮಾಣ 873.ಮಿ.ಮೀ.ಗಳಾಗುತ್ತದೆ. ಭಾಲ್ಕಿ ತಾಲ್ಲೂಕಿನಲ್ಲಿ 09 ವೃಷ್ಟಿ (ಮಳೆ ಪ್ರಮಾಣ ಅಳೆಯುವ) ಮಾಪಕ ಕೇಂದ್ರಗಳಿವೆ.

*ಜನವರ್ಗ:-*

ಭಾಲ್ಕಿ ತಾಲ್ಲೂಕಿನಲ್ಲಿ ಲಿಂಗಾಯತರ ಜನಸಂಖ್ಯೆ ಹೆಚ್ಚಾಗಿದೆ. ಮರಾಠರು, ಬ್ರಾಹ್ಮಣರು, ಕುರುಬರು, ಹರಿಜನರು, ಮುಸ್ಲಿಂರು, ಕ್ರೈಸ್ತರು, ಬೌದ್ಧರು, ಗೊಂದಲಿಗರು, ಲಂಬಾಣಿಗಳು, ಒಡೆಯರು(ವಡ್ಡರು), ನಾವಿದರು, ಬಡಗರು, ಅಗಸರು, ಸಮಗಾರರು, ರಂಗೆರೇರು, ಪೈಲ್ವಾನರು, ಕುಂಬಾರರು, ಕಮ್ಮಾರರು ಮುಂತಾದ ಜಾತಿ ಜನಾಂಗದ ಜನರಿದ್ದಾರೆ.

ಇತಿಹಾಸದ ದೃಷ್ಟಿಯಿಂದ ಗಮನಿಸಿದಾಗ ಭಾಲ್ಕಿ ತಾಲ್ಲೂಕು ಹಲವು ಅರಸರ ಆಳ್ವಿಕೆಗೆ ಒಳಪಟ್ಟಿದ್ದಾಗಿದೆ. ಶಾಸನಗಳಲ್ಲಿ ಭಾಲ್ಕಿಯನ್ನು ಭಲ್ಲುಂಕೆ ಎಂದು ಹೆಸರಿಸಲಾಗಿದೆ. ಕ್ರಿ.ಶ. 5ನೇ ಶತಮಾನದಿಂದ ಹಲವಾರು ಅರಸು ಮನೆತನಗಳು ಭಾಲ್ಕಿ ತಾಲ್ಲೂಕನ್ನು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡಿವೆ. ಮೊದಲು ಮೌರ್ಯರ ನಂತರ ಶಾತವಾಹನರು ಈ ಭಾಗದಲ್ಲಿ ಆಳಿದ್ದಾರೆ. ಕ್ರಿ.ಶ. 6 ನೇ ಶತಮಾನದಲ್ಲಿ ಬಾದಾಮಿ ಚಾಲುಕ್ಯರ ಆಡಳಿತಕ್ಕೆ ಭಾಲ್ಕಿ ತಾಲ್ಲೂಕು ಒಳಪಟ್ಟಿತ್ತು. 8ನೇ ಶತಮಾನದಲ್ಲಿ ರಾಷ್ಟ್ರಕೂಟರು ಆಳಿದ್ದರು. 10ನೇ ಶತಮಾನದಲ್ಲಿ ಕಲ್ಯಾಣದ ಚಾಲುಕ್ಯರ 6ನೇಯ ವಿಕ್ರಮಾದಿತ್ಯನು ರಾಜಭಾರ ಮಾಡುತ್ತಿದ್ದಾಗ ಕುಂತಳ ದೇಶದೊಳಗಿನ ಅಟ್ಟಳೆ ನಾಡನ್ನು ಸಿಂಧ್ ವಂಶದ ಹಜ್ಜ ಮಹಿಪನು ಮಾಂಡಲಿಕನಾಗಿ ಆಳುತ್ತಿದ್ದ ಈ ನಾಡಿಗೆ ರಂಜೇರಿ (ಬೀದರ ತಾಲ್ಲೂಕು) ಎಂಬ ಗ್ರಾಮ ರಾಜಧಾನಿಯಾಗಿತ್ತು. ಭಾಲ್ಕಿ ಕೆಲವು ಕಾಲ ಇವರ ಆಳ್ವಿಕೆಗೆ

ಇಲ್ಲಿನ ರೂರಲ್ ಇಂಜಿನಿಯರಿಂಗ್ ಕಾಲೇಜಿನಲ್ಲಿ ನೆರೆಯ ಆಂಧ್ರ ಪ್ರದೇಶದ ವಿದ್ಯಾರ್ಥಿಗಳು ಅಧ್ಯಯನಕ್ಕಾಗಿ ಬರುತ್ತಾರೆ. ಅವರು ಮಾತನಾಡುವ ಭಾಷೆ ತೆಲುಗು ಇಲ್ಲಿನ ಜನರ ಭಾಷೆಯ ಮೇಲೆ ಪ್ರಭಾವಿತವಾಗಿದೆ. ಇಲ್ಲಿನ ಕೆಳವರ್ಗದ ಶ್ರಮ ಜೀವಿ ಜನಾಂಗದವರಾದ ವಡ್ಡರು, ಗೌಂಡಿಗಳು ಸಹ ತೆಲಗೂ ಮಿಶ್ರಿತ ಭಾಷೆಗಳನ್ನು ಮಾತನಾಡುತ್ತಾರೆ. ಒಟ್ಟಾರೆ ಇಲ್ಲಿನ ಯಾವ ಭಾಷೆಯೂ ಸ್ಪಷ್ಟವಾಗಿರದೆ. ಮಿಶ್ರವಾಗಿದ್ದು, ಒಂದರ ಮೇಲೆ ಇನ್ನೊಂದು ಭಾಷೆಯ ಪ್ರಭಾವ ಇದ್ದೆ ಇದೆ. ಇಲ್ಲಿನ ಶೇ. 80% ಜನರಿಗೆ ಕನ್ನಡ ತಿಳಿಯುತ್ತದೆ. ಭಾಲ್ಕಿ ತಾಲ್ಲೂಕಿನಲ್ಲಿ ಮಾತನಾಡುವ ಭಾಷೆಗೂ ಇತರೆ ತಾಲ್ಲೂಕಿನ ಜನರ ಭಾಷೆಗಳಿಗೆ ಹೋಲಿಸಿದಾಗಲೂ ಕೆಲವು ಭಿನ್ನತೆಯನ್ನು ಕಾಣುತ್ತೇವೆ.

***<u>ನಗರ ರಚನೆ ಸಂಸ್ಕೃತಿ:-</u>***

ತಾಲ್ಲೂಕಿನ ಪ್ರಮುಖ ಕೇಂದ್ರ ಸ್ಥಳವಾದ ಭಾಲ್ಕಿ ಪಟ್ಟಣವು ಬೀದರ ಜಿಲ್ಲಾ ಕೇಂದ್ರದಿಂದ ವಾಯುವ್ಯ ದಿಕ್ಕಿನಲ್ಲಿ 40ಕಿ.ಮೀ. ಅಂತರದಲ್ಲಿದೆ. ಕಾರಂಜಾ ಮತ್ತು ಮಾಂಜರಾ ನದಿಗಳು ಕೂಡುವ (ಸಂಗಮ) ಸ್ಥಳದಿಂದ ಪೂರ್ವಕ್ಕೆ 15ಕಿ.ಮೀ. ದೂರದಲ್ಲಿ ಸ್ಥಾಪಿತವಾಗಿದೆ. ಭಾಲ್ಕಿ ನಗರದ ಒಟ್ಟು ವಿಸ್ತೀರ್ಣ 518 ಹೆಕ್ಟೇರು ಭೂ ಪ್ರದೇಶವಾಗಿದ್ದು, 2001ರ ಜನ ಗಣತಿಯ ಪ್ರಕಾರ 35,103 ಜನಸಂಖ್ಯೆಯ ವಾಸ ಇಲ್ಲಿದೆ. ಇದು 1991ರಲ್ಲಿ 26,321 ಆಗಿತ್ತು. ಭಾಲ್ಕಿ ನಗರವು ಸಮುದ್ರ ಮಟ್ಟದಿಂದ 579 ಮೀಟರ ಎತ್ತರದಲ್ಲಿದೆ.

ಭಾಲ್ಕಿ ನಗರವು ಊರು ಮತ್ತು ಗಂಜ ಎಂದು ಎರಡು ಭಾಗದಲ್ಲಿ ವಿಂಗಡಿಸಿದೆ. ಊರಿನ ಹಳೆಯ ಭಾಗ ಬಹು ಪುರಾತನವಾಗಿದ್ದು, ಗಂಜ ಭಾಗ ನೂತನವಾಗಿ ಸ್ಥಾಪಿತವಾಗಿದೆ. ಆಧುನಿಕ ಕಟ್ಟಡಗಳು, ಸರಕಾರಿ ಕಛೇರಿಗಳು, ವ್ಯಾಪಾರಿ ಮಳಿಗೆಗಳು, ಸಾರಿಗೆ ಸಂಪರ್ಕ ವ್ಯವಸ್ಥೆಗಳು, ರೈಲು ನಿಲ್ದಾಣ, ಶಾಲಾ ಕಾಲೇಜುಗಳು, ಸಾರ್ವಜನಿಕ ವಸತಿ ಸೌಲಭ್ಯಗಳು, ಆರೋಗ್ಯ ವೈದ್ಯಕೀಯ ಸೌಲತ್ತುಗಳು, ಎಲ್ಲವೂ ಹೊಸ ಗಾಂಧಿ ಗಂಜ ಪ್ರದೇಶದಲ್ಲಿ ಇವೆ.

***<u>ಧಾರ್ಮಿಕ ಕೇಂದ್ರವಗಿ ಭಾಲ್ಕಿ ಪಟ್ಟಣ;-</u>***

ಧಾರ್ಮಿಕ ಕ್ಷೇತ್ರದಲ್ಲಿ ಪ್ರಸಿದ್ಧವಾದ ಪುಣ್ಯ ತಾಣವಾಗಿ ಭಾಲ್ಕಿ ಜನಜನಿತವಾಗಿದೆ. ಶರಣರ ನಾಡಾದ ಇಲ್ಲಿ ಶಿವ ಶರಣ ಕುಂಬಾರ ಗುಂಡಯ್ಯಾನವರು ಇಲ್ಲಿಯವರೇ ಆಗಿದ್ದರು. ಶ್ರೀ ಭಾಲ್ಕೇಶ್ವರ ದೇವಾಲಯದಲ್ಲಿ ಉದ್ಭವಲಿಂಗವಿದ್ದು, ಇಲ್ಲಿಯ ಐತಿಹಾಸಿಕ ಕೋಟೆಯ ಪಕ್ಕದಲ್ಲಿ ವಿಶಾಲವಾದ ಝುರಭಾವಿಯ ಮೇಲೆ ಸ್ಥಾಪಿತವಾಗಿದೆ. ಶ್ರೀ ಕುಂಬೇಶ್ವರ ಮಂದಿರದಲ್ಲಿನಿಂತ ಗಣಪತಿಯ ಮೂರ್ತಿಯ ಆಕರ್ಷಕವಾಗಿದೆ. ಶ್ರೀ ವೀರಭದ್ರೇಶ್ವರ, ಹನುಮಾನ, ಶಿವ, ರಾಮ, ಕೃಷ್ಣ, ಭವಾನಿ, ಸಿರಡಿ ಸಾಯಿಬಾಬಾ, ಯಲ್ಲಾಲಿಂಗ ಮಠ-ಮಂದಿರಗಳು ಇಲ್ಲಿವೆ.

ಇಲ್ಲಿಯ ದೇವಿ ನಗರದಲ್ಲಿ ಅಂಬಾ ಭವಾನಿಯ ದೇವಾಲಯವಿದೆ. ಭಾಲ್ಕಿ ಹಳೆ ಭಾಗಕ್ಕೆ ಹೋಗುವಾಗ ಒಂದು ಐತಿಹಾಸಿಕ ಕೊಟೆ ಇದೆ. ಇದನ್ನು ರಾಮಚಂದ್ರ ಜಾಧವನೆಂಬ ಪಾಳೆಯಗಾರನು ಕಟ್ಟಿಸಿರುವುದಾಗಿ ತಿಳಿದು ಬಂದಿದೆ. ಒಳಗಡೆ ಮಸೀದಿ ಮತ್ತು ಗಣೇಶ ಮಂದಿರ ಹಾಗೂ ಸತ್ಯನಿಕೇತನ ಶಾಲೆ ಇದೆ.

ಸರ್ವಧರ್ಮಗಳ ಪ್ರತೀಕವಾಗಿ ವಿರಕ್ತಮಠ, ಬೌದ್ಧವಿಹಾರ, ಪ್ರೊಟೆಸ್ಟೆಂಟ್ ಚರ್ಚ, ಕ್ಯಾಥೋಲಿಕ ಚರ್ಚ, ಕ್ರೈಸ್ಥರ ಆರೋಗ್ಯ ಮಾತಾ ಸೇವಾ ಕೇಂದ್ರ, ಮೂರು ಮಸೀದಿಗಳು ಮತ್ತು ಇತ್ತಿಚಿಗೆ ಬಾವಿಯೊಂದರಲ್ಲಿ ದೊರಕಿದ ಜೈನಮೂರ್ತಿ ಮಹಾವೀರರ ದೇಗುಲಗಳೂ ಭಾಲ್ಕಿಯಲ್ಲಿವೆ. 12ನೇ ಶತಮಾನದ ಶರಣ ಉರಿಲಿಂಗ ಪೆದ್ದಿಯ ಮಠ ಇಲ್ಲಿದೆ. ಶಿವನನ್ನೇ ಕುಣಿಸಿದ ಶರಣ ಕುಂಬಾರ ಗುಂಡಯ್ಯಾ ಭಾಲ್ಕಿ ಪಟ್ಟಣದವರೆಂದು ವಿದ್ವಾಂಸರು ತಿಳಿಸಿದ್ದಾರೆ. ಈಗಲೂ ಅವರ ಹೆಸರಿನಲ್ಲಿ ಕುಂಬೇಶ್ವರ ದೇವಾಲಯವಿದೆ. ಕನ್ನಡ ಸಾಹಿತ್ಯದಲ್ಲಿ ಮಹಾಕವಿ ಹರಿಹರಿದೇವನು ತನ್ನ ಕುಂಬಾರ ಗುಂಡಯ್ಯಾನ ರಗಳೆಯಲ್ಲಿ ಭಲ್ಲುಂಕೆ ಹೆಸರನ್ನು ಮೊಟ್ಟ ಮೊದಲು ಪ್ರತಿಪಾದಿಸಿದ್ದಾನೆ.

***ಕಲೆ ಸಂಗೀತ ಸಾಹಿತ್ಯ:-***

ಭಾಲ್ಕಿ ತಾಲ್ಲೂಕಿನಲ್ಲಿ ಹಲವಾರು ವೀರಶೈವ ಮಠಗಳಿದ್ದು, ಕಲೆ, ಸಾಹಿತ್ಯ ಮತ್ತು ಶೈಕ್ಷಣಿಕ ಪ್ರಸಾರಕ್ಕಾಗಿ ಶ್ರಮಿಸುತ್ತಿವೆ. ಭಾಲ್ಕಿಯ ಹಿರೇಮಠ ಸಂಸ್ಥಾನವು 12ನೇ ಶತಮಾನದ ಬಸವಾದಿ ಶರಣರ ಕಾಲದಿಂದಲೂ ನಡೆದುಕೊಂಡು ಬಂದಿದೆ. ಬೀದರ ಜಿಲ್ಲೆಯಲ್ಲಷ್ಟೆ ಅಲ್ಲದೆ ಮಹಾರಾಷ್ಟ್ರ, ಆಂಧ್ರಪ್ರದೇಶಗಳ್ಲೂ ತನ್ನ ಪ್ರಭಾವ ಹೊಂದಿದೆ. ಮಠದ ತುಂಬಾ ಶಿವಶರಣರ ಭಿತ್ತಿ ಚಿತ್ರಗಳು ಆಕರ್ಷಕವಾಗಿವೆ. ಶರಣರ ಕುರಿತು ನೂರಾರು ಗ್ರಂಥಗಳನ್ನು ಹಿರೇಮಠ ಸಂಸ್ಥಾನದಿಂದ ಪ್ರಕಟಿಸಲಾಗಿದೆ. ಕನ್ನಡ ಗ್ರಂಥಗಳ ಪ್ರಕಟಣೆಗಾಗಿಯೇ ಒಂದು ನಿಧಿಯನ್ನು ಪೂಜ್ಯರು ಇಲ್ಲಿ ಸ್ಥಾಪಿಸಿದ್ದಾರೆ. ಕನ್ನಡ ಭಾಷೆ ಮತ್ತು ವಚನ ಸಾಹಿತ್ಯದ ಪ್ರಸಾರ, ಪ್ರಚಾರಕ್ಕಾಗಿ 109 ವರ್ಷಗಳವರೆಗೆ ಬದುಕಿದ್ದ ಡಾ: ಚನ್ನಬಸವ ಪಟ್ಟದೇವರು ಈ ಭಾಗದ ನಡೆದಾಡಿದ ದೇವರೆಂದು ಪ್ರಸಿದ್ದರಾಗಿದ್ದರು. ಇವರು ಸ್ಥಾಪಿಸಿದ ಹಾನಗಲ್ ಕುಮಾರೇಶ್ವರ ಉಚಿತ ಪ್ರಸಾದ ನಿಲಯದ ನೂತನ ಮಠಾಧೀಶರಾದ ಮ.ಘ.ಚ.ಪುಜ್ಯ ಬಸವಲಿಂಗ ಪಟ್ಟಾಧ್ಯಕ್ಷರು ಹಿರೇಮಠ ಸಂಸ್ಥಾನ ವಿದ್ಯಾಪೀಠದ ಅಡಿಯಲ್ಲಿ ಹತ್ತಾರು ಶೈಕ್ಷಣಿಕ ವಿದ್ಯಾ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಸಾಮಾಜಿಕ ಸಂಘಟನೆಗಳಾದ ಭಾರತೀಯ ಬಸವದಳ ಬಳಗ ಡಾ: ಚೆನ್ನಬಸವ ಪಟ್ಟದೇವರು ಕನ್ನಡ ಸಂಘ, ವಧು-ವರರ ಮಾಹಿತಿ ಕೇಂದ್ರ, ಹಳೆಯ ವಿದ್ಯಾರ್ಥಿಗಳ ಸಂಘ, ಶಾಂತಿ-ಕಿರಣ ಪತ್ರಿಕೆ ಮುಂತಾದ ಸಾಮಾಜಿಕ ಕಾರ್ಯಗಳನ್ನು ಯಶಸ್ವಿಯಾಗಿ ಮಾಡುತ್ತಿದ್ದಾರೆ.

ಭಾಲ್ಕಿ ತಾಲ್ಲೂಕುದಲ್ಲಿ ಅನೇಕರು ಹಿರಿಯ ಸಾಹಿತಿಗಳು, ಕವಿಗಳು, ಲೇಖಕರು, ಕವಿಯತ್ರಿಯರು ಇದ್ದಾರೆ. ಅವರುಗಳು ಡಾ: ಜಿ.ಬಿ.ವಿಸಾಜಿ. ಡಾ: ವೈಜಿನಾಥ ಭಂಡೆ, ಡಾ: ಸೋಮನಾಥ ನುಚ್ಚಾ, ಶ್ರೀ ಎಚ್.ಸಿ.ಖಿಡ್ಕೆ, ಶ್ರೀ ಸುಬ್ಬಣ್ಣ ಅಂಬೇಸಂಗೆ, ಪೂಜ್ಯ ಬಸವಲಿಂಗ ಪಟ್ಟದೇವರು, ಶರಣಯ್ಯ ಮಠಪತಿ, ವೀರಶೆಟ್ಟಿ ಬಾವುಗೆ, ಡಾ: ಶ್ರೀನಿವಾಸ ಬೇಂದ್ರೆ, ಪ್ರೋ. ಘೋಡಕೆ, ಶ್ರೀ ತುಕಾರಾಮ ಮೋರೆ, ಗೌತಮ ಬುದ್ಧ ಮೊರಂಬೆ, ಗಣಪತಿ ಕಲ್ಲೂರೆ, ಡಿ.ಡಿ.ಶಿಂಧೆ, ಶ್ರೀ ಕೆ.ಎಸ್. ರಾಮಬಾಣ ವ್ಯವಸ್ಥಾಪಕರು, ಶ್ರೀ ಅಂಕುಶಢೋಲೆ, ಅಶೋಕಕುಮಾರ ಮೈನಳ್ಳೆ, ಪ್ರೋ ಚಂದ್ರಕಾಂತ ಬಿರಾದಾರ, ಪ್ರೋ. ಶಂಭುಲಿಂಗ ಕಾಮಣ್ಣಾ ಸೋಮನಾಥ ಮುದ್ದಾ, ಎಂ.ಜಿ.ರಾಜೋಳೆ, ಚಂದ್ರಕಾಂತ ಪಾಟೀಲ, ವಿಜಯಕುಮಾರ ಪರ್ಮಾ, ಗಣಪತಿ ಭೂರೆ, ಶಿವಾನಂದ ಗುಂದಗೆ, ಶಿವಕುಮಾರ ನಾರಾ, ಶ್ರೀಮತಿ ಸಾವಿತ್ರಿ ಮರೂರಕರ ಪ್ರೋ ಮಲ್ಲಮ್ಮ ಆರ್. ಪಾಟೀಲ, ಎಂ.ಬಂಡೆಪ್ಪಾ, ರಾಜಕುಮಾರ ಎಸ್ ಅಂಬೆಸಂಗೆ, ಗಣಪತಿ ಬೋಚರೆ, ಕಾಶಿನಾಥರಾವ ಎಂ. ಚೆಲ್ವಾ, ಕಲ್ಯಾಣಮ್ಮ ಲಂಗೋಟೆ, ಬಾಬುರಾವ ಮುಂಗಳೆ, ರಘುನಾಥ ಖರಾಬೆ(ರಘುಂಶ), ರಾಠೋಡ ಬಸ್ಸಿಧರ,

ಡಾ:ವಿಕ್ರಮ ವಿಸಾಜಿ, ವಿಜಯಕುಮರ ದೇವಪ್ಪಾ (ವಿಮದೆ), ಶೋಭಾ ಶಿಂಧೆ ಮುಂತಾದವರಾಗಿದ್ದಾರೆ.

ಅದೇ ರೀತಿ ಚಿತ್ರಕಲೆಯಲ್ಲೂ ಪರಿಣಿತರಾದ ಅರ್ಚನಾ ತಂದೆ ಸುಧಾಕಾರ, ಮಹಾದೇವ ಗಾಯಕವಾಡ, ಗಿಪ್ಸನ್ ಕೋಟೆ, ಬಾಬುರಾವ ರಾಠೋಡ, ಚಂದ್ರಕಾಂತ ಬಿರಾದಾರ ನಾವದಗಿ, ದತ್ತಾತ್ರಿ ಮಲ್ಕೆ ಗೋರಚಿಂಚೋಳಿ, ಅಶೋಕ ತಂದೆ ಲಕ್ಷ್ಮಣರಾವ ಶಿಂಧೆ ಬಾಳೂರ, ಕಾಶಿನಾಥ ಬಾಳುರಕರ, ಗೋಪಾಲ ಜಾಧವ ಭಾತಂಬ್ರಾ, ಗಣಪತಿ ಹೂಗಾರ ಡೋಣಗಾಪೂರ, ಜಿ.ಸಿ.ಗಂಗಶೆಟ್ಟಿ ಚಳಕಾಪುರ, ಜಗೆಂದ್ರ ಪ್ರಸಾದ, ಸುಬೇದರ ಭಾಲ್ಕಿ, ವಿಜಯಬಾರಡ್ಡಿ, ನಾರಾಯಣ ಬೊಲ್ಕೆ ಲಖಣಗಾಂವ, ಮಹೇಶಕುಮಾರ ಬಿ. ಮಾಯನಳ್ಳಿ ಖುದಾವಂದಪೂರ, ಮಧುಕರಗಾಂವಕರ ಗುರುಕುಲ ಕಾಲೇಜು ಕರಡಿಯಾಳ ಹೀಗೆ ಅನೇಕರು ಭಾಲ್ಕಿ ತಾಲ್ಲೂಕಿನಲ್ಲಿ ಕಲಾ ಶಿಕ್ಷಕರಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು ತಾಲ್ಲೂಕು ಶಾಖೆಯಿಂದ ಚಟುವಟಿಕೆ ಆಧಾರಿತ ಕಾರ್ಯಕ್ರಮಗಳ ಮೂಲಕ, ಶಾಲೆಗೊಂದು ಸಾಹಿತ್ಯದ ಸ್ಪರ್ದೆ, ಪ್ರತಿಭಾ ಪ್ರೋತ್ಸಾಹ ಚಟುವಟಿಕೆ, ಸಂಸ್ಕೃತಿಕ ಸ್ಪರ್ದೆ, ಸಾಹಿತ್ಯ ಜ್ಯೋತಿ ಇತ್ಯಾದಿ ಕಾರ್ಯಕ್ರಮಗಳು ನಡೆಯುತ್ತಾ ಶೈಕ್ಷಣಿಕವಾಗಿ ಬೆಳೆಸಲು ಕ್ರೀಯಾಶೀಲರಾಗಿದ್ದಾರೆ. ಕ.ಸಾ.ಪ. ತಾಲ್ಲೂಕ ಅಧ್ಯಕ್ಷರಾದ ವೀರಶೆಟ್ಟಿ ಬಾವುಗೆ, ಪ್ರಧಾನ ಕಾರ್ಯದರ್ಶಿ ನಿರಂಜಪ್ಪಾ ಪಾತ್ರೆ, ಸುಭಾಷ ಹುಲಸೂರೆ, ಮುಂತಾದವರಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ ಭವನಕ್ಕಾಗಿ ಮಾನ್ಯ ಈಶ್ವರ ಖಂಡ್ರೆ ಶಾಸಕರು ತಮ್ಮ ಅನುದಾನದಲ್ಲಿ ನಿವೇಶನ ನೊಂದಣಿ ಮಾಡಿಸಿಟ್ಟಿದ್ದಾರೆ.

***ರಾಜಕೀಯ ಕ್ಷೇತ್ರ:-***

ಭಾಲ್ಕಿ ತಾಲ್ಲೂಕು ರಾಜಕೀಯ ಕ್ಷೇತ್ರದಲ್ಲಿ ಚುನಾಯಿತ ಪ್ರತಿನಿಧಿಗಳಾಗಿ ಹೆಚ್ಚಿನ ಕಾಲ ಖಂಡ್ರೆ ಮನೆತನದವರೇ ಆಳಿದ್ದಾರೆ. ಎರಡು ದಶಕಕ್ಕೂ ಅಧಿಕ ಕಾಲ ಶ್ರೀ ಭೀಮಣ್ಣಾ ಖಂಡ್ರೆ ಯವರು ಶಾಸಕರಾಗಿ, ಮಂತ್ರಿಯಾಗಿ ಕೆಲಸ ಮಾಡಿದ್ದಾರೆ. ಇವರ ಅಧಿಕಾರ ಅವಧಿಯಲ್ಲಿ ಸಾರಿಗೆ ಸಚಿವರಾಗಿದ್ದಾಗ ಅಗ್ನಿ ಶಾಮಕ ಠಾಣೆ, ಪ್ರಾದೇಶಿಕ (ಎ.ಆರ್.ಟಿ.ಓ) ಸಾರಿಗೆ ಕಛೇರಿ, ಪಟ್ಟಣ ಪೋಲಿಸ ಠಾಣೆ, ಬಸ್ ಡಿಪೋ ಮುಂತಾದ ಅಭಿವೃದ್ಧಿ ಕಾರ್ಯಗಳಾಗಿವೆ. ಭಾಲ್ಕಿಯ ಶ್ರೀ ಸುಭಾಷ ಅಷ್ಟೂರೆಯವರು ಮಾಜಿ ಮಂತ್ರಿಗಳಾಗಿದ್ದಾರೆ. ಇವರು ಸಣ್ಣ ನೀರಾವರಿ ಸಚಿವರಾಗಿ ಕಾರಂಜಾ ಜಲಾಶಯ ಯೋಜನೆಗಾಗಿ ಸಾಕಷ್ಟು ಕೆಲಸ ಮಾಡಿರುತ್ತಾರೆ. ಶ್ರೀ ವಿಜಯಕುಮಾರ ಖಂಡ್ರೆಯವರು ಎರಡು ಅವಧಿಗಾಗಿ ಶಾಸಕರಾಗಿ ಆಯ್ಕೆಯಾಗಿ ಜನೋಪಯೋಗಿ ಅಭಿವೃದ್ಧಿ ಕೆಲಸವನ್ನು ಹಮ್ಮಿಕೊಂಡವರಾಗಿದ್ದಾರೆ. ಸ್ವರ್ಗಿಯ ಕಲ್ಯಾಣರಾವ ಮೋಳಕೇರೆ ಅವರು ಒಂದು ಅವಧಿಗೆ ಶಾಸಕರಾಗಿ ಆಯ್ಕೆಯಾಗಿದ್ದರು. ಶ್ರೀ ಪ್ರಕಾಶ ಖಂಡ್ರೆ ಎರಡು ಸಲ ಶಾಸಕರಾಗಿ ಭಾಲ್ಕಿ ಕ್ಷೇತ್ರದ ಅಭಿವೃದ್ಧಿಗಾಗಿ ಅತಿ ಹುಮ್ಮಸಿನಿಂದ ಅನೇಕ ಅಭಿವೃದ್ಧಿ ಕಾರ್ಯ ಮಾಡಿರುತ್ತಾರೆ ಹಾಗೂ ಭಾಲ್ಕೇಶ್ವರ ಸಹಕಾರ ಸಕ್ಕರೆ ಕಾರ್ಖಾನೆ ಪ್ರಾರಂಭಿಸಲು ಪ್ರಯತ್ನದಲ್ಲಿದ್ದಾರೆ.

ಪ್ರಸ್ತುತ ಶ್ರೀ ಈಶ್ವರ ಖಂಡ್ರೆ ಶಾಸಕರಾಗಿದ್ದು ಅನೇಕ ರೀತಿಯಿಂದ ಭಾಲ್ಕಿ ಕ್ಷೇತ್ರದ ಅಭಿವೃದ್ಧಿಗಾಗಿ ಅತಿ ಆಸಕ್ತಿಯಿಂದ ದುಡಿಯುತ್ತಿದ್ದಾರೆ ಅಲ್ಲದೆ ಶೈಕ್ಷಣಿಕವಾಗಿ ಶಾಂತಿವರ್ಧಕ ಶಿಕ್ಷಣ ಸಂಸ್ಥೆ

ಒಳಪಟ್ಟಿತ್ತೆಂದು ಇದರಿಂದ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ ಅರಸ ಭೂಲೋಕ ಮಲ್ಲನ ಕಾಲದ ಶಾಸನಗಳು ಕ್ರಿ.ಶ. 1100 ಭಾಲ್ಕಿಯ ರಾಜಧಾನಿ ಪಟ್ಟಣವಾಗಿತ್ತೆಂದು ತಿಳಿಸುತ್ತದೆ. ಕುಮಾರ ಹೆಮ್ಮಡಿ ದೇವನು ಸಾಮಂತನಾಗಿ ಆಳುತ್ತಿದ್ದನೆನ್ನಲಾಗಿದೆ ಕ್ರಿ.ಶ. 1130ರಲ್ಲಿ ಭಾಲ್ಕಿಯು ಕಲಚೂರಿ ಅರಸ ಬಿಜ್ಜಳನ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿದು ಬರುತ್ತದೆ. 12ನೇ ಶತಮಾನದಲ್ಲಿ ಕಲ್ಯಾಣದಲ್ಲಿ ನಡೆದ ಶರಣರ ಕ್ರಾಂತಿಯ ಪ್ರಭಾವ ಭಾಲ್ಕಿಯ ಮೇಲೂ ಆಗಿತ್ತು.

ಕ್ರಿ.ಶ. 1200ರ ಸುಮಾರಿಗೆ ದೇವಗಿರಿಯ ಯಾದವರ ಆಳ್ವಿಕೆ ಪ್ರಾರಂಭವಾಗಿ ದೆಹಲಿ ಸುಲ್ತಾನರ ಕಣ್ಣು ದಕ್ಷಿಣದ ಸಂಪತ್ತಿನತ್ತ ನೆಟ್ಟು ಈ ಭಾಗ ದೆಹಲಿ ಸುಲ್ತಾನರ ಕೈವಶವಾಯಿತು. ಕ್ರಿ.ಶ. 1347ರಲ್ಲಿ ದಕ್ಷಿಣ ಭಾರತದ ಬಹುಮನಿ ಸಾಮ್ರಜ್ಯದ ಉದಯ ಕಾಲದಲ್ಲಿ ಸುಲ್ತಾನ್ ಅಹಮ್ಮದ ಶಹನ್ ಆಡಳಿತಕ್ಕೆ ಭಾಲ್ಕಿ ಒಳಪಟ್ಟಿತ್ತು. 17ನೇ ಶತಮಾನದ ಉತ್ತರಾರ್ಧದಲ್ಲಿ ಮೊದಲ ಅರಸು ಔರಂಗಜೇಬನ ದಾಳಿಯಿಂಥ ಈ ಪ್ರದೇಶ ಮೊಗಲರ ಕೈವಶವಾಗಿತ್ತು. ತದ ನಂತರ ಹೈದ್ರಾಬಾದ ನಿಜಾಮರ ಪ್ರಭುತ್ವ ಈ ಭಾಗದಲ್ಲಿ ಪ್ರಾರಂಭವಾಯಿತು. ಈ ಪಟ್ಟಣ ನಿಜಾಮನ ಕಾಲದಲ್ಲಿ ಖುರ್ಷಿದ ಝಾ ಎಂಬುವನ ಪೈಗಾ ತಾಲ್ಲೂಕಿನ ಕೇಂದ್ರ ಸ್ಥಳವಾಗಿತ್ತಂತೆ.

ಕ್ರಿ.ಶ. 1857–58ರಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಲ್ಕಿ ತಾಲ್ಲೂಕಿನ ಹಲವಾರು ಸ್ವತಂತ್ರ ಸೇನಾನಿಗಳು ಹೋರಾಡಿದ್ದಾರೆ. ಇಲ್ಲಿನ ಆರ್ಯ ಸಮಾಜದವರು. ಸಮಾಜವಾದಿಗಳು ಹಾಗೂ ಕಾಂಗ್ರೆಸ್ ನಾಯಕರು ಸ್ವಾತಂತ್ರ್ಯದ ಚಳುವಳಿಯಲ್ಲಿ ಭಾಗವಹಿಸಿದ್ದವರಾಗಿದ್ದಾರೆ. ಕ್ರಿ.ಶ. 1947–48ರಲ್ಲಿ ರಜಾಕಾರರ ಹಾವಳಿ ಪ್ರಾರಂಭವಾಯಿತು. ಭಾಲ್ಕಿ ತಾಲ್ಲೂಕಿನ ಜನ ಇವರಿಂದ ತತ್ತರಿಸಿದ್ದರು. ಆಸ್ಥಿ–ಪಾಸ್ಥಿ ಕಳೆದುಕೊಂಡು ಕಷ್ಟಪಟ್ಟರೂ ಧೈರ್ಯದಿಂದ ವಿರೋಧಿಗಳ ವಿರುದ್ಧ ಹೋರಾಡಿದರು. ಭಾಲ್ಕಿ ತಾಲ್ಲೂಕಿನ ಸ್ವಾತಂತ್ರ್ಯದ ಸೇನಾನಿಗಳಲ್ಲಿ ಶ್ರೀ ಭೀಮಣ್ಣ ಖಂಡ್ರೆ, ಜಗನ್ನಾಥರಾವ ನಾಯಕ, ಮಹಾದಪ್ಪಾ ಲೋಖಂಡೆ, ಮಡೋಳಪ್ಪಾ ಸ್ವಾಮಿ, ಬಾಬುರಾವ ಹೊನ್ನಾಳಿಕರ ಮುಂತಾದ ಹಲವು ಜನರು ಇದ್ದಾರೆ. ಪ್ರತಿವರ್ಷ ಸ್ವಾತಂತ್ರ್ಯದಿನ ಮತ್ತು ಗಣತಂತ್ರದಂದು ಭಾಲ್ಕಿ ತಾಲ್ಲೂಕು ತಹಸೀಲ ಕಛೇರಿಯ ವತಿಯಿಂದ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜು ಆವರಣದಲ್ಲಿ ಸಾರ್ವಜನಿಕ ಸಮಾರಂಭದಲ್ಲಿ ಸ್ವಾತಂತ್ರ್ಯ ಸೇನಾನಿಗಳನ್ನು ಗೌರವಿಸುವ ಸಂಪ್ರದಾಯ ಇಟ್ಟುಕೊಳ್ಳಲಾಗಿದೆ.

ಭಾಷೆ:– ಭಾಲ್ಕಿ ತಾಲ್ಲೂಕಿನಲ್ಲಿ ಪ್ರಮುಖವಾಗಿ ಬಳಸುವ ಭಾಷೆಗಳೆಂದರೆ ಕನ್ನಡ, ಹಿಂದಿ, ಮರಾಠಿ, ಉರ್ದು, ತೆಲುಗು, ಲಂಬಾಣಿ ಹಾಗೂ ಮಿಶ್ರ ಭಾಷೆಗಳು ಬೀದರ ಜಿಲ್ಲೆಯು ಆಂದ್ರ ಪ್ರದೇಶ ಮತ್ತು ಮಹಾರಾಷ್ಟ್ರ ರಾಜ್ಯಗಳ ಗಡಿಗೆ ಹೊಂದಿಕೊಂಡಿರುವುದರಿಂದ ಅನ್ಯ ಭಾಷೆಗಳ ಪ್ರಭಾವ ಈ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಮೇಲೆ ಉಂಟಾಗಿ ಮಿಶ್ರ ಭಾಷೆಗೆ ಕಾರಣವಾಗಿದೆ.

ಭಾಲ್ಕಿ ತಾಲ್ಲೂಕು ಹೆಚ್ಚಾಗಿ ಮಹಾರಾಷ್ಟ್ರದ ಅಂಚಿನಲ್ಲಿರುವುದರಿಂದ ಮರಾಠಿ ಭಾಷೆಯ ಜನರು ಈ ತಾಲ್ಲೂಕಿನಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ. ಅಲ್ಲದೆ ಮರಾಠಿ ಮಾಧ್ಯಮದ ಶಾಲೆಗಳು ಸಹ ಸರಕಾರಿ ಮತ್ತು ಖಾಸಗಿ ಆಡಳಿತದವರಿಂದ ನಡೆಸಲ್ಪಡುತ್ತಿವೆ. ಮರಾಠಿ ಭಾಷೆಯ ಹಲವಾರು ಶಬ್ದಗಳು ಕನ್ನಡ ಮತ್ತು ಇತರ ಆಡು ಭಾಷೆಗಳಲ್ಲಿ ಯಥೆಚ್ಛವಾಗಿ ಬಳಕೆಯಾಗುತ್ತವೆ.

ಅಡಿಯಲ್ಲಿ ಶಾಲಾ ಕಾಲೇಜು ಇಂಜಿನಿಯರಿಂಗ್ ಕಾಲೇಜು ಬಹಳ ಉತ್ತಮ ರೀತಿಯಿಂದ ನಡೆಸುತ್ತಲಿದ್ದಾರೆ. ಸಂಸ್ಥೆಯ ಅಧ್ಯಕ್ಷರಾಗಿ ಹಗಲು ಇರುಳು ಶ್ರಮ ಪಡುತ್ತಲಿದ್ದಾರೆ.

***ಶಿಕ್ಷಣ ಸಂಸ್ಥೆಗಳು:- (ಶಾಲಾ ಕಾಲೇಜುಗಳು)***

ರೂರಲ್ ಇಂಜಿನಿಯರಿಂಗ್ ಕಾಲೇಜ ಭಾಲ್ಕಿ, ಹರಳಯ್ಯಾ ಪಾಲಿಟೆಕ್ನಿಕ್ ಕಾಲೇಜು, ಐ.ಟಿ.ಐ. ಕಾಲೇಜು, ಚನ್ನಬಸವೇಶ್ವರ ಕಾಲೇಜು, ಅಕ್ಕಮಹಾದೇವಿ ಕಾಲೇಜು, ಆದಿತ್ಯ ವಿಜ್ಞಾನ ಕಾಲೇಜು, ಡಿ.ಎಡ. ಬಿ.ಈಡ್ ಕಾಲೇಜು, ಸತ್ಯನಿಕೇತನ ಪ್ರಾಥಮಿಕ, ಪ್ರೌಢ, ಪ.ಪೂ.ಕಾಲೇಜು, ಶಿವಾಜಿ ಪ್ರಾಥಮಿಕ, ಪ್ರೌಢ, ಪ.ಪೂ. ಡಿಗ್ರಿ ಕಾಲೇಜು, ಸೇವಂತ ಡೇ ಪ್ರಾಥಮಿಕ, ಪ್ರೌಢ ಶಾಲೆ, ಶ್ರೀ ಕುಮಾರಸ್ವಾಮಿ ಪ್ರಾಥಮಿಕ, ಪ್ರೌಢ ಶಾಲೆ, ಗುರುಪ್ರಸಾದ ಡಿ.ಎಡ್, ಐ.ಟಿ.ಐ. ಕಾಲೇಜು, ಡಾ: ಚನ್ನಬಸವ ಪಟ್ಟದೇವರು ಪ್ರಾಥಮಿಕ, ಪ್ರೌಢ, ಡಿ.ಎಡ್. ಬಿ.ಈಡ್ ಹಾಗೂ ವಿಜ್ಞಾನ ಕಾಲೇಜು ಗುರುಕುಲ ಕರಡಿಯಾಳ, ಶ್ರೀ ಸತ್ಯ ಸಾಯಿ ಪ್ರಾಥಮಿಕ ಶಾಲೆ, ನಾಲಂದಾ ಪ್ರಾಥಮಿಕ ಶಾಲೆ, ಶ್ರೀ ವೀರಭದ್ರೇಶ್ವರ ಪ್ರಾಥಮಿಕ, ಪ್ರೌಢ ಶಾಲೆ ನಿಟ್ಟೂರ (ಬಿ), ಮಹಾತ್ಮಾ ಜ್ಯೋತಿಬಾ ಫುಲೆ ಕಾಲೇಜ ನಿಟ್ಟೂರ(ಬಿ), ಸಿದ್ದಾರ್ಥ ಪ್ರಾಥಮಿಕ ಶಾಲೆ ಧನ್ನೂರಾ(ಎಸ್), ವಿದ್ಯಾಭಾರತಿ ಪ್ರಾಥಮಿಕ ಶಾಲೆ ದಾಡಗಿ, ವಿದ್ಯಾಭಾರತಿ ಪ್ರಾಥಮಿಕ ಶಾಲೆ ಬಾಳೂರ, ಸಂಗಮೇಶ್ವರ ಪ್ರೌಢ ಶಾಲೆ ಕೆಸರ ಜವಳಗಾ, ಸಿದ್ದಾರ್ಥ ಬಿ.ಈಡ್ ಕಾಲೇಜು ಭಾಲ್ಕಿ, ಅಂಜಲಿ ನರ್ಸಿಂಗ ಹೋಂ, ಪಂಚಶೀಲ ಪ್ರಾಥಮಿಕ ಶಾಲೆ, ಲೋಕನಾಯಕ ಜೈಪ್ರಕಾಶ ನಾರಾಯಣ ಪ್ರೌಢ ಶಾಲೆ ಮೇಹಕರ, ಶಾಂತಿನಿಕೇತನ ಪ್ರಾಥಮಿಕ ಶಾಲೆ ಅಳವಾಯಿ, ಪ್ರೀಯದರ್ಶನಿ ಅಶೋಕ ಪ್ರಾಥಮಿಕ ಪ್ರೌಢ ಶಾಲೆ ಕುರುಬಖೇಳಗಿ, ಸಿದ್ದಾರೂಡ ಪ್ರೌಢ ಶಾಲೆ ಚಳಕಾಪೂರ, ದಿವ್ಯಜ್ಯೋತಿ ಪ್ರಾಥಮಿಕ, ಪ್ರೌಢ ಶಾಲೆ ಭಾಲ್ಕಿ, ಮಿಲಿಂದ ಪ್ರಾಥಮಿಕ ಶಾಲೆ ಬೋಳೆಗಾಂವ, ಶಾಂತಿನಿಕೇತನ ಪ್ರಾಥಮಿಕ, ಪ್ರೌಢ, ಪ.ಪೂ.ಕಾಲೇಜು ಭಾತಂಬ್ರಾ, ಬುದ್ದಪ್ರಿಯಾ ಪ್ರಾಥಮಿಕ, ಪ್ರೌಢ ಶಾಲೆ ಮದಕಟ್ಟಿ, ಡೈಮಂಡ್ ಕಾಲೇಜು, ಮಹತ್ಮಾ ಗಾಂಧಿ ಡಿ.ಎಡ್ ವಿಜ್ಞಾನ ಕಾಲೇಜು ಭಾಲ್ಕಿ ಸ್ವಾಮಿ ವಿವೇಕಾನಂದ ಡಿ.ಎಡ್. ವಿಜ್ಞಾನ ಕಾಲೇಜ ಮೇಹಕರ ಹೀಗೆ ಖಾಸಗಿ ಅನುದಾನಿತ ಅನುದಾನ ರಹಿತ ಶಾಲಾ ಕಾಲೇಜಗಳು ಉತ್ತಮ ರೀತಿಯಿಂದ ನಡೆಯುತ್ತಲಿವೆ. ಅಲ್ಲದೆ ಸರ್ಕಾರಿ ಪ್ರಾಥಮಿಕ, ಪ್ರೌಢ ಶಾಲೆ, ಕಾಲೇಜು ಡಿಗ್ರಿ ಕಾಲೇಜು ತಾಲ್ಲುಕಿನಲ್ಲಿ ಉತ್ತಮವಾಗಿ ನಡೆಯುತ್ತಲಿವೆ.

***ಪತ್ರಿಕೆಗಳು:-***

ಕನ್ನಡ ಭಾಷೆಯ ಬೆಳವಣಿಗೆಗಾಗಿ ಧರಿನಾಡು ಕನ್ನಡ ಸಂಘ, ಚನ್ನಬಸವ ಪಟ್ಟದೇವರು ಕನ್ನಡ ಸಂಘ, ಶರಣ ಸಾಹಿತ್ಯ ಪರಿಷತ್ತು, ಭಾರತೀಯ ಬಸವ ಬಳಗ ಮುಂತಾದವರು ಸಕ್ರೀಯವಾಗಿವೆ. ಪತ್ರಿಕಾ ರಂಗದಲ್ಲಿಯೂ ಭಾಲ್ಕಿ ಮುಂದಿದೆ. ರಾಜೋಳೆ ಸಂಘರ್ಷ, ದೃಷ್ಟಿ, ಶಾಂತಿ ಕಿರಣ, ನಿರ್ಭಯ ವಚನ, ಕರ್ನಾಟಕ ಕೂಗು, ಕಾಯಕ ಪ್ರೇಮ ಮುಂತಾದ ಪತ್ರಿಕೆಗಳು ಇಲ್ಲಿ ಪ್ರಕಾಶಿಸಲ್ಪಡುತ್ತವೆ. ಪತ್ರ ಕರ್ತರಾಗಿ ಡಾ: ಜಿ.ಬಿ.ವಿಸಾಜಿ, ಎಂ.ಜಿ.ರಾಜೋಳೆ, ಚಂದ್ರಕಾಂತ ಬಿರಾದಾರ, ಚಂದ್ರಕಾಂತ ಪಾಟೀಲ, ಎಸ್.ಎಸ್.ಮೈನಾಳೆ, ಚನ್ನಪ್ಪ ಗದಗೆ, ಅಶೋಕ ಸಾವಳೆ, ಶಿವಾನಂದ ಗುಂದಗೆ, ಸೋಮನಾಥ ಮುದ್ದಾ, ಓಂಕಾರ ಸೂರ್ಯವಾಂಶಿ, ಓಂಪ್ರಕಾಶ ಮೋರೆ, ತುಕಾರಾಮ ಮೋರೆ, ಮಾಣಿಕ ಮರಕಲೆ ಇವರೆಲ್ಲರೂ ಉತ್ತಮವಾಗಿ ಸೇವೆ ಸಲ್ಲಿಸುತ್ತಿದ್ದಾರೆ.

# ಭಾಲ್ಕಿ ತಾಲ್ಲೂಕಾ ಸಾಹಿತಿಗಳು

1. ಮ.ಘ.ಚ ಡಾ ಬಸವಲಿಂಗ ಪಟ್ಟದೇವರು
2. ಶ್ರೀ ಶಿವಯೋಗಿ ಸ್ವಾಮಿಗಳು ಭಾತಂಬ್ರಾ
3. ಡಾ.ಜಿ.ಬಿ.ವಿಸಾಜಿ
4. ಅಶೋಕಕುಮಾರ ಮೈನಳ್ಳಿ
5. ಅಂಕುಶ ಢೋಲೆ
6. ಕಲ್ಯಾಣಮ್ಮ ಲಂಗೋಟಿ
7. ಗಣಪತಿ ಭೂರೆ
8. ಬಾಬುರಾವ ಮುಂಗಳೆ
9. ಕಾಶಿನಾಥರಾವ ಚೆಲ್ವಾ
10. ಮಲ್ಲಮ್ಮಾ ಆರ್ ಪಾಟಿಲ
11. ನಿರ್ಮಲಾ ಕೆ. ಚೆಲ್ವಾ
12. ಅಶೋಕಕುಮಾರ ಚೆಲ್ವಾ
13. ರಘುನಾಥ ಖರಾಬೆ (ರಘುಶಂಖ)
14. ರಾಠೋಡ ಬನಸಿಧರ
15. ಡಾ: ವಿಕ್ರಮ ವಿಸಾಜಿ
16. ವಿಜಯಕುಮಾರ ದೇವಪ್ಪಾ (ವಿಮದೇ)
17. ವಿಜಯಕುಮಾರ ಪರ್ಮಾ
18. ವೀರಶೆಟ್ಟಿ ಬಾವುಗೆ (ವೀಪ್ರಬಾದ)
19. ಶಂಭುಲಿಂಗ ಕಾಮಣ್ಣಾ (ಗೌರಿಸುತ)
20. ಶರಣಯ್ಯಾ ಮಠಪತಿ (ಎಲದಗುಂಡಿ ಪರಮೇಶ್ವರ)
21. ಶಿವಾನಂದ ಗುಂದಗಿ
22. ಸುಭಾಷ (ಸುಬ್ಬಣ್ಣ ಅಂಬೆಸಂಗೆ)
23. ಸೋಮನಾಥ ಮುದ್ದಾ
24. ಚಂದ್ರಕಾಂತ ಎಮ್ಮೆ
25. ಡಾ: ಸೋಮನಾಥ ನುಚ್ಚಾ
26. ಡಾ: ವೈಜಿನಾಥ ಭಂಡೆ
27. ಶೋಬಾ ಶಿಂಧೆ
28. ಗಣಪತರಾವ ಕಲ್ಲೂರೆ
29. ಗೌತಮ ಬುದ್ಧ ಮೊರಂಬೆ
30. ಕೆ.ಎಸ್.ರಾಮಬಾಣ ವ್ಯವಸ್ಥಾಪಕರು
31. ತಿಪ್ಪಣ್ಣಾ ಶಿವಪೂರೆ
32. ಡಾ: ಶ್ರೀನಿವಾಸ ಬೆಂದ್ರೆ
33. ಡಿ.ಡಿ.ಶಿಂಧೆ
34. ಮಾರುತಿ ರಾಠೋಡ
35. ಜೈರಾಜ ದಾಬಶೆಟ್ಟಿ

## ಗ್ರಾಮ ಪಂಚಾಯತಿ ಹಾಗೂ ಅದರ ಅಧೀನ ಗ್ರಾಮಗಳು

| ಕ್ರ.ಸಂ. | ಪಂಚಾಯತ ಹೆಸರು | ಗ್ರಾಮಗಳ ಹೆಸರು |
|---|---|---|
| 1 | ಅಳವಾಯಿ | ಅಳವಾಯಿ, ಅಟ್ಟರ್ಗಾ, ಮಾಣಿಕೇಶ್ವರ |
| 2 | ತುಗಾಂವ (ಎಚ್) | ತುಗಾಂವ (ಎಚ್), ಗುಂಜರ್ಗಾ, ಶ್ರೀಮಾಳಿ |
| 3 | ಮೇಹಕರ | ಮೇಹಕರ, ಬೋಳೆಗಾಂವ, ನಾರದಾ ಸಂಗಮ |
| 4 | ವಾಂಜರ ಖೇಡಾ | ವಾಂಜರ ಖೇಡಾ, ಜಾಮಖಂಡಿ, ಕೋಂಗಳಿ |
| 5 | ಸಾಯಗಾಂವ | ಸಾಯಗಾಂವ, ಕೇಸರ ಜವಳಗಾ, ಬಸವನವಾಡಿ, ಪಾಂಡರಿ, ಪಾಂಡರಿ ತಾಂಡಾ |
| 6 | ಇಂಚೂರ | ಇಂಚೂರ, ಲಾಧಾ, ಹಲಸ(ಎಲ್), ಜೀರಗ್ಯಾಳ |
| 7 | ಗೋರಚಿಂಚೋಳಿ | ಗೋರಚಿಂಚೋಳಿ, ನಿಡೇಬನ್, ಕೋಟಗೀರಾ, ಕೇರೂರ (ಹಳೆ), ಕೇರೂರ (ಹೊಸ) |
| 8 | ಮೋರಂಬಿ | ಮೋರಂಬಿ, ಹಾಳಗೋರ್ಟಾ, ಹೊನ್ನಳ್ಳಿ, ಆರ್.ಗೌಡಗಾಂವ, ಕುಂಟೆಗಾಂವ, ಉಚ್ಚಾ |
| 9 | ವರವಟ್ಟಿ | ವರವಟ್ಟಿ, ಮಾವಿನಹಳ್ಳಿ, ಬ್ಯಾಲಹಳ್ಳಿ, ನಾವದಗಿ |
| 10 | ಮದಕಟ್ಟಿ | ಮದಕಟ್ಟಿ, ಬಾಜೋಳಗಾ ಎಕಲಾಸಪೂರವಾಡಿ |
| 11 | ದಾಡಗಿ | ದಾಡಗಿ, ಕಲವಾಡಿ, ರಾಮತೀರ್ಥವಾಡಿ, ಹರನಾಳ, ಕುಂಟೆಸಿರ್ಸಿ |
| 12 | ಕುರುಬಖೇಳಗಿ | ಕುರುಬಖೇಳಗಿ, ಕಪಲಾಪೂರ, ಭಾಗ್ಯನಗರ, ಏಣಕೂರ |
| 13 | ಖಟಕ ಚಿಂಚೋಳಿ | ಖಟಕ ಚಿಂಚೋಳಿ, ಸಿಕಿಂದ್ರಾಬಾದ ವಾಡಿ |
| 14 | ಡಾವರಗಾಂವ | ಡಾವರಗಾಂವ, ಚಿಟ್ಟಾ, ಮಾಸಿಮಾಡ, ಬರದಾಪೂರ |
| 15 | ಚಳಕಾಪುರ | ಚಳಕಾಪುರ, ತುಗಾಂವ (ಸಿ), ನೆಲವಾಡ |
| 16 | ಕಣಜಿ | ಕಣಜಿ, ಹುಣಜಿ, ಹಚ್ಚಿಮಕಟ್ಟ |
| 17 | ಬ್ಯಾಲಹಳ್ಳಿ | ಬ್ಯಾಲಹಳ್ಳಿ, ಹಾಲಹಳ್ಳಿ, ನಿಲಂನಳ್ಳಿ |
| 18 | ಮಳಚಾಪೂರ | ಮಳಚಾಪೂರ, ಖಾನಾಪೂರ, ರೂದನೂರ |

| | | |
|---|---|---|
| 19 | ಧನ್ನೂರಾ(ಎಚ್) | ಧನ್ನೂರಾ(ಎಚ್), ಸೇವಾನಗರ |
| 20 | ಜ್ಯಾಂತಿ | ಜ್ಯಾಂತಿ, ತರನಳ್ಳಿ, ನೇಳಗಿ |
| 21 | ಜೋಳದಾಪಗಾ | ಜೋಳದಾಪಗಾ, ಗೋಧಿಪುರ್ಗಿ |
| 22 | ಸಿದ್ದೇಶ್ವರ | ಸಿದ್ದೇಶ್ವರ, ಮರೂರ, ಚಿಕಲಚಂದಾ |
| 23 | ತಳವಾಡ(ಕೆ) | ತಳವಾಡ(ಕೆ), ಕರಡಿಯಾಳ, ಕದಲಾಬಾದ, ಸೈದಾಪೂರವಾಡಿ, ಧಾರಜವಾಡಿ |
| 24 | ಕೋನಮೆಳಕುಂದಾ | ಕೋನಮೆಳಕುಂದಾ, ಅಮದಾಬಾದ, ತಮಗ್ಯಾಳ |
| 25 | ಹಲಬರ್ಗಾ | ಹಲಬರ್ಗಾ, ತೆಗಂಪೂರ, ಹಾಲಹಿಪ್ಪರ್ಗಾ, ಕೋಸಂಗ, ನಾಗೂರ |
| 26 | ಬಾಳೂರ | ಬಾಳುರ, ಗೊರನಾಳ, ಚಂದಾಪೂರ, ಖಾಸೆಂಪೂರ, ಕೊಟಗ್ಯಾಳ, ಮುರಾಳ, ಕೇರೂರ, ಡೊಂಗರಗಿ |
| 27 | ನಿಟ್ಟೂರ(ಬಿ) | ನಿಟ್ಟೂರ(ಬಿ), ಹಜನಾಳ, ಕೇರೂರ, ಡೊಂಗರಗಿ |
| 28 | ಅಂಬೆಸಾಂಗವಿ | ಅಂಬೆಸಾಂಗವಿ, ಹುಪಳಾ, ವಳಸಂಗ, ಗಣೇಶಪೂರವಾಡಿ |
| 29 | ಬೀರಿ(ಬಿ) | ಬೀರಿ(ಬಿ), ಕಳಸದಾಳ, ಹುಣಜಿ(ಎ), ಕೊಟಗ್ಯಾಳವಾಡಿ |
| 30 | ಡೋಣಗಾಪೂರ | ಡೋಣಗಾಪೂರ, ಅಳಂದಿ |
| 31 | ತೇಲಗಾಂವ | ತೆಲಗಾಂವ, ಜಾಯಗಾಂವ, ತಳವಾಡ(ಎಂ) |
| 32 | ಭಾತಂಬ್ರಾ | ಭಾತಂಬ್ರಾ, ಆನಂದವಾಡಿ |
| 33 | ಮೇತಿಮೇಳಕುಂದಾ | ಮೇತಿಮೇಳಕುಂದಾ, ಭಾಟಸಾಂಗವಿ, ಲಂಜವಾಡ |
| 34 | ಲಖನಗಾಂವ | ಲಖನಗಾಂವ, ಅತನೂರ, ಸೋಂಪೂರ |
| 35 | ಶಿವಣಿ | ಶಿವಣಿ, ಕಾಸರತುಗಾಂವ, ಕಾಕನಾಳ |

## ೩) ಬಸವಕಲ್ಯಾಣ ತಾಲ್ಲೂಕು ಪರಿಚಯ:-

ಪ್ರೋ: ಹೆಬ್ಬಾಳಕರ್ ಈಶ್ವರ ಪ್ರಧಾನ ಸಂಪಾದಕರು, ಬಸವಕಲ್ಯಾಣ ತಾಲ್ಲೂಕು ಪರಿಚಯ ಹಾಗೂ ಶೈಕ್ಷಣಿಕ ಪರಂಪರೆ ಕುರಿತು ಬರೆದಿದ್ದಾರೆ. ಬಸವಕಲ್ಯಾಣ ಗೋದಾವರಿಯಿಂದ ಕಾವೇರಿಗೆ ಕನ್ನಡ ನಾಡು ಪಸರಿಸಿದ್ದ ಕಾಲದಲ್ಲಿ "ಕಲ್ಯಾಣ" (ಬಸವಕಲ್ಯಾಣ) ನಾಡಿನ ವಚನಗಳನ್ನು ರಚಿಸುವದರ ಮೂಲಕ ಕನ್ನಡ ಸಾಹಿತ್ಯವನ್ನು ವಿಶ್ವ ಸಾಹಿತ್ಯ ಮಟ್ಟದಲ್ಲಿ ಎದ್ದು ಕಾಣುವಂತೆ ಮಾಡಿದವರು ಇಲ್ಲಿಯ ಬಸವಾದಿ ಶರಣರು ಅಂದು ಮತ್ತು ನಂತರದ ಹಲವಾರು ದಶಕಗಳ ಕಾಲ ಇಲ್ಲಿ ಕನ್ನಡ ಅತ್ಯಂತ ಉಚ್ಚ್ರಾಯ ಸ್ಥಿತಿಯಲ್ಲಿತ್ತು. ಜಾತಿ, ಮತ, ಪಂಥಗಳನ್ನು ಮೀರಿ ಮುಕ್ತ ವಾತಾವರಣದಲ್ಲಿ ನಿತ್ಯ ಸಾಹಿತ್ಯ ಗೋಷ್ಠಿಗಳು ಇಲ್ಲಿ ನಡೆದು ಸಾಹಿತ್ಯದ ತವರು ಮನೆ ಎಂಬ ಖ್ಯಾತಿ ಈ ಪಟ್ಟಣದ್ದಾಗಿತ್ತು. ಆದರೆ ಈಗ ಇಲ್ಲಿ ಸಾಹಿತ್ಯಕ್ಕೆ ಬರಬಂದಂತಾಗಿದೆ. ಗಡಿ ಭಾಗದಲ್ಲಿಯ ಬೇರೆ ಬೇರೆ ಭಾಷೆಗಳ ಪ್ರಭಾವದಿಂದಾಗಿ ಇಲ್ಲಿಯ ಕನ್ನಡದ ಸ್ಥಿತಿ ಶೋಚನೀಯವಾಗಿದೆ.

ಕೇವಲ ಕಾಟಾಚಾರಕ್ಕೆಂಬಂತೆ ಕೆಲವು ಸರ್ಕಾರಿ, ಕನ್ನಡ ಸಾಹಿತ್ಯ ಪರಿಷತ್ತಿನ ಹಾಗೂ ಧಾರ್ಮಿಕ ಕೆಲವು ಕಾರ್ಯಕ್ರಮಗಳು ಇಲ್ಲಿ ನಡೆಯುತ್ತಿರುವುದು ಬಿಟ್ಟರೆ ಬೇರೆ ಚಟುವಟಿಕೆಗಳು ನಗಣ್ಯವೆಂದು ಹೇಳಬೇಕು. ಈ ಪರಿಸ್ಥಿತಿಯನ್ನು ನೋಡಿಯೇ ತಾಲ್ಲೂಕಾ ಕಸಾಪ ಪದಾಧಿಕಾರಿಗಳು ಸೇರಿ ಜಿಲ್ಲಾ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಇಲ್ಲಿ ನಡೆಸಿ ಕಲ್ಯಾಣದ ಪ್ರಣತೆಯಲ್ಲಿ ಕನ್ನಡ ಜ್ಯೋತಿ ಮತ್ತೇ ಪ್ರಜ್ವಲಿಸುವಂತೆ ಮಾಡಬೇಕೆಂಬ ಬಯಕೆ ಮನದಾಳದಲ್ಲಿ ಹುಟ್ಟಿತ್ತೆಂದರೆ ತಪ್ಪಾಗಲಿಕ್ಕಿಲ್ಲ.

ಬಸವಕಲ್ಯಾಣ ತಾಲ್ಲೂಕಿನ ಸುಕ್ಷೇತ್ರ ಹಾರಕೂಡದಲ್ಲಿ ಸಾಹಿತ್ಯ ಸಮ್ಮೇಳನ ನಡೆಸುವ ತೀರ್ಮಾನವಾದ ಬೆನ್ನಲ್ಲೇ ಸಮ್ಮೇಳನ ಕೇವಲ ಎರಡು ದಿನಗಳ ಜಾತ್ರೆಯಂತೆ ಮರೆತು ಹೋಗುವಂತಾಗಬಾರದು ಉಪಯುಕ್ತ ವಿಷಯಗಳ ವಿಚಾರ ವಿಮರ್ಶೆ ಈ ಸಮ್ಮೇಳನದಲ್ಲಿ ನಡೆಯಬೇಕು. ಅಲ್ಲದೆ ಈ ಸಂದರ್ಭದಲ್ಲಿ ಶಾಶ್ವತವಾಗಿ ಉಳಿಯುವಂಥಹ ಗ್ರಂಥಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟಿಸಬೇಕೆಂದು ಕೂಡ ನಿರ್ಧರಿಸಿದೇವು, ಸಾಹಿತ್ಯ ಪರಿಷತ್ತಿನ ಜೀಲ್ಲಾಧ್ಯಕ್ಷ ಪೋ: ಸಿದ್ರಾಮಪ್ಪಾ ಮಾಸಿಮಾಡೆ ಅವರ ಮಾರ್ಗದರ್ಶನದಲ್ಲಿ ಸಂಪಾದಕ ಮಂಡಳಿ ರಚಿಸಿಕೊಂಡು ಈ ಮಹತ್ವದ ಕೆಲಸಕ್ಕೆ ಅಣಿಯಾದೇವು.

ಸಂಪಾದಕ ಮಡಳಿ, ಕಸಾಪ ಪದಾಧಿಕಾರಿಗಳ ಹಾಗೂ ಇತರರ ಪ್ರಯತ್ನಗಳಿಂದಾಗಿ ಈ ಸಮ್ಮೇಳನದ ಸಂದರ್ಭದಲ್ಲಿ ಸಂಚಿಕೆ ಜೊತೆಗೆ ಜಿಲ್ಲೆಯ 5 ತಾಲ್ಲೂಕುಗಳ ಪರಿಚಯವುಳ್ಳ ಪುಸ್ತಕಗಳನ್ನು ಹಾಗೂ ಬಸವಾದಿ ಶಿವಶರಣರ ಕುರಿತಾದ 'ಶರಣ ಸಂಸ್ಕೃತಿ ದರ್ಶನ" ಗ್ರಂಥ, ಕವನ ಸಂಕಲನ ಪ್ರಕಟಿಸಲು ಸಮ್ಮೇಳನಗಳು ಉದಯೋನ್ಮುಖರಿಗೆ, ಯುವ ಪ್ರತಿಭೆಗಳಿಗೆ ಪರಿಚಯಿಸುವ ಗಮನದಲ್ಲಿಟ್ಟು ಇಂತಹವರಿಗೆ ಈ ಕಾರ್ಯದಲ್ಲಿ ಹೆಚ್ಚಾಗಿ ತೊಡಗಿಸಿಕೊಳ್ಳಲಾಗಿದೆ. ಕೆಲವರು ಹೊಸಬರು ಹಾಗೂ ಯುವಕರಾದರೂ ತಮಗೆ ವಹಿಸಿದ ಜವಾಬ್ದಾರಿಗಳನ್ನು ಸಮರ್ಥವಾಗಿ ನಿಭಾಯಿಸಿದ್ದಾರೆಂದು ಕೂಡ ಈ ಮೂಲಕ ನಿಸ್ಸಂಕೋಚವಾಗಿ ತಿಳಿಸಬೇಕೆನಿಸುತ್ತದೆ.

7ನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ 7 ಪುಸ್ತಕ ಪ್ರಕಟಿಸಬೇಕೆಂಬ ಯೋಜನೆ ರೂಪಿಸಿ ಅದನ್ನು ಕಾರ್ಯ ರೂಪಕ್ಕೆ ತಂದ ಬೀದರ ಜಿಲ್ಲಾ ಕ.ಸಾ.ಪ. ಅಧ್ಯಕ್ಷ ಪ್ರೋ: ಸಿದ್ರಾಮಪ್ಪಾ

ಮಾಸಿಮಾಡೆ, ಬೀದರ ತಾಲ್ಲೂಕಾ ಅಧ್ಯಕ್ಷರಾದ ಪ್ರೋ: ಎಸ್.ಎಸ್.ದೇವರಕಲ್, ಭಾಲ್ಕಿ ತಾಲ್ಲೂಕಾ ಕಸಾಪ ಅಧ್ಯಕ್ಷರಾದ ಪ್ರೋ: ಅಂಕುಶ ಢೋಲೆ, ಔರಾದ ತಾಲ್ಲೂಕಾ ಕಸಾಪ ಅಧ್ಯಕ್ಷರಾದ ಪ್ರೋ: ಬಸವರಾಜ ಸ್ವಾಮಿ, ಬಸವಕಲ್ಯಾಣ ತಾಲ್ಲೂಕ ಕಸಾಪ ಅಧ್ಯಕ್ಷರಾದ ಪ್ರೋ: ಧನರಾಜ ಘುಲಾರೆ, ಹುಮನಾಬಾದ ತಾಲ್ಲೂಕಾ ಕಸಾಪ ಅಧ್ಯಕ್ಷರಾದ ಶ್ರೀ ವೀರಂತ ರೆಡ್ಡಿ ಜಂಪಾ & ಜಿಲ್ಲಾ ಹಾಗೂ ತಾಲ್ಲೂಕಾ ಕಸಾಪ ಪಧಾಧಿಕಾರಿಗಳಿಗೆ ಅಭಿನಂದಿಸುತ್ತೇನೆ.

ಬೀದರ ಜಿಲ್ಲಾ ಏಳನೆಯ ಸಾಹಿತ್ಯ ಸಮ್ಮೇಳನ ಗ್ರಾಮೀಣ ಭಾಗದಲ್ಲಿ ಹಮ್ಮಿಕೊಂಡ ಮೊದಲ ಜಿಲ್ಲಾ ಸಮ್ಮೇಳಣವೆಂದೇ ಹೇಳಬೇಕು. ಈ ಸಮ್ಮೇಳನ ಹಾರಕೂಡದಲ್ಲಿ ನಡೆಯಲು ಕಾರಣರಾದ ಅಲ್ಲಿಯ ಹಿರೆಮಠದ ಪೀಠಾಧಿಪತಿ ಪೂಜ್ಯ ಶ್ರೀ ಚೆನ್ನವೀರ ಶಿವಾಚಾರ್ಯರಿಗೆ ಭಕ್ತಿ ಪೂರ್ವಕ ನಮನಗಳನ್ನು ಹೇಳುತ್ತಾ ಸ್ವಾಗತ ಸಮೀತಿಯ ಗೌರವಾಧ್ಯಕ್ಷರಾದ ಮಾಜಿ ಸಚಿವರಾದ ಬಸವರಾಜ ಪಾಟಿಲ ಹುಮನಾಬಾದ, ಕಾರ್ಯಧ್ಯಕ್ಷರಾದ ಹಾಗೂ ಮಾಜಿ ಶಾಸಕರಾದ ಶ್ರೀ ಎಂ.ಜಿ.ಮೂಳೆ, ಮಾಜಿ ಜಿ.ಪಂ.ಅಧ್ಯಕ್ಷರಾದ ಅನುರಾಧ ತಪಲಿ ಸಹಕರಿಸಿದ ಕನ್ನಡ ಉಪನ್ಯಾಸಕರುಗಳಾದ ಪ್ರೋ: ಎಂ. ನಾಗರಾಜ, ಪ್ರೋ: ಶರಣಯ್ಯಾ ಮಠಪತಿ, ಪ್ರೋ: ಶಂಭುಲಿಂಗ ಕಾಮಣ್ಣ, ಪ್ರೋ: ಜಗದೀಶ ಬಿಜಾಪೂರೆ ಇವರುಗಳಿಗೆ ಹಾಗೂ ಸಾಹಿತ್ಯ ಪರಿಷಿತ್ತಿನ ಪದಾಧಿಕಾರಿಗಲಿಗೆ ಬಸವಕಲ್ಯಾಣ ತಾಲ್ಲೂಕು ಪರಿಚಯ ಗ್ರಂಥ ಪ್ರಕಟಿಸಲು ಸಹಕರಿಸಿದ ಬಸವಕಲ್ಯಾಣ ಮತ ಕ್ಷೇತ್ರದ ಜನಪ್ರೀಯ ಮಾಜಿ ಶಾಸಕರಾದ ಎಂ.ಜಿ.ಮೂಳೆಯವರಿಗೆ ಮತ್ತು ಗ್ರಂಥದ ಪ್ರಧಾನ ಸಂಪಾದಕರಾದ ಪ್ರೋ: ಈಶ್ವರ ಹೆಬ್ಬಾಳಕರ ಅವರಿಗೂ ಅಂದವಾಗಿ ಮುದ್ರಿಸಿಕೊಟ್ಟ ಮುದ್ರಕರಿಗೂ ಹಾಗೂ ಸಂಪಾದಕ ಮಂಡಳಿಯವರಿಗೆ ಈ ಮೂಲಕ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಕರ್ನಾಟಕದಲ್ಲಿ ಹಲವಾರು ರಾಜಮನೆತನಗಳು ರಾಜ್ಯಭಾರ ಮಾಡಿವೆ. ಅವುಗಳಲ್ಲಿ ಕಲಚೂರಿ ಮನೆತನ ಮೊದಲನೆಯವರು ಆದರೆ ಇವರ ಕಾಲದಲ್ಲಿ ನಾಡಿನಲ್ಲಿ ಸುಖ, ಶಾಂತಿ ನೆಲೆಗೊಳಿಸುವ ಕಡೆ ಹೆಚ್ಚಿನ ಗಮನ ಹರಿಸಲಿಲ್ಲವೆಂಬುದು ತಿಳಿದು ಬರುತ್ತದೆ. ಈ ನಿಟ್ಟಿನಲ್ಲಿ ಕಾರ್ಯಗೈದವರೆಂದರೆ ನಂತರ ಬಂದ ಇಮ್ಮಡಿ ಬಿಜ್ಜಳನ ಮಂತ್ರಿ ಬಸವಣ್ಣನವರು ಮಾತ್ರ ಇವರ ಕಾಲದಲ್ಲಿ ಕರ್ನಾಟಕದ ಚರಿತ್ರೆಯಲ್ಲಷ್ಟೆ ಅಲ್ಲ ವಿಶ್ವದ ಚರೀತ್ರೆಯಲ್ಲಿಯೇ ಮಹತ್ವದ ಸ್ಥಾನ ಬಸವಕಲ್ಯಾಣಕ್ಕೆ ಲಭಿಸಿತು.

ಸಾಮಾಜಿಕ ಧಾರ್ಮಿಕ ರಾಜಕೀಯ ಕ್ಷೇತ್ರದಲ್ಲಿ ಬಸವೇಶ್ವರ ನೇತೃತ್ವದಲ್ಲಿ 770 ಅಮರ ಗಣಂಗಳು ಕೂಡಿಕೊಂಡು ಕ್ರಾಂತಿಯನ್ನೆ ಮಾಡಿದರು. ಇವರಿಂದ ವಚನ ರಚಿಸಿ ಸಮಾಜದ ಆಗು ಹೋಗುಗಳ ಬಗೆಗಿನ ಚಿಂತನ ಮಂಥನ ನಡೆದು ಸಮಾಜದಲ್ಲಿ ಸಮಾನತೆ ತರಲು ಅವರು ಮಾಡಿದ ತ್ಯಾಗ ಬಲಿದಾನ-ದಿಂದಾಗಿಯೇ ಜಗತ್ತು ಬೆರಗೊಳ್ಳುವಂತಹ ಮಹಾಕ್ರಾಂತಿ ನಡೆದದ್ದು ಇದೆ ಬಸವಕಲ್ಯಾಣದಲ್ಲಿ.

*ಭೌಗೋಳಿಕ ಲಕ್ಷಣ*

ಕರ್ನಾಟಕ ರಾಜ್ಯದ ಉತ್ತರ ಭಾಗಕ್ಕಿರುವ ಬೀದರ ಜಿಲ್ಲೆಯ 5 ತಾಲ್ಲೂಕುಗಳಲ್ಲಿ ಬಸವಕಲ್ಯಾಣ ಅತ್ಯಂತ ದೊಡ್ಡ ತಾಲ್ಲೂಕು ಆಗಿದೆ. ಭೂಮಿ ಘನಭೂತ್ತಾದ ಲಾವಾರಸದಿಂದ ಉಂಟಾದ ಬಂಡೆಗಳಿಂದ ಕೂಡಿದೆ. ಸಮತಟ್ಟಾಗಿದ್ದ ಅಲ್ಲಲ್ಲಿ ಗುಡ್ಡ ಗಾಡುಗಳನ್ನು ಹೊಂದಿದೆ. ಈ ಭಾಗವು ಒಂದು ಪ್ರಸ್ಥ ಭೂಮಿಯಾಗಿದ್ದು ಸಮುದ್ರ ಮಟ್ಟಕ್ಕೆ ಸುಮಾರು 710ಮೀ ಎತ್ತರದಲ್ಲಿದೆ ಅಲಲ್ಲಿ ಕೆಂಪು ಬಣ್ಣದ ಮೃದುವಾದ ಲ್ಯಾಟರೈಟ್ ಬಂಡೆಗಳು ದೊರೆಯುತ್ತವೆ. ತಾಲ್ಲೂಕಿನ ಪ್ರದೇಶವನ್ನು ಕೆಂಪು ಮಣ್ಣಿನ ಎರಡು ಸ್ವಾಭಾವಿಕ ವಿಭಾಗಗಳನ್ನಾಗಿ ವಿಂಗಡಿಸಬಹುದು.

ತಾಲ್ಲೂಕು ಸಮತೋಲನವಾದ ಹವಾಗುಣ ಹೊಂದಿದ್ದರು ಒಣ ಹವೆಯಿಂದ ಕೂಡಿದ ವಾತಾವರಣ ಎಲ್ಲ ಕಾಲದಲ್ಲೂ ಇರುತ್ತದೆ. ಸರಾಸರಿ ಉಷ್ಣಾಂಶ ಗರೀಷ್ಠ $39^0$C ಮತ್ತು ಕನಿಷ್ಠ $21^0$C ಇರುತ್ತದೆ.

ಬಸವಕಲ್ಯಾಣ ತಾಲ್ಲೂಕು ಗೋದಾವರಿ ಮತ್ತು ಕೃಷ್ಣ ನದಿಗಳ ಜಲಾನಯನದ ಪ್ರದೇಶಗಳ ಮಧ್ಯದಲ್ಲಿ ಇರುತ್ತದೆ. ತಾಲ್ಲೂಕಿನ ಮುಖ್ಯ ನದಿ ಚುಳುಕಿ ನಾಲಾ ಈ ನದಿಗೆ ಆಣೆಕಟ್ಟು ಕಟ್ಟಲಾಗಿದೆ. ಇಲ್ಲಿ ಇನ್ನೊಂದು ಮುಲ್ಲಾಮಾರಿ ಡ್ಯಾಮ ಇದೆ. ಬಸವಕಲ್ಯಾಣ ಉತ್ತರ ಆಕ್ಷಾಂಶ 17–18 ಮತ್ತು ಪೂರ್ವ ರೇಖಾಂಶ 76–77 ಮಧ್ಯದ ಕ್ಷೇತ್ರ ವ್ಯಾಪ್ತಿಯಲ್ಲಿದೆ. ತಾಲ್ಲೂಕಿನ ಉದ್ದಳತೆ 1206 ಚ.ಕಿ.ಮಿ. ಪಶ್ಚಿಮದಲ್ಲಿ ಮಹಾರಾಷ್ಟ್ರ ರಾಜ್ಯದ ಉಮರ್ಗಾ ಮತ್ತು ದಕ್ಷಿಣದಲ್ಲಿ ಗುಲಬರ್ಗಾ ಜಿಲ್ಲೆ ಇದೆ. ಉತ್ತರ ಭಾಗಕ್ಕೆ ಭಾಲ್ಕಿ, ಹುಮನಾಬಾದ ತಾಲ್ಲೂಕು ಬರುತ್ತವೆ.

ಈ ತಾಲ್ಲೂಕಿನ ಹಲವಾರು ಗ್ರಾಮಗಳು ಐತಿಹಾಸಿಕ ಪರಂಪರೆ ಹೊಂದಿವೆ. ಮೌರ್ಯರು, ಶಾತವಾಹನರು, ಬಾದಾಮಿ, ಚಾಲುಕ್ಯ, ರಾಷ್ಟ್ರಕೂಟ, ಶಿಲಾಹಾರ, ಕಲ್ಯಾಣದ ಚಾಲುಕ್ಯರು, ಕಲಚೂರಿ ಕಾಕತಿಯರು, ತುಘಲಕ್ ಹಾಗೂ ಹೈದ್ರಾಬಾದ ನಿಜಾಮರು ಈ ಪ್ರದೇಶವನ್ನು ಆಳಿದ್ದಾರೆ. ವಿಭಿನ್ನ ಜನಾಂಗಗಳನ್ನು ಕಲೆ ಸಾಹಿತ್ಯ, ಸಂಸ್ಕೃತಿಗಳನ್ನು ಈ ಪ್ರದೇಶ ಹೊಂದಿದೆ.

ತಾಲ್ಲೂಕಿನ ಒಟ್ಟು 113 ಜನವಸತಿ ಹಳ್ಳಿಗಳಿವೆ ಒಂದು ಹಳ್ಳಿಯಲ್ಲಿ ಜನ ವಸತಿ ಇರುವುದಿಲ್ಲ ಬಸವಕಲ್ಯಾಣ, ರಾಜೇಶ್ವರ, ಹೂಲಸೂರ, ಮುಡಬಿ, ಮಂಠಾಳ, ಕೋಹಿನೂರ ಇವು ಹೋಬಳಿ ವಿಭಾಗಗಳು. ತಾಲ್ಲೂಕಿನ ಒಟ್ಟು ಜನಸಂಖ್ಯೆ 246340 ಇರುವುದು. ಇವರಲ್ಲಿ 124969 ಪುರುಷರು, 121371 ಸ್ತ್ರೀಯರು ಇರುವುದು.

*ಜನವರ್ಗ–ಬಣಗಳು:–*

ಬಸವಕಲ್ಯಾಣ ತಲ್ಲೂಕಿನಲ್ಲಿ ವೀರಶೈವರು, ಮುಸ್ಲಾಂನರು, ಪಾಂಚಾಳ, ಅಕ್ಕಸಾಲಿಗ, ಮರಾಠಾ, ಹಟಗಾರರು, ಅಗಸರು, ಗೊಲ್ಲರು, ಫುಲವಾಲಿ, ಚಮ್ಮಾರ, ಸೋನಾರ, ಕುರುಬರು, ಹಡಪದರು, ವಡ್ಡರು, ಕೊರವರು, ಬೂರ ಬೂರ ಪೊಚರು, ಬೊವಿ, ಕೋಳಿ, ಖುರುಡ, ಗೊಂದಳಿ, ಉಪ್ಪಾರ, ಜಾಡರ್,

ಎಲಗಾರ, ಸಿಂಪಿ, ರಂಗೇರಿ, ಹೂಗಾರ ಮುಂತಾದ ಜಾತಿ-ಉಪಜಾತಿಗಳು ಜನವರ್ಗಗಳು ಬಣಗಳು ಇರುವುರು.

ಕಲ್ಯಾಣ ಚಾಲುಕ್ಯರ ಇತಿಹಾಸದ ಆರಂಭ ಕಾಲದ ಪೂರ್ವದಲ್ಲಿ ವೈಷ್ಣವ, ಬೌದ್ಧ, ಜೈನ, ಬ್ರಾಹ್ಮಣ, ಚತುರ್ವರ್ಣಗಳು, ಪ್ರಚಲಿತವಾಗಿದ್ದವು. ಎಂದು ತಿಳಿದು ಬರುತ್ತದೆ.

ಲಂಬಾಣಿ ತಾಂಡಾಗಳು ಸಹ ಈ ತಾಲ್ಲೂಕಿನಲ್ಲಿವೆ. ಇತ್ತಿಚಿಗೆ ಸರಕಾರ ಇವರಿಗೆ ಮನೆ ಕಟ್ಟಿಕೊಟ್ಟಿದೆ ಇನ್ನು ಕೆಲವರು ಮಣ್ಣಿನ ಮನೆಗಳಲ್ಲಿಯೇ ವಾಸಿಸುತ್ತಾರೆ. ಲಮಾಣಿ ಜನಾಂಗದವರು ತಮ್ಮ ಹಿತೈಷಿಯಾಗಿದ್ದ ವ್ಯಕ್ತಿಗೆ ನಾಯಕ ಎಂದು ಕರೆಯುತ್ತಾರೆ.

ಹಾರಕೂಡ ತಾಂಡಾ, ಮೈಸಲಗಾ ತಾಂಡಾ, ಕಲಕೋರಾ ತಾಂಡಾ, ಗೌರ ತಾಂಡಾ, ಮುಡಬಿ ತಾಂಡಾ, ಯಕಲೂರ ತಾಂಡಾ, ಚಿಟ್ಟಾ ತಾಂಡಾ, ನಾರಾಯಣಪೂರ ತಾಂಡಾ ಮುಂತಾದವು ಈ ತಾಲ್ಲೂಕಿನ ಪ್ರಮುಖ ತಾಂಡಾಗಳಾಗಿವೆ.

***ಪುರಸಭೆ:-***

ಬಸವಕಲ್ಯಾಣದ ಪುರಸಭೆ 1958ರಲ್ಲಿ ಪ್ರಾರಂಭವಯಿತು. ರಾಮಗೀರ ಜಾಗಿರದಾರ ಅವರು ಇದರ ಪ್ರಥಮ ಅಧ್ಯಕ್ಷರಾಗಿದ್ದರು 1048ರಲ್ಲಿ ಕಲ್ಯಾಣ ಚಾಳುಕ್ಯರು ಕಟ್ಟಿಸಿದ ಕೋಟೆಯ ಎದುರು ದ್ವಾರ ಪಾಲಕರ ರಕ್ಷಣೆ ಕೊಠಡಿಗಳಲ್ಲಿಯೇ ಇದರ ಕಾರ್ಯಲಯ ಇದೆ. ಇದರ ಪಕ್ಕದಲ್ಲಿಯೇ ಈಗ ನೂತನ ಕಟ್ಟಡ ಕಟ್ಟಲು ಅಡಿಪಾಯ ಹಾಕಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಬಸವಕಲ್ಯಾಣದ ಪುರಸಭೆ ಚುನಾಯಿತ ಸದಸ್ಯರ ಸಂಖ್ಯೆ 27 ಆಗಿದೆ. ಪ್ರತಿಯೊಂದು ವಾರ್ಡಿಗೆ ಒಬ್ಬರಂತೆ ಒಟ್ಟು 27 ವಾರ್ಡುಗಳಿಂದ ಸದಸ್ಯರನ್ನು ಆಯ್ಕೆ ಮಾಡಲಾಗುತ್ತಿದೆ. ತ್ರಿಪುರಾಂತ ಕೂಡ ಪುರಸಭೆ ವ್ಯಾಪ್ತಿಗೆ ಒಳಪಟ್ಟಿದೆ. ಪುರಸಭೆಯಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರು ಇರುತ್ತಾರೆ. ಸರಕಾರದ ವತಿಯಿಂದ ಮುಖ್ಯಾಧಿಕಾರಿಗಳನ್ನು ನೇಮಿಸಲಾಗುತ್ತದೆ. ಅಧ್ಯಕ್ಷರ ನೇತೃತ್ವದಲ್ಲಿ ಪ್ರತಿ ತಿಂಗಳಿಗೆ ಸದಸ್ಯರ ಸಭೆ ನಡೆಸಿ ಪಟ್ಟಣದ ಸಮಸ್ಯೆಗಳು ಕುರಿತು ಚರ್ಚಿಸಲಾಗುತ್ತದೆ. ವರ್ಷಕ್ಕೆ ಒಂದು ಬಾರಿ ವಾರ್ಷಿಕ ಆಯ-ವ್ಯಯ ಮಂಡನೆಗಾಗಿ ಸಾಮಾನ್ಯ ಸಭೆ ನಡೆಸಲಾಗುತ್ತದೆ. ಪಟ್ಟಣದಲ್ಲಿರುವ ಕುಡಿಯುವ ನೀರಿನ ವ್ಯವಸ್ಥೆ, ರಸ್ತೆ ದುರಸ್ತಿ, ಚರಂಡಿ ಸ್ವಚ್ಛತೆ ಮುಂತಾದ ಕಾರ್ಯಗಳನ್ನು ಪುರಸಭೆ ಸದಸ್ಯರು ಕೈಗೊಳ್ಳಬೇಕಾಗುತ್ತದೆ. ಇತ್ತಿಚಿಗೆ ಪಟ್ಟಣದ ಪುರಸಭೆಯಲ್ಲಿ ಇನ್ನೂ ಹೆಚ್ಚಿನ ಸಿಬ್ಬಂದಿಗಳನ್ನು ನೇಮಿಸಿಕೊಳ್ಳಬೇಕಾದ ಅವಶ್ಯಕತೆ ಇದೆ.

***ಶಿಕ್ಷಣ:-***

ಕಲ್ಯಾಣ ಒಂದು ಕಾಲದಲ್ಲಿ ಜ್ಞಾನಕ್ಕೆ ಮತ್ತು ಶಿಕ್ಷಣಕ್ಕೆ ಹೆಸರಾದ ಸ್ಥಳವಾಗಿದೆ. ಆರನೇ ವಿಕ್ರಮಾದಿತ್ಯನ ಆಶ್ರಯದಲ್ಲಿದ್ದ ಬಿಲ್ಹಣನು ವಿಕ್ರಮಾಂಕ ದೇವಚರಿತಂ ಎಂಬ ಗ್ರಂಥ ಸರ್ವಜ್ಞ ಚಕ್ರವರ್ತಿ 3ನೇಯ ಸೋಮೇಶ್ವರನ ಮಾನಸೊಲ್ಲಾಸ ಕೀರ್ತಿವರ್ಮನ ಗೋ ವೈದ್ಯ ಶಾಸ್ತ್ರ ಮುಂತಾದವುಗಳನ್ನು ಇಲ್ಲಿಯೇ ರಚಿತವಾದವುಗಳು 12ನೇಯ ಶತಮಾನದ ಕಾಲದಲ್ಲಿ ಬಸವಾದಿ ಶಿವಶರಣರು ಸ್ಥಾಪಿಸಿದ ಅನುಭವ

ಮಂಟಪವಂತು ಅನೌಪಚಾರಿಕ ಶಿಕ್ಷಣದ ಕೇಂದ್ರವಾಗಿತ್ತೆಂದು ಹೇಳಬಹುದು. ಅಂದು ವಚನಗಳ ಮೂಲಕ ಜನ ಜಾಗೃತಿ ಕಾರ್ಯ ನಡೆಯಿತ್ತೆಂದೆ ಹೇಳಬಹುದು ಆ ಕಾಲದಲ್ಲಿ ಕನ್ನಡ ಇಲ್ಲಿ ಉಚ್ರ್ಾಯ ಸ್ಥಿತಿಯಲ್ಲಿದ್ದರೆ ನಂತರದ ಕಾಲದಲ್ಲಿ ಮುಸ್ಲಿಂ ರಾಜರು, ಮರಾಠಾ ರಾಜರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದರಿಂದ ಕನ್ನಡ ಜೊತೆಗೆ ಉರ್ದು, ಮರಾಠಿ ಮುಂತಾದ ಭಾಷೆಗಳು ಕೂಡ ಇಲ್ಲಿಯ ಜನರ ಆಡು ಭಾಷೆಗಳಾದವು ಒಟ್ಟಾರೆ ಈ ಪ್ರದೇಶ ಬಹು ಭಾಷೆಯ ತವರೂರಾಯಿತು. ಇಲ್ಲಿ ಬಹು ಭಾಷಿಕ ಜನರಿರುವುದರಿಂದಲೇ ಕನ್ನಡ, ಮರಾಠಿ, ಉರ್ದು ಮತ್ತು ಹಿಂದಿ ಮಾದ್ಯಮಗಳಲ್ಲಿ ಇಲ್ಲಿ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ನಡೆಯುತ್ತದೆ.

ಕೇಂದ್ರ ಮತ್ತು ರಾಜ್ಯ ಸರಕಾರಗಳು ಜನರನ್ನು ಸಾಕ್ಷರರನ್ನಾಗಿ ಮಾಡಲು ಬಹಳಷ್ಟು ಯೋಜನೆಗಳನ್ನು ಕಾರ್ಯಗತ ಗೊಳಿಸುತ್ತಿದ್ದು, ಇದರ ಲಾಭ ಬಸವಕಲ್ಯಾಣ ತಾಲ್ಲೂಕಿನಲ್ಲಿ ಸಾಕ್ಷರತೆಯ ಪ್ರಮಾಣ ಗಂಡಸರಲ್ಲಿ ಶೇಕಡಾ 57.71 ರಷ್ಟು ಹೆಣ್ಣು ಮಕ್ಕಳಲ್ಲಿ ಶೇಕಡಾ 42.29 ರಷ್ಟು ಇದೆ. ಪ್ರಸಕ್ತ ಸಾಲಿನಲ್ಲಿ ಒಟ್ಟು 84579 ವಿದ್ಯಾಭ್ಯಾಸ ಮಾಡುತ್ತಿರುವವರ ಸಂಖ್ಯೆಯಾಗಿದೆ.

ತಾಲ್ಲೂಕಿನಲ್ಲಿ ಒಟ್ಟು 8 ಸರಕಾರಿ ಶಿಶು ವಿಹಾರಗಳು, 242 ಕಿರಿಯ ಪ್ರಾಥಮಿಕ ಶಾಲೆಗಳು, 46 ಪ್ರೌಢ ಶಾಲೆಗಳು, 13 ಪದವಿ ಪೂರ್ವ ಕಾಲೇಜುಗಳು, 3 ಮಹಾವಿದ್ಯಾಲಯಗಳು, 4 ಕೈಗಾರಿಕಾ ತರಬೇತಿ ಕೇಂದ್ರಗಳು, ಒಂದು ಬಿ.ಫಾರ್ಮಸಿ ಕಾಲೇಜು, ಒಂದು ತಾಂತ್ರಿಕ ಕಾಲೇಜು, ಒಂದು ಚಿತ್ರಕಲಾ ಮಹಾವಿದ್ಯಾಲಯ, ಒಂದು ಸಂಗೀತ, ಶಾಲೆ ಇದೆ. ಕೇಂದ್ರ ಸರಕಾರದ ಯೋಜನೆಯಡಿಯಲ್ಲಿ ಜವಾಹರ ನವೋದಯ ವಿದ್ಯಾಲಯ ಮತ್ತು ರಾಜ್ಯ ಸರಕಾರದಿಂದ ಮೂರಾರ್ಜಿ ಶಾಲೆಗಳನ್ನು ಇಲ್ಲಿ ಸ್ಥಾಪಿಸಲಾಗಿದೆ. ತಾಲ್ಲೂಕಿನಲ್ಲಿ ಮಧ್ಯಾಹ್ನದ ಬಿಸಿಯೂಟ ಯೋಜನೆ, ಬಾ ಮರಳಿ ಶಾಲೆಗೆ ಡಿ.ಪಿ.ಇ.ಪಿ. ಯೋಜನೆ ಮುಂತಾದ ಯೋಜನೆಗಳು ಶಾಲೆಗಳಲ್ಲಿ ಕಾರ್ಯಗತಗೊಳ್ಳುತ್ತಿವೆ.

ಕ್ರೀಡೆ:-

ನಗರ ಪಾಲಿಕೆ, ಪುರಸಭೆ, ನಗರಾಭಿವೃದ್ಧಿ, ಪ್ರಾಧಿಕಾರ ಮುಂತಾದವುಗಳ ಒಟ್ಟಾರೆ ಆಯ-ವ್ಯಯದಲ್ಲಿ ಶೇಕಡಾ 1ರಷ್ಟು ಹಣವನ್ನು ಕ್ರೀಡಾ ಚಟುವಟಿಕೆಗಳಿಗಾಗಿ ಉಪಯೋಗಿಸಬೇಕೆಂದು ನಿಯಮವಿದ್ದರೂ ಇಲ್ಲಿಯ ಪುರಸಭೆಯವರು ಕ್ರೀಡೆಗಳ ಕಡೆಗೆ ನಿರ್ಲಕ್ಷ್ಯ ವಹಿಸಿದ್ದಾರೆ. ಎಂದೆ ಹೇಳಬೇಕು. ಕಳೆದ ಕೆಲವು ವರ್ಷಗಳ ಹಿಂದೆ ಇಲ್ಲಿ ಸುಸಜ್ಜಿತವಾದ ಕ್ರೀಡಾಂಗಣ ಕಟ್ಟಲು ಶಾಸಕರ ಅನುದಾನದಲ್ಲಿ ಹಣ ಬಿಡುಗಡೆ ಮಾಡಲಾಗಿದೆ ಆದರೂ ಇನ್ನೂ ವರೆಗೆ ಈ ಕಾಮಗಾರಿ ಪೂರ್ಣಗೊಂಡಿಲ್ಲ. ಈ ತಾಲ್ಲೂಕು ಕುಸ್ತಿಗೆ ಹೆಸರು ವಾಸಿಯಾದ ಪ್ರದೇಶವಾಗಿದೆ ತಾಲ್ಲೂಕಿನ ಗಿರಿಗಿಲಿ, ಗದಲೆಗಾಂವ ಹಾರಕೂಡ ಕೊಹಿನೂರ, ಬೇಟಗೇರಾ, ವಾಡಿ, ಹತ್ತರಗಾ ಗ್ರಾಮಗಳು ಈಗಲೂ ನಡೆಯುವ ಜಾತ್ರೆಯಲ್ಲಿ ಭವ್ಯ ಜಂಗಿ ಕುಸ್ತಿಗಳನ್ನು ನಡೆಸಿ, ಕುಸ್ತಿ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಹೋಗುವ ಕಾರ್ಯ ನಡೆಯುತ್ತಿದೆ. ತಾಲ್ಲೂಕಿನ ಪ್ರತಿ ಗ್ರಾಮಗಳಲ್ಲಿ ನಡೆಯುವ ಗ್ರಾಮ ದೇವತೆಗಳ ಜಾತ್ರೆಗಳ ಸಂದರ್ಭದಲ್ಲಿ ಚಿಕ್ಕ ಪುಟ್ಟ ಕುಸ್ತಿ ಸ್ಪರ್ದೆಗಳನ್ನು ಏರ್ಪಡಿಸಲಾಗುತ್ತದೆ.

1997ರಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ 4ನೇ ರಾಷ್ಟ್ರೀಯ ಕ್ರೀಡಾಕೂಟ ನಡೆದ ಸಂದರ್ಭದಲ್ಲಿ ಬಸವಕಲ್ಯಾಣದಿಂದಲೇ ಕ್ರೀಡಾ ಜ್ಯೋತಿಯನ್ನು ಹೊತ್ತೊಯ್ಯಲಾಗಿತ್ತು ಎಂದು ವಿಶೇಷವಾಗಿ ಇಲ್ಲಿ ಉಲ್ಲೇಖಿಸಲಾಗಿದೆ.

ಸ್ಥಳಿಯ ಸಂಘ ಸಂಸ್ಥೆಗಳಿಂದ ಕೂಡ ಆಗಾಗ ಖೋ-ಖೋ, ಕಬ್ಬಡಿ, ವಾಲಿಬಾಲ್, ಶಾಟ್‌ಪುಟ್, ಹ್ಯಾಮರ್ ಥ್ರೊ, ಎತ್ತರ ಜೀಗಿತ, ಉದ್ದ ಜೀಗಿತ ಪಂದ್ಯಾವಳಿ ಮುಂತಾದವುಗಳನ್ನು ಆಯೋಜಿಸಿ ಕ್ರೀಡಾ ಪಟುಗಳಿಗೆ ಉತ್ತೇಜಿಸುವ ಕಾರ್ಯ ನಡೆಯುತ್ತಿರುತ್ತದೆ.

*ರಾಜಕೀಯ:-*

ಸ್ವಾತಂತ್ರ್ಯ ಪೂರ್ವದಲ್ಲಿ ಬಸವಕಲ್ಯಾಣ ಹೈದ್ರಾಬಾದ ನಿಜಾಮರ ಆಳ್ವಿಕೆಯಲ್ಲಿತ್ತು. ಅಂದು ಹುಲಸೂರ ಮತ್ತು ಹುಮನಾಬಾದ ಅಮಲಗಾರಿಕೆಯ ಹೋಬಳಿ ಗ್ರಾಮ ಇದಾಗಿತ್ತು. ನಂತರ ಮೈಸೂರು ಕರ್ಣಾಟಕ ಎಂಬ ಹೆಸರು ಪಡೆದ ನಮತರ ಎಸ್ ನಿಜಲಿಂಗಪ್ಪ ಮುಖ್ಯ ಮಂತ್ರಿಯಾದ ನಂತರ ಇದಕ್ಕೆ ತಾಲ್ಲುಕು ಸ್ಥಾನ ದೊರೆಯಿತು.

ಗೋಪಾಳರಾವ ಮುಡಬಿ (1964–69), ಸಿದ್ರಾಮ್ಪಪಾ ಖೂಬಾ (1969–74) ಅನ್ನಪೂರ್ಣಬಾಯಿ ರಗಟೆ (1974–79), ಬಾಪುರಾವ ಪಾಟೀಲ ಹುಲಸೂರಕರ (1979–84), ಬಸವರಾಜ ಪಾಟೀಲ ಅಟ್ಟೂರ ಅವರು ನಾಲ್ಕು ಅವಧಿ ಎರಡು ಸಲ ಸಚಿವರಾಗಿದ್ದರು. (1984–99) ಮಾರುತಿರಾವ ಜಿ.ಮೂಳೆ ಇಲ್ಲಿಯ ಶಾಸಕರಾಗಿ ಬಸವಕಲ್ಯಾಣ ಅಭಿವೃದ್ದಿಗೆ ಈ ಕೆಳಕಂಡ ಕಾರ್ಯಕ್ರಮಗಳು ಪ್ರಾರಂಭಿಸಿದ್ದಾರೆ.

ಬಸವಕಲ್ಯಾಣ ಪಟ್ಟಣ ಒಳಚರಂಡಿ ವ್ಯವಸ್ಥೆಗೆ 50 ಲಕ್ಷ ರೂ.
ಆಯುರ್ವೇದ ಆಸ್ಪತ್ರೆ ಖಿಲ್ಲಾಗಲ್ಲಿ 20 ಲಕ್ಷರೂ
ಸರಕಾರಿ ಆಸ್ಪತ್ರೆ ಮೇಲ್ದರ್ಜೆಗೆ ಎರಿಸಲು 1 ಕೋಟಿ ರೂ.
ಸಸ್ತಾಪೂರ ಬಂಗ್ಲಾಂದಿಂದ ಬಸಸ್ಟಾಂಡ ವರೆಗೆ ರಸ್ತೆ ಡಾಂಬರೀಕರಣ 60ಲಕ್ಷರೂ
ಬಸ್ ನಿಲ್ದಾಣ ಆಧುನಿಕರಣಕ್ಕೆ 15 ಲಕ್ಷರೂ
ಪುರಸಬೆ ಕಟ್ಟಡಕ್ಕಾಗಿ 50 ಲಕ್ಷ ರೂ.
ನೀಲಾಂಬಿಕಾ ಕಾಲೇಜು ಕಟ್ಟಡಕ್ಕೆ 10 ಲಕ್ಷ ರೂ
ಚಿಟ್ಟ ಕ್ರಾಸ ದಿಂದ ಹೋನಳ್ಳಿ ರಸ್ತೆ 10 ಲಕ್ಷ ರೂ.
ಮಂಠಾಳದಿಂದ ಗುಂಡುರ ರಸ್ತೆ 50 ಲಕ್ಷ ರೂ
ಘಾಟಬೋರಾಳದಿಂದ ಕಿಟ್ಟಾ ರಸ್ತೆ 30 ಲಕ್ಷ ರೂ
ತ್ರಿಪೂರಾಂತ ಬ್ರಿಡ್ಜ 1 ಕೋಟಿ ರೂ.
ಹಾರಕೂಡದಿಂದ ಗದ್ಲೆಗಾಂವ ರಸ್ತೆ ಸುಧಾರಣೆ 15 ಲಕ್ಷರೂ.

ಕುಡಿಯುವ ನೀರಿಗಾಗಿ ಕಿಟ್ವಾ (ಕೆ) 12ಲಕ್ಷ ರೂ, ಇಸ್ಲಾಂಪೂರ 15 ಲಕ್ಷ ರೂ, ಉಮಾಪೂರಕ್ಕೆ 10 ಲಕ್ಷ ರೂ. ನಾರಾಯಣಪೂರಕ್ಕೆ 20 ಲಕ್ಷ ರೂ, ಸೈದಾಪೂರ 10 ಲಕ್ಷ ರೂ, ಪಂಡರಗೇರಾ 10 ಲಕ್ಷ ರೂ, ಏಕಲೂರ ಥಾಂಡಾ 8 ಲಕ್ಷ ರೂ. ಬಂಜೇರಾ ಥಾಂಥಾ 5 ಲಕ್ಷ ರೂ, ಒಟ್ಟು 1 ಕೋಟಿ 25 ಲಕ್ಷ ರೂಪಾಯಿಗಳು.

ಶಾಲಾ ಕಟ್ಟಡ 80 ಶಾಲೆಗಳಿಗೆ 80 ಕೋಣೆಗಳು ಕಟ್ಟಲು ಒಟ್ಟು 1 ಕೋಟಿ ರೂ. ಕುಡಿಯುವ ನೀರು ಸಂಗ್ರಹಿಸುವ ಟ್ಯಾಂಕ್ ಹಂದ್ರಾಳ (ಆರ್) 30 ಲಕ್ಷ ರೂ. ಹಾರಕೂಡ ಥಾಂಡಾ30 ಲಕ್ಷ ರೂ.

***ರಸ್ತೆ ಅಭಿವೃದ್ಧಿ:-***

ಉಜಳಂಬದಿಂದ ಬೇಟಗೇರಾ 60 ಲಕ್ಷ ರೂ, ಕೋಹಿನೂರ ಪಾಡದಿಂದ ಹಂಗರ್ಗಾ (ಎಸ್) 1.00 ಕೋಟಿ ರೂ., ಕವಡಿಯಾಳದಿಂದ ನಿರಗೂಡಿ 80 ಲಕ್ಷ ರೂ. ಬಸವಕಲ್ಯಾಣದಿಂದ ಖಂಡ್ಯಾಳ 15 ಲಕ್ಷ ರೂ. ಒಟ್ಟು 3 ಕೋಟಿ 55 ಲಕ್ಷ ರೂ. ಬಸವಕಲ್ಯಾಣ ಮಹಾದ್ವಾರ ಪೂರ್ತಿಗೊಳಿಸಲು 5 ಲಕ್ಷ ಹೀಗಾಗಿ ಅಭಿವೃದ್ಧಿಗಳು ಕಾರ್ಯಗಳು ಶಾಸಕರಾದ ಶ್ರೀ ಎಂ.ಜಿ.ಮುಳೆಯವರು ಕೈಗೊಂಡು ಬಸವಕಲ್ಯಾಣ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಇನ್ನು ಆಗಬೇಕಾಗಿದ್ದು ಬಹಳಷ್ಟಿದೆ.

***ಆಡಳಿತ:-***

ಬಸವಕಲ್ಯಾಣ ತಾಲ್ಲುಕು ಬೀದರ ಜಿಲ್ಲೆಯ ಎರಡನೆಯ ದೊಡ್ಡ ತಾಲ್ಲುಕು ಆಗಿದೆ. ಜಿಲ್ಲಾ ಕೇಂದ್ರದಿಂದ 60ಕಿ.ಮಿ. ಅಂತದಲ್ಲಿದೆ. ರಾಜಧಾನಿ ಬೆಂಗಳೂರಿನಿಂದ 710 ಕಿ.ಮಿ. ದೂರದಲ್ಲಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಹೈದ್ರಾಬಾದ ನಿಜಾಮರ ಆಳ್ವಿಕೆಯಲ್ಲಿ ಕಲ್ಯಾಣ್ಕಕೆ ಬಳಷ್ಟು ಪ್ರಾಮುಖ್ಯತೆ ಇತ್ತು. ನಂತರ ಬಸವಕಲ್ಯಾಣ ಹುಮನಾಬಾದ ತಾಲ್ಲೂಕು (ಚಿಟಗುಪ್ಪ ಜಿಲ್ಲೆ) ವ್ಯಾಪ್ತಿಗೆ ಒಳಪಟ್ಟಿತ್ತು ಹೂಲಸೂರಿನಲ್ಲಿ ತಾಲ್ಲುಕು ಅಭಿವೃದ್ದಿ ಮಂಡಳಿ ಕಛೇರಿಗಳಿದ್ದವು. ಇಲ್ಲಿಯ ಪ್ರತಿಯೊಂದು ಹಳ್ಳಿಯ ಮೇಲ್ವಿಚಾರಣೆಗೆ ಪೋಲಿಸಪಾಟೀಲ, ಮಾಲಿ ಪಾಟಿಲ, ಕುಲಕರ್ಣಿ, ದೇಶಪಾಂಡೆ, ದೇಶಮುಖ, ಸುಬೇದಾರರನ್ನು & ಜಾಗೀರದಾರರನ್ನು ನೇಮಿಸಲಾಗಿತ್ತು. ನಂತರ ಮೈಸೂರು ಸಂಸ್ಥಾನದಲ್ಲಿ ಮುಖ್ಯಮಂತ್ರಿ ಗಳಾಗಿದ್ದ ಎಸ್ ನಿಜಲಿಂಗಪ್ಪಾನವರು ಕಲ್ಯಾಣಕ್ಕೆ ತಾಲ್ಲೂಕುವನ್ನಾಗಿ ಮಾಡಿ ಕಲ್ಯಾಣದ ಹೆಸರನ್ನು ಬಸವಕಲ್ಯಾಣ ಎಂದು ಬದಲಿಸಿದರು. ಎಲ್ಲ ಇಲಾಖೆಗಳ ಉಪವಿಭಾಗಿಯ ಕಛೇರಿಗಳು ಇಲ್ಲಿ ಇವೆ. ಈ ಉಪವಿಭಾಗದ ವ್ಯಾಪ್ತಿಗೆ ಹುಮನಾಬಾದ ಮತ್ತು ಭಾಲ್ಕಿ ತಾಲ್ಲೂಕುಗಳು ಬರುತ್ತವೆ. ಒಟ್ಟು 318 ಹಳ್ಳಿಗಳು ಇದರ ವ್ಯಾಪ್ತಿಗೆ ಒಳಪಡುತ್ತವೆ.

ಬಸವಕಲ್ಯಾಣದಲ್ಲಿ ಉಪವಿಭಾಗಾಧಿಕಾರಿಗಳ ಹಾಗೂ ತಹಸೀಲ್ದಾರರ ಕಛೇರಿಗಳು ಇವೆ. ಬಸವ ಕಲ್ಯಾಣ, ಹುಲಸೂರ, ರಾಜೇಶ್ವರ, ಮಂಠಾಳ, ಕೋಹಿನೂರ, ಮತ್ತು ಮುಡಬಿ ಹಿಗೆ ಆರು ಹೋಬಳಿಗಳನ್ನಾಗಿ ತಾಲ್ಲೂಕುವನ್ನು ವಿಂಗಡಿಸಲಾಗಿದೆ. ಈ ಸ್ಥಳಗಳಲ್ಲಿ ಕಂದಾಯ ನಿರೀಕ್ಷಣಾಧಿಕಾರಿಗಳಿದ್ದು,

ಒಟ್ಟು 54 ಗ್ರಾಮ ಲೆಕ್ಕಿಗರಿರುತ್ತಾರೆ. ಈಚೆಗೆ ಪಹಾಣಿ ಪತ್ರಿಕಗಳನ್ನು ಕೊಡಲು ಬಸವಕಲ್ಯಾಣದ ತಹಸೀಲ್ದಾರರ ಕಛೇರಿಯಲ್ಲಿ ಕಂಪ್ಯೂಟರ ವ್ಯವಸ್ಥೆ ಮಾಡಲಾಗಿದೆ.

***ಕಾನೂನು ವ್ಯವಸ್ಥೆ:-***

ಬಸವಕಲ್ಯಾಣಕ್ಕೆ ಜೂನಿಯರ್ ಸಿವಿಲ್ ನ್ಯಾಯಾಲಯ 1972ರಲ್ಲಿ ಪ್ರಾರಂಭವಾಯಿತು. ಸಿನೀಯರ್ ಸಿವಿಲ್ ನ್ಯಾಯಾಲಯ 1992ರಲ್ಲಿ ಈ ನ್ಯಾಯಾಲಯದಲ್ಲಿ ಜಮೀನು ಮನೆಗಳ ವ್ಯವಹಾರ, ಕೊಡು ಕೊಳ್ಳುವಿಕೆಗೆ ಸಂಬಂಧ ಪಟ್ಟಂತಹ ವ್ಯಾಜ್ಯಗಳ ಮೊಕದ್ದಮೆಗಳು ಇಲ್ಲಿ ಬಗೆಹರಿಸಲಾಗುತ್ತದೆ. ಮೊದಲು ಪೊಲೀಸ್ ಠಾಣೆಗಳಲ್ಲಿ ಕೇಸನ್ನು ದಾಖಲಿಸಿ ನಂತರ ಇವು ನ್ಯಾಯಾಲಯಕ್ಕೆ ಬರುತ್ತವೆ. ಈ ನ್ಯಾಯಾಲಯದಲ್ಲಿ 62ಜನ ವಕೀಲರು ಜನತೆಗೆ ನ್ಯಾಯ ದೊರಕಿಸುವಲ್ಲಿ ಪ್ರಯತ್ನಿಸುತ್ತಾರೆ.

***ಸಾರಿಗೆ:-***

ವ್ಯಾಪಾರ ವಹಿವಾಟಿಗೆ ಹಾಗೂ ಸಂಚಾರಕ್ಕೆ ಉತ್ತಮ ರಸ್ತೆಗಳಿರುವುದು ಅವಶ್ಯಕ ಬಸವಕಲ್ಯಾಣ ತಾಲ್ಲೂಕಿನಲ್ಲಿ ಕೂಡ ಒಂದು ರಾಷ್ಟ್ರೀಯ ಹೆದ್ದಾರಿಯನ್ನೊಳಗೊಂಡಂತೆ ರಾಜ್ಯ ಹೆದ್ದಾರಿ ಜಿಲ್ಲಾ ರಸ್ತೆಗಳು ಹಾದು ಹೊಗಿದ್ದು, ಉತ್ತಮ ಸಾರಿಗೆ ಸಂಪರ್ಕ ವ್ಯವಸ್ಥೆ ಇದೆ. ಕೆಲವು ಕಡೆಗಳಲ್ಲಿ ಡಾಂಬರೀಕರಣಗೊಂಡ ರಸ್ತೆಗಳು ಇಲ್ಲವಾದ ಕಾರಣ ಕಚ್ಚಾ ರಸ್ತೆಗಳಲ್ಲಿಯೇ ಸಂಚರಿಸಬೇಕಾಗುತ್ತದೆ. ಬಸವಕಲ್ಯಾಣದಿಂದ 7 ಕಿ.ಮೀ. ದೂರದಲ್ಲಿ ಸಸ್ತಾಪುರ ಬಂಗ್ಲಾ ಮೇಲಿಂದ ಹಾದು ಹೋಗುವ 9ನೇ ರಾಷ್ಟ್ರೀಯ ಹೆದ್ದಾರಿ ತಾಲ್ಲೂಕಿನ ವ್ಯಾಪ್ತಿಯಲ್ಲಿ 43ಕಿ.ಮಿ. ನಷ್ಟು ಉದ್ದ ಹಾದು ಹೋಗುತ್ತದೆ. ತಾಲ್ಲೂಕಿನಲ್ಲಿ 57 ಕಿ.ಮಿ. ರಾಜ್ಯ ಹೆದ್ದಾರಿ ಹಾದು ಹೋಗಿದೆ. ಮುಖ್ಯ ರಸ್ತೆ 105 ಕಿ.ಮೀ. ಇತರ ರಸ್ತೆ 21 ಕಿ.ಮಿ. ಹಳ್ಳಿ ರಸ್ತೆ 170 ಕಿ.ಮೀ. ಮತ್ತು ಟಿ.ಡಿ.ಪಿ. ರಸ್ತೆ 218 ಕಿ.ಮಿ. ರಸ್ತೆ ನಿರ್ಮಾಣ ಕಾರ್ಯ ಪೂರ್ಣಗೊಂಡಿದೆ. ಈಶಾನ್ಯ ವಲಯ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಘಟಕ ಇಲ್ಲಿದ್ದು, ಒಟ್ಟು 425 ಸಿಬ್ಬಂದಿಗಳು ಸೇವೆ ಸಲ್ಲಿಸುತ್ತಿದ್ದಾರೆ. 78 ವಾಹನಗಳು ಘಟಕದಲ್ಲಿವೆ.
ತಾಲ್ಲೂಕಿನಲ್ಲಿರುವ ಮೋಟಾರು ವಾಹನಗಳ ಪಟ್ಟಿ ಈ ಕೆಳಕಂಡಂತಿವೆ.

| | |
|---|---|
| ಮೋಟಾರು ಸೈಕಲಗಳು | 3094 |
| ಕಾರುಗಳು | 55 |
| ಆಟೋ | 108 |
| ಸರಕು ಸಾಗಣಿ ವಾಹನಗಳು | 1059 |
| ಟ್ರಕು | 236 |
| ಟ್ರೈಲರ್ | 240 |
| ಇತರ ವಾಹನಗಳು | 351 |

ಬಸವಕಲ್ಯಾಣದಲ್ಲಿ ಸುಮಾರು 8000ಕ್ಕೂ ಹೆಚ್ಚಿನ ಲಾರಿಗಳಿದ್ದು ಕರ್ನಾಟಕ ರಾಜ್ಯದಲ್ಲಿಯೇ ಅತಿ ಹೆಚ್ಚು ಲಾರಿಗಳನ್ನು ಹೊಂದಿರುವ ತಾಲ್ಲೂಕು ಎಂಬ ಹೆಗ್ಗಳಿಕೆ ಇದರದಾಗಿದೆ.

***ತಾಲ್ಲೂಕು ಕನ್ನಡ ಚಟುವಟಿಕೆ ನಡೆದು ಬಂದ ದಾರಿ:-***

ಬಸವಕಲ್ಯಾಣ ಶರಣರ ನಾಡಾಗಿರುವದಿರಂದ ಮೊದಲಿನಿಂದಲೂ ಇಲ್ಲಿ ಶರಣ ಸಾಹಿತ್ಯ ಸಮ್ಮೇಳನಗಳು ಸಂಗೀತ ಸಮ್ಮೇಳನಗಳು, ವೀರಶೈವ ಮಹಾಧಿವೇಶನಗಳಂಥಹ ಸಮಾರಭಂಗಳು ಆಗಾಗ ಜರುಗುತ್ತಿರುತ್ತವೆ. ಆದರೆ ಕನ್ನಡ ನಾಡು ನುಡಿಗೆ ಸಂಬಂಧಿಸಿದ ಕಾರ್ಯಕ್ರಮಗಳು ಇಲ್ಲಿ ಹೆಚ್ಚಾಗಿ ಜರುಗುತ್ತಿಲ್ಲ. ಈ ಕಾರಣ ವೈಜಿನಾಥಪ್ಪ ದುರ್ಗೆ, ಕಾಶಪ್ಪಾ ಭಾಲ್ಕೆ. ಪ್ರೋ. ರಾಂಪೂರೆ, ಡಾ: ಮಾಣಿಕರಾವ ಧನಾಶ್ರೀ, ಚಂದ್ರಪ್ಪಾ ರಾಗಾ, ಮಲ್ಲಯ್ಯಾ ಗುಂಡುರ ಮಠ, ವೀರಣ್ಣ ಶೀಲವಂಥ ಮುಂತಾದವರು ಕೂಡಿಕೊಡು ನಾಡ ಹಬ್ಬ ಆಚರಿಸುವ ಪದ್ಧತಿಗೆ ಜಾರಿಗೆ ತರುವ ಮೂಲಕ ಕನ್ನಡ ಪರ ಚಟುವಟಿಕೆಗಳಿಗೆ ಚಾಲನೆ ನೀಡಿದ್ದರು.

1989 ಜನವರಿ 28ರಂದು ಡಾ: ಎಸ್ ಬಿ. ಮಹಾಜನರವರ ಗೌರವಾಧ್ಯಕ್ಷತೆಯಲ್ಲಿ ಕನ್ನಡ ಶಕ್ತಿ ಕೇಂದ್ರ ಸ್ಥಾಪನೆಯಾದ ಮೇಲೆ ಕನ್ನಡ ಚಟುವಟಿಕೆಗಳು ತೀವ್ರಗೊಂಡವು. ಡಾ: ಚೀದಾನಂದ ಮೂರ್ತಿ, ಎಸ್ ಎಲ್ ಭೈರಪ್ಪ, ಶಿವಶರಣಪ್ಪ ವಾಲಿ, ಗುರುನಾಥ ಗಡ್ಡೆ ಕೇಂದ್ರ ಬೆಳವಣಿಗೆಗೆ ಸಹಕರಿಸಿದರು.

1989ರ ಒಂದೇ ವರ್ಷದಲ್ಲಿ ಸುಮಾರು 250 ಪರಿಷತ್ತು ಅಜೀವ ಸದಸ್ಯರನ್ನಾಗಿ ಮಾಡಿದ ಮೇಲೆ ತಾಲ್ಲುಕು ಕಸಾಪಕ್ಕೆ ಮರು ಜೀವ ಬಂತ. ಪ್ರೋ: ಧನರಾಜ ಘುಲಾರೆ, ಮಲ್ಲಿಕಾರ್ಜುನ ಕಾಡಾದಿ, ಶಾಮರಾವ ಕುಲಕರ್ಣಿ ಮುಂತಾದವರು ಸದಸ್ಯರ ಸಂಖ್ಯೆ ಹೆಚ್ಚಿಸುವಲ್ಲಿ ಶ್ರಮ ವಹಿಸಿದರು. 12ನೇ ಶತಮಾನದಲ್ಲಿ ಕಲ್ಯಾಣವನ್ನು ಕಾರ್ಯಕ್ಷೇತ್ರವನ್ನಾಗಿಸಿಕೊಂಡು ವಚನಗಳನ್ನು ರಚಿಸುವದರ ಮೂಲಕ ಶರಣರು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಆದರೂ 93ರವರೆಗೆ ಇಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಸಮ್ಮೇಳನಗಳು ನಡೆದಿರಲಿಲ್ಲ. ಇಂತಹ ಸಮ್ಮೇಳನವೊಂದನ್ನು ಸಂಘಟಿಸಿದ ಹೆಗ್ಗಳಿಕೆ ಅಂದಿನ ಕನ್ನಡ ಸಾಹಿತ್ಯ ಪರಿಷತ್ತಿನ ತಾಲ್ಲೂಕು ಅಧ್ಯಕ್ಷರಾಗಿದ್ದ ಗುರುನಾಥ ಗಡ್ಡೆಯವರಿಗೆ ಸಲ್ಲುತ್ತದೆ. ಈ ತಾಲ್ಲುಕು ಮಟ್ಟದ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿ ಒಂದು ಉತ್ತಮ ತಳಹದಿಯನ್ನು ಅವರು ಹಾಕಿಕೊಟ್ಟರು. ಅಂದು ನಡೆದ ತಾಲ್ಲೂಕು ಸಾಹಿತ್ಯ ಸಮ್ಮೇಳನ ಜಿಲ್ಲೆಯಲ್ಲಿಯೇ ಪ್ರಪ್ರಥಮ ತಾಲ್ಲೂಕು ಸಮ್ಮೇಳನವಾಗಿತ್ತು.

1993-97ರಲ್ಲಿ ನಾಗಯ್ಯ ಕೊಳ್ಳುರ ಅವರು ಕಸಾಪ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ನಂತರ ಡಾ: ಎಸ ಬಿ. ಮಹಾಜನ ಅವರು ತಾಲ್ಲುಕು ಕಸಾಪ ಅಧ್ಯಕ್ಷರಾಗಿ ಸಾಹಿತ್ಯ ಜ್ಯೋತಿಯಂತಹ ಕಾರ್ಯಕ್ರಮಗಳನ್ನು ಅಯೋಜಿಸಿ ಕನ್ನಡ ಚಟುವಟಿಕೆಗಳನ್ನು ಮನೆ ಮನೆಗಳಿಗೆ ಕೊಂಡೊಯ್ದರು.

2001-02 ನೇ ಸಾಲಿಗೆ ಬೀದರ ಜಿಲ್ಲೆ ಕನ್ನಡ ಕಸಾಪ ಅಧ್ಯಕ್ಷರಾಗಿ ಸಿದ್ರಾಮಪ್ಪ ಮಾಸಿಮಾಡೆ ಮತ್ತು ಬಸವಕಲ್ಯಾಣ ತಾಲ್ಲೂಕು ಕಸಾಪ ಧನರಾಜ ಘುಲಾರೆ ಅವರು ಅಯ್ಕೆಗೊಂಡು ಶ್ರದ್ದೇಯಿಂದ ಕನ್ನಡ ನಾಡು ನುಡಿ ಬೆಳವಣಿಗೆಗೆ ಯೋಜನಾ ಬದ್ದವಾಗಿ ಕಾರ್ಯಕ್ರಮಗಳನ್ನು ನಡೆಸುತ್ತಿದ್ದಾರೆ.

ಹೆಸರು ಹೆಗ್ಗಳಿಕೆಗಳಿಗಿಂತ ಕನ್ನಡ ಸಾಹಿತ್ಯದ ಬಗ್ಗೆ ಕಲ್ಯಾಣ ನಾಡಿನಲ್ಲಿ ಪ್ರಚಾರವಾಗಬೇಕೆಂಬ ಉದ್ದೇಶದಿಂದ ಅನೇಕ ಕನ್ನಡ ಪರ ಚಟುವಟಿಕೆಗಳನ್ನು ಇಂದಿನ ಕಸಾಪ ಅಧ್ಯಕ್ಷರಾದ ಧನರಾಜ ಘುಲಾರೆಯವರು ಹಾಗೂ ಗಡಿನಾಡು ಪ್ರತಿನಿಧಿ ಗುರುನಾಥ ಗಡ್ಡೆಯವರು ಇತರ ಪಧಾಧಿಕಾರಿಗಳು ಅಯೋಜಿಸುತ್ತಿದ್ದಾರೆ. ಶಾಲೆಗೊಂದು ಕಾರ್ಯಕ್ರಮ, ಊರಿಗೊಂದು, ಕಛೇರಿಗೊಂದು ಹೀಗೆ 75 ಕಾರ್ಯಕ್ರಮಗಳನ್ನು ಒಂದೇ ವರ್ಷದಲ್ಲಿ ನಡೆಸಿ ರಾಜ್ಯದ ತಾಲ್ಲುಕಿನಲ್ಲಿ ಅತಿ ಹೇಚ್ಚು ಕಾರ್ಯಕ್ರಮಗಳು ನಡೆದ ತಾಲ್ಲುಕು ಎಂಬ ಹೆಗ್ಗಳಿಕೆ ತಂದು ಕೊಟ್ಟಿದ್ದಾರೆ. ಶಿವರಾಮ ಕಾರಂತರ ಜನ್ಮ ಶತಾಬ್ದಿ ಅಂಗವಾಗಿ ಅವರ ಬದುಕು ಬರಹ ಕಾರ್ಯಕ್ರಮಗಳನ್ನು ಕೂಡಾ ಕಸಾಪ ವತಿಯಿಂದ ಅಯೋಜಿಸಲಾಗಿತ್ತು. ಹಾರಕೂಡ ಸಮ್ಮೇಳನ ಗ್ರಾಮೀಣ ಭಾಗದಲ್ಲಿ ನಡೆಯುತ್ತಿರುವ ಪ್ರಪ್ರಥಮ ಜಿಲ್ಲಾ ಸಾಹಿತ್ಯ ಸಮ್ಮೇಳನವಾಗಿದೆ. ಹುಲಸೂರ ಹೋಬಳಿ ಘಟಕ ಅಧ್ಯಕ್ಷರಾಗಿ ಶ್ರೀ ಮಲ್ಲಿಕಾರ್ಜುನ ಧಬಾಲೆ ನಾರಾಯಣಪೂರ ವಲಯ ಅಧ್ಯಕ್ಷರಾಗಿ ಶ್ರೀ ಜಗನ್ನಾಥ ಪತಂಗೆ. ಮುಡಬಿ ವಲಯ ಅಧ್ಯಕ್ಷರಾಗಿ ಶ್ರೀ ಮಲ್ಲಿನಾಥ ಹಿರೇಮಠ, ಮಂಠಾಳ ವಲಯ ಅಧ್ಯಕ್ಷರಾಗಿ ಶ್ರೀ ಮಹಾದೇವ ಪಾಟಿಲ, ಕೊಹಿನೂರ ವಲಯ ಅಧ್ಯಕ್ಷರನ್ನಾಗಿ ಶ್ರೀ ವಿಜಯಕುಮಾರ ಖೂಬಾ, ರಾಜೇಶ್ವರ ವಲಯ ಅಧ್ಯಕ್ಷರನ್ನಾಗಿ ಶ್ರೀ ಶೇಷಪ್ಪಾ ಬಿರಾದಾರವರನ್ನು ನೇಮಿಸಲಾಗಿದೆ ಇವರು ತಮ್ಮ ವಲಯದಲ್ಲಿ ಕನ್ನಡಮ್ಮನ ಸೇವೆ ಗೈಯುತ್ತಿದ್ದಾರೆ.

***__ತಾಲ್ಲೂಕಿನ ಪತ್ರಿಕೋದ್ಯಮ:-__***

ತಾಲ್ಲುಕಿನಲ್ಲಿ 1989ರಲ್ಲಿ ಪತ್ರಕರ್ತರ ಸಂಘ ಸ್ಥಾಪನೆಗೊಂಡಿತು ಅಂದಿನಿಂದ ನಿರಂತರವಾಗಿ ಈ ಸಂಘದ ಸದಸ್ಯರು ಪತ್ರಿಕೆಗಳಿಗೆ ವರದಿಗಳನ್ನು ಕಳುಹಿಸುವದರ ಮೂಲಕ ಸಮಾಜ ಸೇವೆಯನ್ನು ಮಾಡುತ್ತಿದ್ದಾರೆ. ಪತ್ರಕರ್ತರ ವರದಿಗಳ ಹಿನ್ನಲೆಯಲ್ಲಿ ಅವಮಾನಗೊಂಡಿದ್ದ ಪಟ್ಟಣದ ಗಾಂಧಿ ಪ್ರತಿಮೆ ಪುನರ ಸ್ಥಾಪನೆಗೊಂಡಿತ್ತು. ನೀಲಾಂಬಿಕೆ ಪರಿಸರದಲ್ಲಿನ ನಿವೇಶನ ಮಾರಾಟ ಮಾಡುವುದುನ್ನು ತಪ್ಪಿಸಿ ಉಳಿಸಿಕೊಳ್ಳಲಾಯಿತು. ಇಂತಹ ಅನೇಕ ಜನಪರ ಕಾರ್ಯಗಳಿಗಾಗಿ ಇಲ್ಲಿಯ ಪತ್ರಕರ್ತರು ಶ್ರಮಿಸುತ್ತಿದ್ದಾರೆ. ಐತಿಹಾಸಿಕ ನಗರ ಬಸವಕಲ್ಯಾಣ ಬಹಿರಂಗ ಸುದ್ದಿ ವಾರಪತ್ರಿಕೆ ಆರಂಭಗೊಂಡು ನಂತರ ದಿನ ಪತ್ರಿಕೆಯಾಗಿ ಪತಿವರ್ತನಗೊಂಡು ಪತ್ರಿಕಾ ರಂಗದಲ್ಲಿ ಗಣನೀಯ ಸೇವೆ ಮಾಡಿದನ್ನು ಇಲ್ಲಿ ಉಲ್ಲೇಖಾರ್ಹ ಅಂಶ. ಈ ಪತ್ರಿಕೆಯ ಸಂಪಾದಕರಾಗಿ ಕೆಲಸ ನಿರ್ವಹಿಸಿದ ಶ್ರೀ ಗುರುನಾಥ ಗಡ್ಡೆ ಅವರು ಪತ್ರಿಕಾ ಧರ್ಮದ ಜೊತೆಗೆ ಕನ್ನಡ ಚಟುವಟಿಕೆಗಳಲ್ಲಿ ಶ್ರದ್ದೆಯಿಂದ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಪತ್ರಕರ್ತರ ಸಂಘದ ಎಲ್ಲ ಸದಸ್ಯರು ಪತ್ರಿಕಾ ಧರ್ಮಕ್ಕೆ ಬದ್ದರಾಗಿ ಸೇವೆ ಸಲ್ಲಿಸಿರುವುದಕ್ಕೆ ಇಲ್ಲಿಯ ಪತ್ರಕರ್ತರ ಸಂಘ ಒಂದು ಉತ್ತಮ ಉದಾಹರಣೆ ಎನ್ನಬಹುದು.

ಪತ್ರಿಕಾ ಸಂಘದ ಸದಸ್ಯರಲ್ಲಿ ಸಂಸ್ಥಾಪಕ ಅಧ್ಯಕ್ಷ ಧನರಾಜ ಘುಲಾರೆ, ಸುರೇಂದ್ರ ಗೀರ ಗೋಸ್ವಾಮಿ, ಜಗದೇವಯ್ಯಾ ಅಂಬಲಿಗೆ, ಲಿಂ.ಸಂಗಶೆಟ್ಟಿಪ್ಪ ಶಿವಣಕರ, ಪ್ರಥ್ವಿರಾಜ ಜಾಧವ, ಶಂಕರ ಪ್ರಸಾದ ಧುಬೆ, ಕಾಶಿನಾಥ ಅಂಬಲಗೆ, ಕಾಳಿದಾಸ ಘಾಳೆ, ಈಶ್ವರ ಹೆಬ್ಬಾಳಕರ, ಗುರುನಾಥ ಗಡ್ಡೆ, ಬಸವರಾಜ ಶಿವಣಕರ, ಶಿವಪುತ್ರ ಕಾಡಾದಿ, ಮಾಣಿಕ ಆರ್ ಭುರೆ, ಮಾರ್ಥಂಡ ಜೋಷಿ, ಶಶಿಕಾಂತ ದುಬೆ, ಖಾಜಾ ಸರತಾಜೊದ್ದಿನ, ನಾಗಪ್ಪಾ ಬಿ. ನಿಣ್ಣೆ, ಡಾ: ಪಿಕ್ರಮಾದ್ದಿನ ಬಾಗ, ಶಿವಕುಮಾರ ಮಠಪತಿ (ಸ್ವಾಮಿ), ಬಂಡೆಪ್ಪ ಮೇತ್ರೆ, ಶಾಂತವೀರ ಸ್ವಾಮಿ ಮುಂತಾದವರು ಪತ್ರಿಕಾ ವರದಿಗಾರರಾಗಿ ಸಮಾಜದ ಆಗು ಹೋಗುಗಳಿಗೆ

ಸ್ಪಂದಿಸುತ್ತಿರುವುದು ಸ್ವಾಗರ್ತಾಹ ಕೆಲಸ. ಶ್ರೀ ಗುಂಡಪ್ಪಾ ಕಾಟೆ, ಧರ್ಮೆಂದ್ರ ಪೂಜಾರಿ, ವೀರಣ್ಣ ಬಿರಾದಾರ ಪತ್ರಿಕೆ ಪ್ರಾರಂಭಿಸಿ ನಂತರ ಕೆಲ ತಿಂಗಳಲ್ಲಿಯೇ ನಿಲ್ಲಿಸಿದ್ದಾರೆ.

ಬಸವ ಭಾನು ಪತ್ರಿಕೆ ಸಂಪಾದಕರಾದ ಸಂಗಮೇಶ ಶರಣರು ಜಿಲ್ಲಾ ಹಾಗೂ ರಾಜ್ಯಮಟ್ಟದ ಬರಹಗಾರರು ದೊಡ್ಡ ವಿದ್ವಾಂಸರಾಗಿದ್ದು, ವಚನ ಸಾಹಿತ್ಯದ ಶ್ರೇಷ್ಠ ಸಂಶೋಧಕರಾಗಿದ್ದಾರೆ. ಶಾಂತಿಕಿರಣ ಪತ್ರಿಕೆಯ ಸಂಪಾದಕರಾಗಿ ಬಸವಲಿಂಗ ಪಟ್ಟದೇವರು ಭಾಲ್ಕಿ ಹಿರೇಮಠದ ಪೀಠಾಧಿಕಾರಿಯಾಗಿ ಬಸವಾದಿ ಶಿವಶರಣರ ತತ್ವ ಪ್ರಸಾರದ ಅಗ್ರ ಸ್ವಾಮಿಗಳಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಇದರಿಂದ ಪ್ರಯತ್ನ ಚುರುಕುಗೊಂಡರೆ, ಬಸವಾದಿ ಶಿವಶರಣರ ತತ್ವ ಪ್ರಸಾರ ಕಾರ್ಯ ಪತ್ರಿಕಾ ಮಾಧ್ಯಮದ ಮೂಲಕ ಮತ್ತೆ ನಡೆಯಲು ಉತ್ತೇಜನ ಸಿಗುತ್ತಿದೆ.

***<u>ತಾಲ್ಲೂಕಿನ ಭವಿಷ್ಯ:-</u>***

ಬಸವಕಲ್ಯಾಣ ತಾಲ್ಲುಕಿನಲ್ಲಿ ಆರ್ಥಿಕ ಪ್ರಗತಿ ಸಾಧಿಸಲು ಮಾಡಬೇಕಾದ ಕೆಲಸ ಬಹಳಷ್ಟಿದೆ. ತಾಲ್ಲುಕಿನಲ್ಲಿ ಒಟ್ಟು ಜನಸಂಖ್ಯೆಯಲ್ಲಿ 140398 ಜನರು ಕೆಲಸವಿಲ್ಲದೆ ನಿರುದ್ಯೋಗಿಗಳಾಗಿದ್ದಾರೆ.

ಬಸವಕಲ್ಯಾಣ ಕರ್ನಾಟಕದಲ್ಲಿಯೇ ಬಹುಸಂಖ್ಯೆ ಲಾರಿಗಳನ್ನು ಹೊಂದಿದ ತಾಲ್ಲುಕು ಆಗಿದ್ದರೂ ಇಲ್ಲಿ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಿರುವುದೇಕೆ? ಎಂಬುದರ ಬಗ್ಗೆ ಚಿಂತಿಸಬೇಕಿದೆ. ಕೆಂಪು, ಕಪ್ಪು ಭೂಮಿಯಲ್ಲಿ ಬೆಳೆಯುವ ಬೆಳೆಗಳ ಬಗ್ಗೆ ಮಾಹಿತಿ ಪಡೆಯಬೇಕಾದರೆ ರಸ್ತೆ ಸಂಪರ್ಕ ಸರಿ ಇಲ್ಲ. ಕಳಪೆ ಮಟ್ಟದಲ್ಲಿರುವ ರಸ್ತೆಗಳ ಸುಧಾರಣೆಯಾಗಬೇಕಾಗಿದೆ. ಚಿಕ್ಕ ಮತ್ತು ದೊಡ್ಡ ದೊಡ್ಡ ಕೈಗಾರಿಕೆಗಳು ಇಲ್ಲಿ ಸ್ಥಾಪನೆಯಾಗಬೇಕು.

***<u>ಬಸವಕಲ್ಯಾಣದ ಆಶ್ರಯ - ಭವಿಷ್ಯ:-</u>***

ಐತಿಹಾಸಿಕ ಪಟ್ಟಣ ಬಸವಕಲ್ಯಾಣ ಒಂದು ಕಾಲದಲ್ಲಿ ಶರಣರ ಕ್ರಾಂತಿ ಭೂಮಿಯಾಗಿ ಕಲೆ ಸಾಹಿತ್ಯ, ಸಂಗೀತ, ಜಾನಪದಕ್ಕೆ ಹೆಸರುವಾಸಿಯಾಗಿತ್ತು, ಇಲ್ಲಿ ಶರಣರ ಪರಂಪರೆಯ ಕಾರ್ಯ ಚಟುವಟಿಕೆಗಳು ನಿರಂತರವಾಗಿ ನಡೆದುಕೊಂಡು ಬಂದಿವೆ. ಇಂಥ ಬಸವಕಲ್ಯಾಣದಲ್ಲಿ 12ನೇ ಶತಮಾನದ ಗತವೈಭವ ಮತ್ತೆ ಮರಳಿ ಬರಬೇಕೆಂಬ ಆಶಯ ಎಲ್ಲರದಾಗಿದೆ. ಈ ನಿಟ್ಟಿನಲ್ಲಿ ಪ್ರಯತ್ನಗಳು ಕೂಡ ನಡೆದಿವೆ. ಇಲ್ಲಿಯ ಶಿವಶರಣರ ಸ್ಮಾರಕಗಳು, ಗವಿಗಳು, ಜೀರ್ಣೋದ್ಧಾರವಾಗಬೇಕು. ಇದು ಅಂತರಾಷ್ಟ್ರೀಯ ಕೇಂದ್ರವಾಗಬೇಕು. ಎಂದು ಎಲ್ಲರೂ ಬಯಸುತ್ತಾರೆ. ಈ ನಿಟ್ಟಿನಲ್ಲಿ ಶರಣ ಸಾಹಿತ್ಯ ಸಂಶೋಧನೆ ಕೇಂದ್ರ ಇಲ್ಲಿ ಸ್ಥಾಪನೆಯಾಗಬೇಕು. ಬಸವೇಶ್ವರ ವಿಶ್ವವಿದ್ಯಾಲಯ ಸ್ಥಾಪನೆಯಾಗಬೇಕು. ಪ್ರತಿ ವರ್ಷ ಬಸವೇಶ್ವರ ಜಯಂತಿಯಂದು ವಚನ ಸಂಗೀತೋತ್ಸವ ನಡೆಯಬೇಕು ಎಂದು ಇಲ್ಲಿಯ ಸಂಘ ಸಂಸ್ಥೆಗಳ ವತಿಯಿಂದ ಹಲವಾರು ಬಾರಿ ಸರ್ಕಾರಕ್ಕೆ ಒತ್ತಾಯಿಸಿದ್ದಾರೆ. ಮುಂಬರುವ 2005 ರಿಂದ ರಾಷ್ಟ್ರಮಟ್ಟದಲ್ಲಿ ಬಸವೇಶ್ವರ 9ನೇ ಜನ್ಮಶತಾಬ್ದಿ ಆಚರಿಸಲು ಪ್ರಯತ್ನಗಳು ಉನ್ನತ ಮಟ್ಟದಲ್ಲಿ ನಡೆದಿರುವುದು ಉತ್ತಮ ಬೆಳವಣಿಗೆ ಎನ್ನಬಹುದು.

*ಕವಿಗಳ ಬಳಗ:-*

ಪ್ರಭುಲೀಲಾ ಸ್ವಾಮಿ, ವಿಶ್ವನಾಥ ಬಿರಾದಾರ, ಲಕ್ಷ್ಮಿಬಾಯಿ ಪಾಟೀಲ, ಡಾ: ಬಂಡೆಪ್ಪಾ ಕಾಳಗೆ, ಪಂಚಾಕ್ಷರಿ ಹಿರೇಮಠ, ಕಲ್ಪನಾ ಶೀಲವಂತ, ಮಚೆಂದ್ರ ಪಿ ಅಣಕಲ್, ಬಕ್ಕಯ್ಯಾ ಸ್ವಾಮಿ, ಗುರುನಾಥ ಅಕ್ಕಣ್ಣ, ಚಿತ್ಕಲಾ ಮಠಪತಿ, ಲೀಲಾವತಿ ಅಂಬಲಗೆ, ಕವಿರಾಜ ಕಿಣಗಿ, ಚಂದ್ರಕಾಂತ ಬೆಳಮಗಿ, ಪ್ರೋ: ಧನರಾಜ ಘುಲಾರೆ, ಬಸವರಾಜ ಬಿ ಬಿರಾದಾರ, ವಿಶ್ವನಾಥ ಮುಕ್ತಾ, ರುದ್ರಮುನಿ ವಿ ಮಠಪತಿ, ದೇವೆಂದ್ರ ಬರಗಾಲೆ, ಧರ್ಮೆಂಧ್ರ ಪೂಜಾರಿ, ನಾರಾಯಣ ರಾಂಪೂರೆ, ವಿ.ಎಚ್.ವೀರಣ್ಣ, ಧನರಾಜ ಮುಕ್ತಾ, ವೀರಶೆಟ್ಟಿ ಪಾಟೀಲ, ನರಸಿಂಗ ರೆಡ್ಡಿ ಗದಲೇಗಾಂವ, ಸುನಿತಾ ಅಂಬಲಗೆ ತಾಜೋದ್ದಿನ ಅತ್ತಾರ ಮುಂತಾದವುರು ಇಲ್ಲಿಯ ಕವಿಗಳಾಗಿದ್ದಾರ.

*ಸಂಗೀತಕಾರರ ಬಳಗ:-*

ಕಾಶೆಪ್ಪಾ ಗವಾಯಿ, ಶಿವಲಿಂಗಯ್ಯಾ ಸ್ವಾಮಿ, ನಾಗಣ್ಣಾ, ದತ್ತು ಮಾಸ್ತರ, ಶಿವರಾಜ, ಧೂಳಪ್ಪ ಮಾದಪ್ಪ, ರಾಜಕುಮಾರ ಮುಡಬೆ, ರಾಜಕುಮಾರ ಮದಕಟ್ಟಿ, ಭದ್ರಪ್ಪಾ ಪಾಟೀಲ, ರೇವಣಸಿದ್ದಯ್ಯಾ ಸ್ವಾಮಿ, ವಿರುಪಾಕ್ಷಯ ಗೋರಟಾ, ಶರಣ ವಿ. ಸಿದ್ರಾಮಣ್ಣ, ಬಸವಣಪ್ಪ, ಪರ್ತಾಪೂರೆ, ಮಾಣಿಕರಾವ ಘೊರಮುಡೆ, ಶಿವರಾಜ ಖೆಲೆ, ಬಸವರಾಜ ಗೋಬ್ರೆ, ಪ್ರಫುಲಕುಮಾರ ಗಾಯಕವಾಡ, ಪುತಳಾಬಾಯಿ, ಚೌಕಿಮಠ, ಅನಂತ ಬಂಡಿ, ದೀಲಿಪ ಕುಲಕರ್ಣಿ ಮುಂತಾದವರು ಸಂಗೀತ ಕ್ಷೇತ್ರದಲ್ಲಿ ಪಳಗಿದವರಾಗಿದ್ದಾರೆ.

*ಸಾಹಿತಿಗಳ ಬಳಗ:-*

ಗುರುನಾಥ ಅಕ್ಕಣ್ಣಾ, ಶ್ರೀಕಾಂತ ಪಾಟೀಲ, ಚಿತ್ಕಳಾ ಮಠಪತಿ, ಬಸವರಾಜ ಬಿ ಬಿರಾದಾರ, ಡಾ: ಕಾಶಿನಾಥ ಅಂಬಲಗೆ, ಡಾ: ಜಿ.ಬಿ. ವಿಸಾಜಿ, ಭಾಲಚಂದ್ರ ಜೈಶೆಟ್ಟಿ ಪಂಡಿತ, ಬಸವರಾಜ, ಗುರುಲಿಂಗಪ್ಪಾ ಧಬಾಲೆ, ಶರಣ ವಿ. ಸಿದ್ದರಾಮಣ್ಣ, ಪ್ರೋ: ಧನರಾಜ ಘುಲಾರೆ, ಗುರುನಾಥ ಗಡ್ಡೆ, ಪಂಚಾಕ್ಷರಿ ಹಿರೇಮಠ, ಸೂರ್ಯಕಾಂತ ತಳಭೋಗೆ ಮುಂತಾದವರು.

*ಬಸವಕಲ್ಯಾಣದ ಪ್ರಮುಖ ಪ್ರೇಕ್ಷಣೆಯ ಸ್ಥಳಗಳು;-*

| | |
|---|---|
| ಹರಳಯ್ಯಾ ಗವಿ | |
| ಮುಗ್ದ ಸಂಗಯ್ಯನ ಗವಿ ಶಿವಪೂರ | 2.00 ಕಿ.ಮೀ |
| ಸಿದ್ರಾಮೇಶ್ವರ ಗವಿ | |
| ಘನಲಿಂಘ ರುದ್ರಮುನಿ ಗವಿ | |
| ಭಕ್ತಿ ಭವನ (ಡಾ: ಜಯದೇವಿ ತಾಯಿ ಲಿಗಾಡೆ ಸಮಾಧಿ ಸ್ಥಳ ಸಿದ್ದಶೈಲ) | |
| ಹರಳಯ್ಯ ದಿಬ್ಬ. | |
| ಅಂಬಿಗರ ಚೌಡಯ್ಯ ಗವಿ | 1.5 ಕಿ.ಮೀ |

| | |
|---|---|
| ನೂಲಿ ಚಂದಯ್ಯಾ ಗವಿ | 1.5 ಕಿ.ಮೀ |
| ಮಡಿವಾಳ ಮಾಚಯ್ಯ ವೃತ | 2.00 ಕಿ.ಮೀ |
| ನಿಲಾಂಬಿಕೆ/ಗಂಗಾಬಿಕೆ ಗವಿ | 2.5 ಕಿ.ಮೀ |
| ಅರಿವಿನ ಮನೆ | 2.5 ಕಿ.ಮೀ |
| ಹಡಪದ ಅಪ್ಪಣದ ಗವಿ | 2.5 ಕಿ.ಮೀ |
| ಪ್ರಭು ದೇವರ ಗದ್ದುಗೆ ಮಠ | 3.00 ಕಿ.ಮೀ |
| ಮಡಿವಾಳ ಮಾಚಯ್ಯನ ಹೊಂಡ | 3.5 ಕಿ.ಮೀ |
| ಕಂಬಳಿ ನಾಗಿದೇವರ ಮಠ | 4.00 ಕಿ.ಮೀ |
| ಬಸವೇಶ್ವರ ಚೌಕ | 4.00 ಕಿ.ಮೀ |
| ಮಹಾತ್ಮಾಗಾಂಧಿ ಚೌಕ | 4.5 ಕಿ.ಮೀ |
| ಜೇಡರ ದಾಸಿಮಯ್ಯಾನ ಮಠ | 4.00 ಕಿ.ಮೀ |
| ಬಸವೇಶ್ವರ ದೇವಸ್ಥಾನ | 5.00 ಕಿ.ಮೀ |
| ಅಂಬಿಗರ ಚೌಡಯ್ಯನ ಮಠ | 5.00 ಕಿ.ಮೀ |
| ಚನ್ನಬಸವಣ್ಣನವರ ಗವಿ ದೇವರ ಹಾಲಳ್ಳಿ(ನಿಲಂಗಾ) | 18.00 ಕಿ.ಮೀ |
| ಊರಿಲಿಂಗ ಪೆದ್ದಣ್ಣ ಗವಿ | 4.5 ಕಿ.ಮೀ |
| ಪರುಷ ಕಟ್ಟಿ | 5.00 ಕಿ.ಮೀ |
| ಬಸವಕಲ್ಯಾಣ ಕೊಟೆ | 5.00 ಕಿ.ಮೀ |
| ಬಂದವರ ಓಣಿ ಅಕ್ಕಮಹಾದೇವಿ (ಪರುವಿಕ್ಷಣ) | 3.00 ಕಿ.ಮೀ |
| ಮೋಳಿಗೆ ಮಾರಯ್ಯನ ಗವಿ ಮೋಳಕೆರಾ | 2.00 ಕಿ.ಮೀ |
| ಕಿನ್ನರಿ ಬ್ರಹ್ಮಯ್ಯನ ಮಠ(ಹಳ್ಳಿಖೇಡ) | 35.00 ಕಿ.ಮೀ |
| ಶಂಕರ ದಾಸಿಮಯ್ಯಗಳ ಗವಿ ಮೊರಂಬಿ | 20.00 ಕಿ.ಮೀ |

<u>ಗ್ರಾಮ ಪಂಚಾಯತಿ ಹಾಗೂ ಅದರ ಅಧೀನ ಗ್ರಾಮಗಳು</u>

| ಕ್ರ.ಸಂ. | ಪಂಚಾಯತ ಹೆಸರು | ಗ್ರಾಮಗಳ ಹೆಸರು |
|---|---|---|
| 1 | ಹುಲಸೂರ | ಹುಲಸೂರ, ಸೋಲದಾಭಕಾ, ಕಾದ್ರಾಬಾದ, ಹಾಳಹಳ್ಳಿ |
| 2 | ಗಡಿಗೌಡಗಾಂವ | ಗಡಿಗೌಡಗಾಂವ, ದೇವನಾಳ, ಮಾಚನಾಳ |
| 3 | ಮಿರಖಲ್ | ಮಿರಖಲ್, ಅಂಬೆವಾಡಿ, ಆನಂದವಾಡಿ, ಕೊಟಮಾಳ |
| 4 | ಬೆಲೂರ | ಬೆಲೂರ, ಗುತ್ತಿ |
| 5 | ಬೆಟ್ಟಬಾಲಕೂಂದಾ | ಬೆಟ್ಟಬಾಲಕೂಂದಾ, ಜಾನಾಪೂರ, ಖಂಡಾಳ, ಗೌರ, ಗೌರ ಥಾಂಡಾ |
| 6 | ನಾರಾಯಣಪೂರ | ನಾರಾಯಣಪೂರ, ಶಿವಪೂರ, ಹುಲಗುತ್ತಿ ವಾಡಿ, ಗುಣತುರವಾಡಿ |
| 7 | ಧನ್ನೂರಾ (ಕೆ) | ಧನ್ನೂರಾ (ಕೆ), ಲಿಂಬಾಪೂರ, ಖಾದೇಪೂರ, ಗಡಿರಾಯಪಳ್ಳಿ |
| 8 | ಮುಚಳಂಬ | ಮುಚಳಂಬ, ಮುಸ್ತಾಪೂರ |
| 9 | ತಡೋಳಾ | ತಡೋಳಾ, ಹಂದ್ರಾಳ, ಕೌಡಿಯಾಳ |
| 10 | ಕಿಟ್ಟಾ | ಕಿಟ್ಟಾ, ಗೋಕುಳ, ಯದ್ಲಾಪೂರ |
| 11 | ಗೋರ್ಟಾ | ಗೋರ್ಟಾ |
| 12 | ರಾಜೋಳಾ | ರಾಜೋಳಾ, ಗೂಗ್ಲಾ |
| 13 | ರಾಜೇಶ್ವರ | ರಾಜೇಶ್ವರ, ಮಲ್ಲಕಾರ್ಜುನವಾಡಿ, ಹನುಮಂತವಾಡಿ, ರಾಂಪೂರ |
| 14 | ಸಸ್ತಾಪೂರ | ಸಸ್ತಾಪೂರ, ಮಿರ್ಜಾಪೂರ, ಆತ್ಲಾಪೂರ |
| 15 | ಯರಭಾಗ | ಯರಭಾಗ, ಸದ್ಲಾಪೂರ, ಪಂಡರಗೇರಾ |
| 16 | ಯರಂಡಿ | ಯರಂಡಿ, ಖಾನಾಪೂರ, ಹಿಪ್ಪರಗಾ ಘಾಟ, ಬಂದೆನವಾಜ ವಾಡಿ, ಹನುಮಂತವಾಡಿ |
| 17 | ನಿರಗುಡಿ | ನಿರಗುಡಿ, ರೋಳಾ, ಕೌಡಿಯಾಳ, ದಾಸರವಾಡಿ |
| 18 | ಇಸ್ಲಾಂಪುರ | ಇಸ್ಲಾಂಪುರ, ಮಂಗಳೂರು, ಲಿಂಗದಳ್ಳಿ, ಸುಂಗದಾಣ |
| 19 | ಮುಡಬಿ | ಮುಡಬಿ, ಬಗದುರಿ, ಮುಡಬಿ ವಾಡಿ, ಶರಣನಗರ |

| | | |
|---|---|---|
| 20 | ಹಾರಕೂಡ | ಹಾರಕೂಡ, ಸೈದಾಪೂರ, ಸಿರಗಾಪುರ, ಗಡ್ಲೆಗಾಂವ, ಖೇರ್ಡಾ(ಕೆ), ಹತ್ಯಾಳ |
| 21 | ಯಕಲೂರ | ಯಕಲೂರ, ಯಕಲೂರ ತಾಂಡಾ |
| 22 | ಖೇರ್ಡಾ(ಬಿ) | ಖೇರ್ಡಾ(ಬಿ), ಧನ್ನೂರಾ(ಆರ್) ಹಿರೇನಾಗಾಂವ |
| 23 | ಕಲ್ಲಖೋರಾ | ಕಲ್ಲಖೋರಾ, ಚಿಕ್ಕನಾಗಾಂವ, ಹಿಪ್ಪರಗಾ ಬಾಗ, ಜನವಾಡಾ |
| 24 | ಮಂಠಾಳ | ಮಂಠಾಳ, ಕಾಂಬಳೆ ವಾಡಿ |
| 25 | ಚಂಡಿಪೂರ | ಚಂಡಿಪೂರ, ರಾಮತೀರ್ಥ, ಉಮಾಪೂರ, ಲಾಹೇಶ್ವರ, ಹಳ್ಳಿ |
| 26 | ಪ್ರತಾಪೂರ | ಪ್ರತಾಪೂರ, ಖಾನಾಪೂರ (ಕೆ), ನೀಲಕಂಠ |
| 27 | ಗುಂಡೂರ | ಗುಂಡೂರ, ಜಾಫರ ವಾಡಿ, ಉರ್ಕಿ, ಇಲ್ಲಹಾಳ |
| 28 | ಘೋಟಾಳ | ಘೋಟಾಳ, ಜಾಜನ ಮೂಗಳಿ, ಮನ್ನಳ್ಳಿ |
| 29 | ಮೋರಖಂಡಿ | ಮೋರಖಂಡಿ, ತಳಭೋಗ, ಹಣಮಂತವಾಡಿ, ಚೌಕಿವಾಡಿ |
| 30 | ಕೋಹಿನೂರ | ಕೋಹಿನೂರ, ಅಟ್ಟೂರ, ಸರಜವಳಗಾ, ಕೋಹಿನೂರ |
| 31 | ಲಾಡವಂತಿ | ಲಾಡವಂತಿ, ಭಕನಾಳ, ಚಿತಕೋಟಾ, ಗಡ್ಲೆಗಾಂವ (ಕೆ) |
| 32 | ಬಟಗೇರಾ | ಬಟಗೇರಾ, ಬಟಗೇರಾ ವಾಡಿ, ಗಿಲಗಿಲಿ, ಚೀತಕೋಟಾ |
| 33 | ಉಜಳಂಬ | ಉಜಳಂಬ, ಧಮ್ಮೂರಿ, ಹೊನ್ನಳಿ, ಏಕಂಬಾ, ಜೋಗೆವಾಡಿ, ಬಂಡಗರ ವಾಡಿ, ನಾಧರವಾಡಿ, ನವಚಂದ ವಾಡಿ |
| 34 | ಭೋಸಗಾ | ಭೋಸಗಾ, ಸೀರೂರಿ, ಸಿರುರಿವಾಡಿ, ವಡ್ಡರಗಾವ |
| 35 | ಆಲಗೂಡ | ಆಲಗೂಡ, ಚಿಟ್ಟಾ (ಕೆ), ಚಿಟ್ಟಾ(ಕೆ) ತಾಂಡಾ, ಹಂದ್ರಾಳ |
| 36 | ತೊಗಲೂರ | ತೊಗಲೂರ, ಹಾಲಹಳ್ಳಿ, ಕ.ವಾಡಿ |

## ವಚನ ದರ್ಶನ:-

* ವೇದಕ್ಕೆ ಒರೆಯ ಕಟ್ಟುವೆ
ಶಾಸ್ತ್ರಕ್ಕೆ ನಿಗಳನಿಕ್ಕುವೆ
ತರ್ಕದ ಬೆನ್ನ ಬಾರಸಿತ್ತುವೆ
ಆಗಮದ ಮೂಗ ಕೊಯಿವೆ ನೋಡಯ್ಯಾ
ಮಹಾದಾನಿ ಕೂಡಲಸಂಗಮದೇವಾ
ಮೂದಾರ ಚೆನ್ನಯ್ಯಾ ಮನೆಯ
ಮಗ ನಾನಯ್ಯಾ

* ವೇದ ಭೇದಿಸಲರಿಯದೇ ಕೆಟ್ಟವು
ಶಾಸ್ತ್ರ ಸಾಧಿಸಲರಿಯದೇ ಕೆಟ್ಟವು
ಪುರಾಣ ಪೊರೈಸಲರಿಯದ ಕೆಟ್ಟವು
ಹಿರಿಯರು ತಮ್ಮ ತಾವು ಅರಿಯದೆ ಕೆಟ್ಟವು
ತಮ್ಮ ಬುದ್ದಿ ತಮ್ಮನ್ನೇ ತಿಂದಿತ್ತು
ನಿಮ್ಮ ನೆತ್ತ ಬಲ್ಲರೋ ಗುಹೇಶ್ವರಾ

-ಅಲ್ಲಮ ಪ್ರಭುದೇವರು-

* ವೇದ ಘನವೆಂಬೆನೇ? ಪ್ರಾಣಿವಧೆಯ ಹೇಳುತ್ತಿದೆ
ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸಿ ಹೇಳುತ್ತದೆ
ಆಗಮ ಘನವೆಂಬೆನೆ?
ಮುಟಿದ್ದು ಅರಸಿ ಕಾಣೆನ್ನೆನ್ನುತ್ತದೆ
ಅಲ್ಲೆಲ್ಲಿಯೊ ನೀನಲ್ಲದ ಕಾರಣ
ತ್ರಿವಿಧ ದಾಸೋಹದಿಂದಲರಿದು
ಕಂಡನೆ ಕಾಣಾ ಕೂಡಲ ಚೆನ್ನಬಸವದೇವ

– ಚೆನ್ನಬಸವಣ್ಣ-

* ವೇದ ಶಸ್ತ್ರಾಗಮ ಪುರಾಣಂಗಳೆಲ್ಲವು

ಕೊಟ್ಟಣವ ಕುಟ್ಟಿದ ನುಚ್ಚು ತೌಡು

ಕಾಣಭೋ ಅವನು ಕುಟ್ಟಲೇಕೆ (ಕುಡುಕಲೇಕೆ)

ಅತ್ತಿತ್ತ ಹರಿವ ಮನದ

ಶಿನರಿದೆಡೆ

ಬಟ್ಟ ಬಯಲು ಚೆನ್ನಮಲ್ಲಿಕಾರ್ಜುನಾ

–ಅಕ್ಕಮಹಾದೇವಿ–

* ವೇದ ವಿಪುರ ಭೊದೆ

ಶಾಸ್ತ್ರ ಸಂತೆಯ ಮಾತು

ಪುರಾಣ ಪುಂಡರ ಗೋಷ್ಠಿ

ಆಗಮ ಅನೃತರ ನುಡಿ

ತರ್ಕ ವ್ಯಾಕರಣ ಕನಿಷ್ಟವಾದ

ಇಂತವರ ಅಂಗದ ಮೇಲೆ

ಲಿಂಗವಿಲ್ಲದ ಭಾಷೆ

ಇದು ಕಾರಣ ತನ್ನೊಳಗನರಿದ

ಅನುಭವದಿಂದ ಘನವಿಲ್ಲೆಂದ

ನಮ್ಮ ಕಲಿದೇವರ ದೇವ

–ಮಡಿವಾಳ ಮಾಚಿದೇವರು–

* ಅನಂತ ವೇದ ಶಾಸ್ತ್ರ ಆಗಮ
ಪುರಾಣ ತರ್ಕ ತಂತ್ರಗಳನ್ನು ಆತ್ಮ ಮಾಡಿದನಲ್ಲದೆ

ಆತ್ಮ ಮಾಡಿದನಲ್ಲಿದೆ

ಆತ್ಮನ (ಗವು) ಮಾಡಿದುದಿಲ್ಲ

ಎನ್ನ ಅಂತರಂಗದ

ಅರಿವಿನ ಮೂರ್ತಿಯಾಗಿ

ಎನ್ನ ಉರಿಲಿಂಗದೇವರ

ಸಂಕಲ್ಪಿಸಿ ಆಗೆಂದರಾದವ

–ಉರಿಲಿಂಗಪೆದ್ದಿ ತಂದೆ–

*	ಪ್ರತಿಯಾಜ್ಞೆಯಲ್ಲಿ ಚರಿಪ ಪತಿಗ್ಯಾಕೆ–ಪ್ರತಿಜ್ಞೆಯು
ಪ್ರತಿಜ್ಞೆಯ ಪತಿಕರದಲ್ಲಿ ಪೋಪದಿರೆ ಯಾತನೆಯಲ್ಲಿವೆ?
ಇವಳ ಲಿಂಗನಿಷ್ಠೆ ಇವಳಿಗೆ ನಮ್ಮ ನಿಷ್ಠೆ ಪತಿಯಾಜ್ಞೆಯಲ್ಲಿ ಕಾಣಾ
ಗಂಗಾಪ್ರಿಯ ಕೂಡಲ ಸಂಗಮದೇವಾ

ಶಿವಶರಣಿ ಗಂಗಾಬಿಕೆ–

## *ಬಸವಕಲ್ಯಾಣ ತಾಲ್ಲೂಕಿನ ಸ್ಥೂಲ ನೋಟ:-*

| | |
|---|---|
| ವಿಸ್ತೀರ್ಣ | 119438 ಚ.ಕಿ. |
| ಜನಸಂಖ್ಯೆ (1991ರ ಜನಗತಿಯಂತೆ) | 246340 |
| ಗಂಡಸರು | 124969 |
| ಹೆಂಗಸರು | 121371 |
| ಹರಿಜನರು | 52076 |
| ಗಿರಿಜನರು | 25852 |
| ಗ್ರಾಮ ಪಂಚಾಯತಿಗಳು | 36 |
| ಹೋಬಳಿಗಳು | 06 |
| ಜನವಸತಿ ಗ್ರಾಮಗಳು | 114 |
| ಜನವಸತಿ ಇಲ್ಲದ ಗ್ರಾಮಗಳು | 01 |
| ವಾರ್ಷಿಕ ಸರಾಸರಿ ಮಳೆ | 674 ಮಿ.ಮೀ |
| ಅರಣ್ಯ ಪ್ರದೇಶ | 7143 ಚ.ಕಿ; |
| ಶಿಶು ವಿಹಾರಗಳು | 08 |
| ಅಂಗನವಾಡಿಗಳು | 240 |
| ಕಿರಿಯ ಪ್ರಾಥಮಿಕ ಶಾಲೆಗಳು | 184 |
| ವಸತಿ ಶಾಲೆಗಳು | 02 |
| ಪ್ರೌಢ ಶಾಲೆಗಳು | 17 |
| ಪದವಿ ಪೂರ್ವ ಕಾಲೇಜು | 13 |
| ತಾಂತ್ರಿಕ ಶಿಕ್ಷಣ ಕಾಲೇಜು | 01 |
| ಇಂಜಿನಿಯರಿಂಗ ಕಾಲೇಜು | 01 |
| ವೃತ್ತಿ ಶಿಕ್ಷಣ ಕಾಲೇಜು | 03 |
| ಫಾರ್ಮಸಿ ಕಾಲೇಜು | 01 |
| ಅಂಚೆ ಕಛೇರಿಗಳು | 28 |
| ಸಹಕಾರ ಸಂಘಗಳು (ವಿವಿಧ) | 106 |
| ತಂತಿ ಕಛೇರಿಗಳು | 06 |

| | |
|---|---|
| ಚಲನ ಚಿತ್ರ ಮಂದಿರಗಳು | 04 |
| ಪೋಲಿಸ ಠಾಣೆಗಳು | 07 |
| ಸಹಕಾರಿ ಬ್ಯಾಂಕುಗಳು | 08 |
| ವಾಣ್ಯಜ್ಯ ಬ್ಯಾಂಕುಗಳು | 45 |
| ಪ್ರಾಥಮಿ ಭೂ ಅಭಿವೃದ್ಧಿ ಬ್ಯಾಂಕ | 01 |
| ಗ್ರಂಥಾಲುಯಗಳು | 16 |
| ಪುರಸಭೆ | 1 |
| ನೊಂದಣಿಯಾದ ಎಸ್.ಟಿ.ಡಿ ಕೇಂದ್ರಗಳು | 28 |
| ಪಟ್ಟಣ ಸಹಕಾರಿ ಬ್ಯಾಂಕ | 02 |
| ನ್ಯಾಯಾಲಯಗಳೂ | 02 |
| ಸಹಾಯಕ ಆಯುಕ್ತರ ಕಾರ್ಯಲಯ | 01 |
| ಪ್ರವಾಸಿ ಮಂದಿರಗಳು | 03 |
| ಬಸ್ ನಿಲ್ದಾಣ ಡೀಪೋ | 01 |
| ಆಸ್ಪತ್ರೆಗಳು | 01 |
| ಪಶು ಚಿಕಿತ್ಸಾಲಯ | 01 |

*ಬಸವಕಲ್ಯಾಣ ತಾಲ್ಲೂಕು ಕಲಾವಿದರು:-*

ಶ್ರೀ ಪಂಚಾಕ್ಷರಿ ಹಿರೆಮಠ ಅವರಿಗೆ ರಾಷ್ಟ್ರೀಯ ಉತ್ತಮ ಶಿಕ್ಷಕ ಪ್ರಶಸ್ತಿ ದೊರೆತಿದೆ, ಈರಣ್ಣಾ ರಾಜೋಳೆ, ಧೂಳಪ್ಪಾ ಹಡಪದ, ಭದ್ರಿನಾಥ ಹಡಪದ, ಬಸವರಾಜ ಗಟ್ಟೂರ, ರಾಜಕುಮಾರ ಹೂಗಾರ, ವಿರುಪಾಕ್ಷಯ್ಯಾ ಸ್ವಾಮಿ, ಶೇಷಪ್ಪಾ ಗಬ್ಬೂರ, ಸಿದ್ರಾಮಯ್ಯಾ ಮಠಪತಿ (ಪ್ರೋ), ಸುಭಾಷ ಬಿರಾದಾರ, ಸೂರ್ಯಕಾಂತ ಬಿರಾದಾರ, ಮಲ್ಲಿಕಾರ್ಜುನ ಬಿರಾದಾರ, ಮಾಣಿಕ ಧುಂಪಾಲೆ, ರಾಜಕುಮಾರ ಹಡಪದ, ಇಸ್ಮಾಯಿಲ್ ಸಾಬ್, ಚಂದ್ರಪ್ಪಾ ಸೀತಾಳಗೇರಿ, ವಿಶ್ವನಾಥ ಭುಸಾರೆ, ತೇಜಮ್ಮಾ ಪೋಸ್ತಾರ, ಮಡಿವಾಳಪ್ಪಾ ಬಡದಾಳ, ರಾಚಯ್ಯಾ ಸ್ವಾಮಿ, ರೇಣುಕಾ ಏಕ್ಕಳ್ಳಿ, ಶರಣಪ್ಪಾ ಕುನಾಳೆ, ಶಾಂತಮ್ಮ, ಸರಸ್ವತಿ, ಪ್ರಭುಲಿಂಗಯ್ಯಾ ಟಂಕಸಾಲಿಮಠ, ಪ್ರಭುರಾವ ರಾಠೋಡ, ರಾಜಕುಮಾರ ಭಾರಸಿಂಗಿ, ರುಕ್ಮೇಶ ಪೂಜಾರಿ, ರೇವಣಸಿದ್ದಪ್ಪಾ ಡೊಂಗರೆ, ವಿಜಯಕುಮಾರ ಬಿರಾದಾರ, ವಿಜಯಲಕ್ಷ್ಮಿ ಹುಮನಾಬಾದಕರ್ ವಿಠಲರಾವ ಜಾಧವ, ಹೀಗೆ ಅನೇಕರ ಲೇಖಕರು, ಸಾಹಿತಿಗಳು, ಕವಿಗಳು ಕಲಾವಿದರು ಈ ತಾಲ್ಲುಕಿನಲ್ಲಿ ಇದ್ದಾರೆ.

# ೪) ಹುಮನಾಬಾದ ತಾಲೂಕಾ ಪರಿಚಯ

ಶ್ರೀ ಹೆಚ್. ಕಾಶಿನಾಥ ರೆಡ್ಡಿ ಅವರು ಹುಮನಾಬಾದ ತಾಲ್ಲೂಕಾ ಪರಿಚಯ ಹಾಗೂ ಶೈಕ್ಷಣಿಕ ಪರಂಪರೆ ಕುರಿತು ಬರೆದಿರುತ್ತಾರೆ.

ಗೋದಾವರಿಯಿಂದ ಕಾವೇರಿವರೆಗೆ ಕನ್ನಡ ನಾಡು ಪಸರಿಸಿದ್ದ ಕಾಲದಲ್ಲಿ "ಕಲ್ಯಾಣ' (ಬಸವ ಕಲ್ಯಾಣ) ನಾಡಿನ ಕೇಂದ್ರ ಸ್ಥಾನದಲ್ಲಿತ್ತು. ಆದರೆ ಈಗ ಗಡಿ ಸ್ಥಾನದಲ್ಲಿದೆ 12ನೇ ಶತಮಾನದಲ್ಲಿ ವಚನಗಳನ್ನು ರಚಿಸುವುದುರ ಮೂಲಕ ಕನ್ನಡ ಸಾಹಿತ್ಯವನ್ನು ವಿಶ್ವ ಸಾಹಿತ್ಯ ಮಟ್ಟದಲ್ಲಿ ಎದ್ದು ಕಾಣುವಂತೆ ಮಾಡಿದವರು ಇಲ್ಲಿಯ ಬಸವಾದಿ ಶರಣರು. ಅಂದು ಮತ್ತು ನಂತರದ ಹಲವಾರು ದಶಕಗಳ ಕಾಲ ಇಲ್ಲಿ ಕನ್ನಡ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಜಾತಿ ಮತ ಪಂಥಗಳನ್ನು ಮೀರಿ ಮುಕ್ತ ವಾತಾವರಣದಲ್ಲಿ ನಿತ್ಯ ಸಾಹಿತ್ಯ ಗೋಷ್ಠಿಗಳು ಇಲ್ಲಿ ನಡೆದು ಸಾಹಿತ್ಯದ ತವರು ಮನೆ ಎಂಬ ಖ್ಯಾತಿ ಈ ಪಟ್ಟಣದ್ದಾಗಿತ್ತು. ಆದರೆ ಈಗ ಇಲ್ಲಿ ಸಾಹಿತ್ಯಕ್ಕೆ ಬರ ಬಂದಂತಾಗಿದೆ. ಗಡಿಭಾಗದಲ್ಲಿಯ ಬೇರೆ ಬೇರೆ ಭಾಷೆಗಳ ಪ್ರಭಾವದಿಂದಾಗಿ ಇಲ್ಲಿಯ ಕನ್ನಡದ ಸ್ಥಿತಿ ಶೋಚನೀಯವಾಗಿದೆ.

ಕೇವಲ ಕಾಟಾಚಾರದ ಕೆಲವು ಸರ್ಕಾರಿ, ಕನ್ನಡ ಸಾಹಿತ್ಯ ಪರಿಷತ್ತಿನ, ಹಾಗೂ ಧಾರ್ಮಿಕ ಕೆಲವು ಕಾರ್ಯಕ್ರಮಗಳು ಇಲ್ಲಿ ನಡೆಯುತ್ತಿರುವುದು ಬಿಟ್ಟರೆ ಬೇರೆ ಚಟುವಟಿಕೆಗಳು ನಗಣ್ಯವೆಂದೇ ಹೇಳಬೇಕು. ಈ ಪರಿಸ್ಥಿಯನ್ನು ನೋಡಿಯೇ ತಾಲ್ಲೂಕಾ ಕಸಾಪ ಪಧಾಧಿಕಾರಿಗಳು ಸೇರಿ ಜಿಲ್ಲಾ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಇಲ್ಲಿ ನಡೆಸಿ ಕಲ್ಯಾಣದ ಪ್ರಣತೆಯಲ್ಲಿ ಕನ್ನಡದ ಜ್ಯೋತಿ ಮತ್ತೆ ಪ್ರಜ್ವಲಿಸುವಂತೆ ಮಾಡಬೇಕೆಂಬ ಬಯಕೆ ನಮ್ಮ ಮನದಾಳದಲ್ಲಿ ಹುಟ್ಟಿತ್ತೆಂದರೆ ತಪ್ಪಾಗಲಿಕಿಲ್ಲ.

ಬಸವಕಲ್ಯಾಣ ತಾಲ್ಲೂಕಿನ ಸುಕ್ಷೇತ್ರ ಹಾರಕೂಡದಲ್ಲಿ ಸಾಹಿತ್ಯ ಸಮ್ಮೇಳನ ನಡೆಸುವ ತೀರ್ಮಾನದ ಬೆನ್ನಲ್ಲೇ ಸಮ್ಮೇಳನ ಕೇವಲ ಎರಡು ದಿನಗಳ ಜಾತ್ರೆಯಂತೆ ಮರೆತು ಹೋಗುವಂತಾಗಬಾರದು. ಉಪಯುಕ್ತ ವಿಷಯಗಳ ವಿಚಾರ ವಿಮರ್ಶೆ ಈ ಸಮ್ಮೇಳನದಲ್ಲಿ ನಡೆಯಬೇಕು ಅಲ್ಲದೆ, ಈ ಸಂದರ್ಭದಲ್ಲಿ ಶಾಶ್ವತವಾಗಿ ಉಳಿಯುವಂತಹ ಗ್ರಂಥಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟಿಸಬೇಕೆಂದು ಕೂಡ ನಿರ್ಧರಿಸಿದೇವು. ಸಾಹಿತ್ಯ ಪರಿಷತ್ತಿನ ಜಿಲ್ಲಾಧ್ಯಕ್ಷ ಪ್ರೊ. ಸಿದ್ರಾಮಪ್ಪಾ ಮಾಸಿಮಾಡೆ ಅವರ ಮಾರ್ಗದರ್ಶನದಲ್ಲಿ ಸಂಪಾದಕ ಮಂಡಳಿ ರಚಿಸಿಕೊಂಡು ಈ ಮಹತ್ವದ ಕೆಲಸಕ್ಕೆ ಅಣಿಯಾದವು. ಹಾಗೂ ಹುಮನಾಬಾದ ತಾಲೂಕಿನ ಪರಿಚಯ ಶೈಕ್ಷಣಿಕ ಪರಿಚಯ ಕುರಿತು ಮುಂದುವರಿಯುತ್ತದೆ.

ಕರ್ನಾಟಕ ಉತ್ತರ ದಿಕ್ಕಿನಲ್ಲಿರುವ ಬೀದರ ಜಿಲ್ಲೆ ಕನ್ನಡಮ್ಮನ ಮುಕುಟವಾಗಿ ಕಂಗೊಳಿಸುತ್ತಿದೆ. ಈ ಜಿಲ್ಲೆಯ ಒಂದು ತಾಲ್ಲೂಕವೇ ಹುಮನಾಬಾದ. ಈ ನಗರಕ್ಕೆ ಪೂರ್ವದಲ್ಲಿ ಜಯಸಿಂಹನಗರವೆಂದು ಕರೆಯುತ್ತಿದ್ದರು. ಮುಸ್ಲಿಂ ಆಡಳಿತದಲ್ಲಿ ಅದೇ ಹೆಸರು ಸ್ಥಿರವಾಗಿ ಉಳಿಯಿತು. ಇದೊಂದು ಐತಿಹಾಸಿಕ ಪಟ್ಟಣವಾಗಿದ್ದು: ಬೀದರ-ಗುಲಬರ್ಗಾಗಳ ಮಧ್ಯದಲ್ಲಿ ಬರುತ್ತದೆ. ಈ ನಗರದ ಮುಖಾಂತರವೇ ರಾಷ್ಟ್ರೀಯ ಹೆದ್ದಾರಿ 9 ಹಾಯ್ದು ಹೋಗುತ್ತದೆ. ಇದು ಮುಂಬೈದಿಂದ ಹೈದ್ರಾಬಾದಕ್ಕೆ ಸಂಪರ್ಕ ಕಲ್ಪಿಸುತ್ತದೆ.

ಈ ಭೂಮಿಗೆ ಧರಿನಾಡು ಎಂದು ಕರೆಯುತ್ತಾರೆ. ಕೆಂಪು ಮಣ್ಣಿನಿಂದ ಕೂಡಿದ ತಂಪು ಪ್ರದೇಶ ಇದಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ಕಾಯಕ ಮಾಡಿದ ಪುಣ್ಯ ಭೂಮಿ, ಪಾವನ ನಾಡು ಇದಾಗಿದೆ. ಚಾಲುಕ್ಯ 6ನೇ ವಿಕ್ರಮಾದಿತ್ಯನಂತಹ ವೀರಾಧಿ ವೀರರು ರಾಜ್ಯವಾಳಿದ ನೆಲದಲ್ಲಿ ವಡ್ಡಾರಾಧನೆ ಮಿತಾಕ್ಷರಗಳಂತಹ ಗ್ರಂಥಗಳು ರಚನೆಗೊಂಡು ಸಾಹಿತ್ಯ ಜ್ಯೋತಿ ಇಲ್ಲಿ ಪ್ರಜ್ವಲಿಸಿತು. ವಿಶ್ವ ಸಾಹಿತ್ಯಕ್ಕೆ ವಚನ ಸಾಹಿತ್ಯವೆಂಬ ಅತ್ಯಮೂಲ್ಯ ಕಾಣಿಕೆ ನೀಡಿದ ಪವಿತ್ರ ಭೂಮಿ ಈ ನಮ್ಮ ಬೀದರ ಜಿಲ್ಲೆ.

## ಭೌಗೋಳಿಕ ಪರಿಚಯ

ಇದು ಕನ್ನಡ ನಾಡಿನ ಉತ್ತರ ಭಾಗದಲ್ಲಿ ನೆಲೆಗೊಂಡಿದೆ. ಈ ತಾಲ್ಲೂಕಿನ ವಿಸ್ತೀರ್ಣವು 385.23 ಚ.ಕಿ. ಇದೆ. ಈ ತಾಲ್ಲೂಕಿನ ಉತ್ತರ ದಿಕ್ಕಿನಲ್ಲಿ ಭಾಲ್ಕಿ ಮತ್ತು ಬೀದರ ತಾಲ್ಲೂಕಗಳಿವೆ. ದಕ್ಷಿಣ ದಿಕ್ಕಿಗೆ ಗುಲಬರ್ಗಾ, ಆಳಂದ ಹಾಗೂ ಚಿಂಚೋಳಿ ತಾಲ್ಲೂಕಗಳು ಇವೆ. ಪೂರ್ವದಲ್ಲಿ ಆಂಧ್ರ ಪ್ರದೇಶ ಪಶ್ಚಿಮದಲ್ಲಿ ಬಸವಕಲ್ಯಾಣ ತಾಲ್ಲೂಕಗಳು ಚಾಚಿಕೊಂಡಿದೆ. ಆಡಳಿತದ ದೃಷ್ಟಿಯಿಂದ ಈ ತಾಲ್ಲೂಕವನ್ನು 6 ಹೊಬಳಿಗಳನ್ನಾಗಿ ವಿಂಗಡಿಸಿದ್ದಾರೆ. ಅವುಗಳೆಂದರೆ: ಹುಮನಾಬಾದ, ಹಳ್ಳಿಖೇಡ (ಬಿ), ದುಬಲಗುಂಡಿ, ಚಿಟಗುಪ್ಪಾ ಹಾಗೂ ಬೇಮಳಖೇಡ.

2001ನೇಯ ಸಾಲಿನ ಜನಗಣತಿ ಪ್ರಕಾರ ಈ ತಾಲ್ಲೂಕಿನ ಒಟ್ಟು ಜನಸಂಖ್ಯೆ 2,94,413 ಇದರಲ್ಲಿ ಗಂಡಸರು 1,50,914 ಹಾಗೂ ಹೆಂಗಸರ ಸಂಖ್ಯೆ 1,43,499 ಜನಸಾಂಧ್ರತೆಯು ಒಂದು ಚದರ ಕಿ.ಮಿ.ಗೆ 298 ಜನರ ಪ್ರಮಾಣದಲ್ಲಿದೆ. ಹುಮನಾಬಾದ ನಗರದ ಜನಸಂಖ್ಯೆ 36511, ಈ ತಾಲ್ಲೂಕಿನಲ್ಲಿ 87 ಹಳ್ಳಿಗಳಿವೆ. ಅವುಗಳಲ್ಲಿ ಜನವಸತಿ ಇರುವ ಹಳ್ಳಿಗಳು 84. ಜನವಸತಿ ಇಲ್ಲದ ಹಳ್ಳಿಗಳು 03. ಈ ತಾಲ್ಲೂಕಿನಲ್ಲಿ 33 ಗ್ರಾಮ ಪಂಚಾಯಿತಿಗಳು 02 ಪುರಸಭೆಗಳು ಇವೆ.

ಬೀದರ ಜಿಲ್ಲೆಯು ರಾಜಧಾನಿ ಬೆಂಗಳೂರುನಿಂದ 700 ಕಿ.ಮಿ. ಅಂತರದಲ್ಲಿದೆ. ರಾಜ್ಯಗಳು ಪುನರ್ ವಿಂಗಡಣೆಯ ಪ್ರಕಾರ ಬೀದರ ಕರ್ನಾಟಕಕ್ಕೆ ಸೇರಿದಾಗ ಹುಮನಾಬಾದ ತಾಲ್ಲೂಕವಾಗಿ ಮಾರ್ಪಟ್ಟಿತು. ಬೀದರ ಜಿಲ್ಲೆಯ ಮೊದಲಿನ ನಾಲ್ಕು ತಾಲ್ಲೂಕಗಳಲ್ಲಿ ಇದು ಅತ್ಯಂತ ದೊಡ್ಡ ತಾಲ್ಲೂಕಾಗಿ 176 ಹಳ್ಳಿಗಳಿಂದ ಕೂಡಿತ್ತು. 1956 ನವೆಂಬರ ತಿಂಗಳಲ್ಲಿ ಬಸವಕಲ್ಯಾಣ ಸ್ವತಂತ್ರ ತಾಲ್ಲೂಕವಾಗಿ ನಿರ್ಮಾಣಗೊಂಡಿತು. ಆಗ ತಾಲ್ಲೂಕಿನ 89 ಹಳ್ಳಿಗಳು ಬಸವಕಲ್ಯಾಣಕ್ಕೆ ಸೇರಿಕೊಂಡವು. ಉಳಿದ 87 ಹಳ್ಳಿಗಳು ಹುಮನಾಬಾದ ತಾಲ್ಲೂಕಿನಲ್ಲಿವೆ.

## *ಹವಾಗುಣ ಮಳೆ*

ಹುಮನಾಬಾದ ತಾಲ್ಲೂಕಿನಲ್ಲಿ ಸಮಶೀತೋಷ್ಣ ಹವಾಮಾನವಿದ್ದು, ಆರೋಗ್ಯದಾಯಕವಾಗಿದೆ. ಇಲ್ಲಿ ಮುಂಗಾರು ಮಳೆಯ ಜೂನ್ ತಿಂಗಳಿಂದ ಪ್ರಾರಂಭವಾಗಿ ಆಕ್ಟೋಬರ್ ತಿಂಗಳಿಗೆ ಕೊನೆಗೊಳ್ಳುತ್ತದೆ. ಹಿಂಗಾರು ಮಳೆಯು ನವೆಂಬರ್‌ನಿಂದ ಡಿಸೆಂಬರವರೆಗೆ ಇರುತ್ತದೆ. ಬೇಸಿಗೆ ಕಾಲದಲ್ಲಿ ಸ್ವಲ್ಪ ಶಕೆ ಜಾಸ್ತಿಯಾಗಿರುತ್ತದೆ. ಒಣ ಹವೆ ಕಂಡು ಬರುತ್ತದೆ. ಗುಡುಗು ಮಿಂಚಿನ ಮಳೆಗಳು ಹೆಚ್ಚಾಗಿ ಬಂದು ಅಲ್ಲಲ್ಲಿ ಸಿಡಿಲಿನ ಆರ್ಬಟ ಹೆಚ್ಚಾಗಿರುತ್ತದೆ. ಈ ತಾಲ್ಲೂಕಿನಲ್ಲಿ ವಕ್ಷದ ಮಾಪಕ ಕೇಂದ್ರಗಳು ಒಟ್ಟು 6ಇವೆ. ಸರಾಸರಿ

ಮಳೆಯ ಪ್ರಮಾಣ 582.4 ಮಿ.ಮೀಟರಗಳು. 1998ರಲ್ಲಿ ಮಳೆಯ ಪ್ರಮಾಣ 1176.7ಮಿಮಿ. ಇದ್ದು 2000ರಲ್ಲಿ ಅರ್ಧಕ್ಕೆ ಬಂದು ನಿಂತಿರುವುದು ಬರಗಾಲವನ್ನೆ ಸೂಚಿಸುತ್ತದೆ.

*ನದಿ-ಬೆಟ್ಟ-ಕಾಡುಗಳು*

ಈ ತಾಲ್ಲೂಕಿನಲ್ಲಿ ಯಾವ ದೊಡ್ಡ ನದಿಗಳಿಲ್ಲ. ಆದರೆ ಚಿಕ್ಕ ಹಳ್ಳಗಳಿವೆ. ಅವುಗಳೆಂದರೆ ಬಸವತೀರ್ಥ ಹಳ್ಳ, ಮಾಣಿಕನಗರ ಹಳ್ಳ, ಉಡಬಾಳ ಹಳ್ಳ ಮೊದಲಾದವು. ಬಸವ ತೀರ್ಥ ಹಳ್ಳವು ಮಾಣಿಕನಗರ ಹಳ್ಳಕ್ಕೆ ಸೇರಿಕೊಂಡು ಹುಡುಗಿ-ಹುಮನಾಬಾದ ನಡುವೆ ದೊಡ್ಡ ಪ್ರಮಾಣದಲ್ಲಿ ಹರಿಯುತ್ತದೆ. ಇದರಿಂದ ಮಧ್ಯಮ ನೀರಾವರಿ ಯೋಜನೆಗೆ ಅನುಕೂಲವಿದೆ. ಈ ತಾಲ್ಲೂಕಿನಲ್ಲಿ ನೂರಾರು ಕೆರೆಗಳಿದ್ದರೂ. ಪ್ರಯೋಜನವಾಗಿಲ್ಲ. ಮಳೆಯ ಪ್ರಮಾಣ ಕಡಿಮೆ ಇದ್ದ ಕಾರಣ ಕೆರೆಗಳಿಗೆ ನೀರಿಲ್ಲ. ಆದುದರಿಂದ ತಾಲ್ಲೂಕಿನ ಬೇಸಾಯ ತೆರೆದ ಬಾವಿಗಳ ಮೇಲೆಯೇ ಅವಲಂಬಿಸಿದೆ. ತಾಲ್ಲೂಕಿನಲ್ಲಿ ಸುಮಾರು 6240 ನೀರಾವರಿ ಬಾವಿಗಳಿವೆ.

ಹುಮನಾಬಾದ ತಾಲ್ಲೂಕಿನಲ್ಲಿ ಅರಣ್ಯ ಪ್ರದೇಶವು ಇದೆ. ಅರಣ್ಯ ಇಲಾಖೆಯ ಉಸ್ತುವಾರಿಯಲ್ಲಿ ಮಾಣಿಕನಗರ, ಧುಮ್ಮನಸೂರ, ಚಾಂಗಲೇರ, ಅಲ್ಲಿಪುರ, ದೇವಗಿರಿ, ಕರಕನಳ್ಳಿ, ಗೊಟ್ಟಂಗೊಟ್ಟಿ ಮೊದಲಾದ ಅರಣ್ಯ ಪ್ರದೇಶಗಳು ಸಸ್ಯ ಕೇಂದ್ರಗಳು ಅಭಿವೃದ್ಧಿ ಹೊಂದುತ್ತಿವೆ. ಅರಣ್ಯದಲ್ಲಿ ಹಲವಾರು ಜಾತಿಯ ಮರಗಿಡಗಳು ಬೆಳೆಯಲಾಗುತ್ತಿದೆ. ಈ ಕಾಡುಗಳಲ್ಲಿ ತೋಳ, ನರಿ, ಜಿಂಕೆ. ಮೊಲ ಮೊದಲಾದ ಪ್ರಾಣಿಗಳು ಅಲ್ಲಲ್ಲಿ ಕಂಡು ಬರುತ್ತವೆ. ದಟ್ಟಕಾಡಿನಲ್ಲಿ ಹುಲಿ, ಚಿರತೆಗಳು, ಕಾಡುಹಂದಿಗಳು ವಾಸವಾಗಿವೆ. ಇಲ್ಲಿಯ ಪಕ್ಷಿ ಸಂಕುಲ ಸಮೃದ್ಧವಾಗಿದೆ.

ಈ ತಾಲ್ಲೂಕಿನಲ್ಲಿ ಖನಿಜ ಸಂಪತ್ತು ಯಾವುದು ಕೂಡ ಇಲ್ಲ ಗಟ್ಟಿಯಾದ ಕೆಂಪು ಕಲ್ಲುಗಳು ಮಾತ್ರ ಹೇರಳವಾಗಿ ದೊರೆಯುತ್ತಿವೆ. ತಾಲ್ಲೂಕಿನಲ್ಲಿ ಹಣಕುಣಿ, ಒಳಖಂಡಿ, ಜಲಸಂಗವಿಯಿಂದ, ಸಾವಿರಾರು ಟನ್ ಕಲ್ಲುಗಳು ಇಲ್ಲಿಂದ ಗುಲಬರ್ಗಾ ಕಮಲಾಪೂರ ಮೊದಲಾದ ಕಡೆ ಸಾಗಿಸಲಾಗುತ್ತದೆ. ಈ ಕಲ್ಲುಗಳಿಂದ ಸುಂದರವಾಗಿ ಮನೆ ಕಟ್ಟಬಹುದು. ಈ ತಾಲ್ಲೂಕಿನಲ್ಲಿ ಒಂದು ಸಹಕಾರ ಸಕ್ಕರೆ ಕಾರ್ಖಾನೆಯಿದ್ದು: 3ಖಾಸಗಿ ಕಾರ್ಖಾನೆಗಳಿವೆ. ಅವುಗಳಿಂದ ದೊರೆಯುವ ಕಚ್ಚಾವಸ್ತು ಕಬ್ಬಿನ ಸಪ್ಪೆಯಿಂದ ಕಾಗದ ಕಾರ್ಖಾನೆ ನಡೆಸಲಾಗುತ್ತದೆ.

*ಜನವರ್ಗಗಳು:-*

ಹುಮನಾಬಾದ ತಾಲ್ಲೂಕಿನಲ್ಲಿ ಹಿಂದು ಮುಸ್ಲಿಂ ಸಂಸ್ಕೃತಿಯ ಸಮನ್ವಯತೆಯನ್ನು ಕಾಣುತ್ತೇವೆ. ತಾಲ್ಲುಕಿನಲ್ಲಿ ಎಲ್ಲಾ ಜಾತಿಯ ಜನವರ್ಗಗಳು ಕಂಡು ಬರುತ್ತವೆ. ಲಿಂಗಾಯತ, ಬ್ರಾಹ್ಮಣ, ಕೋಮಟಿಗ, ಕುರುಬ, ಕಬ್ಬಲಿಗ, ರೆಡ್ಡಿ, ಕ್ಷೌರಿಕರು, ಬೇಡರು, ವಡ್ಡರು, ಹೆಳವರು, ಅಗಸರು, ಕುಂಬಾರರು, ನೇಕಾರರು, ಗೌಳಿಗ, ಗೋಸ್ವಾಮಿ, ಬೌದ್ಧರು, ಕ್ರಿಶ್ಚನ್ನರು, ಲಂಬಾಣಿಗಳು, ಕುಂಚಿಕೊರೆರು, ಬುಡಬುಡಕಿಯರು, ಅಲೆಮಾರಿ ಜನಾಂಗಗಳಾದ ಬೈಲಗಂಬಾರರು, ಪಾಸಿಪರ್ಧೆರು, ಬುರುಬುರ ಪೋಚೆಮ್ಮನವರು ಹೀಗೆ ಹಲವಾರು ಜನವರ್ಗಗಳಿವೆ. ಈ ತಾಲ್ಲುಕಿನಲ್ಲಿ ಲಂಬಾಣಿಗಳ 10 ತಾಂಡಾಗಳು ಇವೆ. ಈ ಜನ ಶ್ರಮ ಜೀವಿಗಳಾಗಿದ್ದು;

ವ್ಯವಸಾಯ ಮುಖ್ಯ ಉದ್ಯೋಗವಾಗಿದೆ. ಇವರ ಭಾಷೆ ಪ್ರತ್ಯೇಕವಾಗಿದ್ದು, ಅದಕ್ಕೆ ಲಿಪಿಯಿಲ್ಲ. ಇವರು ಕೂಡಾ ಹಿಂದು ಜನಾಂಗವೇ ಆಗಿದ್ದಾರೆ.

ಬೋವಿ ಸಮಾಜ ಅಥವಾ ವಡ್ಡರು ಭೂಮಿಯಿಂದ ಕಲ್ಲು ತೆಗೆಯುವ ಕರ್ಮಯೋಗಿಗಳು, ಆದರೆ ಇಂದು ಕಲ್ಲು ತೆಗೆಯುವ ಯಂತ್ರಗಳು ಬಂದು ಅವರ ಉದ್ಯೋಗನಿಂತು ಬಿಟ್ಟಿದೆ. ಈಗ ಬೇರೆ ಕಾಯಕ ಅರಸುತ್ತಿದ್ದಾರೆ. ಈ ತಾಲ್ಲೂಕಿನಲ್ಲಿ ರೆಡ್ಡಿ ಜನಾಂಗ ಪ್ರತಿಯೊಂದು ಊರಿನಲ್ಲಿದ್ದು: ವ್ಯವಸಾಯದಲ್ಲಿ ತೊಡಗಿದ್ದಾರೆ. ಹೈನುಗಾರಿಕೆಯಲ್ಲಿ ತುಂಬಾ ಪಳಗಿದ ಈ ಜನರು ಹಾಲಿನ ಉತ್ಪನ್ನಗಳು ಮಾರಾಟ ಮಾಡುತ್ತಾರೆ.

***ಇತಿಹಾಸ:-***

ಈ ಧರಿನಾಡನ್ನು ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರು, ಕಾಕತಿಯರು, ಖಿಲ್ಜಿ, ಬಹಮನಿ ಮೊಘಲರು, ಹೈದ್ರಾಬಾದ ನಿಜಾಮ ಮೊದಲಾದವರು ಆಳಿದರು. ಕಲ್ಯಾಣ ಚಾಲುಕ್ಯ ಅರಸನಾದ 6ನೇ ವಿಕ್ರಮಾದಿತ್ಯನು ಈ ಪ್ರದೇಶದಲ್ಲಿ ಅಭಿವೃದ್ಧಿ ಕಾರ್ಯ ಕೈಕೊಂಡು ಕನ್ನಡ ಭಾಷೆ, ಶಿಲ್ಪಕಲೆ, ಸಂಗೀತ, ನಾಟಕ ನೃತ್ಯಕಲೆ ಅತ್ಯಂತ ಎತ್ತರಕ್ಕೆ ಬೆಳೆಸಲು ಸಹಕರಿಸಿದನೆಂದು ಇತಿಹಾಸ ಹೇಳುತ್ತದೆ/ ಬಸವಕಲ್ಯಾಣದ ಈಗಿನ ಗೊರಟಾ ಗ್ರಾಮವು ಗೋರಂಟೆ ಎಂದು ಪ್ರಸಿದ್ದವಾಗಿತ್ತು. ಅಲ್ಲಿಯ ಸಂಗೀತ ಶಾಲೆ ಭರತ ಖಂಡದಲ್ಲೇ ಅತ್ಯಂತ ದೊಡ್ಡದಾಗಿತ್ತು. ಸುಮಾರು 10,000 ವಿದ್ಯಾರ್ಥಿಗಳು, 1000 ಸಾವಿರ ಶಿಕ್ಷಕರು ಆ ವಿದ್ಯಾಲಯದಲ್ಲಿದ್ದರೆಂದು ಶಿಲಾಶಾಸನಗಳು ಹೇಳುತ್ತವೆ.

6ನೇ ವಿಕ್ರಮಾದಿತ್ಯನು ಅನೇಕ ಗುಡಿ ಗುಂಡಾರಗಳು ಕಟ್ಟಿಸಿದನು. ಅವುಗಳಲ್ಲಿ ನಾರಾಯಣಪುರದ ಶಿವಮಂದಿರ ಹಾಗೂ ಹುಮನಾಬಾದ ತಾಲೂಕಿನ ಜಲಸಂಗಿ ಗ್ರಾಮದ ಕಲ್ಲೇಶ್ವರ ದೇವಾಲಯಗಳು ಪ್ರಸಿದ್ಧವಾಗಿದ್ದವೆಂದು ತಿಳಿದು ಬರುತ್ತದೆ. ಇವನ ಅವಧಿಯ ಈಗಿನ ಘಾಟಬೋರಳ ಎಂಬ ಹೆಸರಿನಿಂದ ಕರೆಯಲ್ಪಡುವ ಅಗ್ರಹಾರವಾಗಿತ್ತು ಈ ದೊರೆಯ ಕಲಾಸೇವೆ, ಕಲಾ ವೈಭವ, ಕಲಾಮಂದಿರಗಳ ನಿರ್ಮಾಣ, ಉತ್ತಮ ಕೃತಿಗಳ ರಚನೆ ಶಿಲಾಶಾಸನಗಳು ಇಂದಿಗೂ ಸಾರುತ್ತವೆ.

ನಂತರ ಈ ನಗರವನ್ನು ಚಾಲುಕ್ಯ ದೊರೆಯಾದ ಎರಡನೇ ಜಯಸಿಂಹನು ಕ್ರಿ.ಶ. 1015ರಿಂದ 1043 ರಲ್ಲಿ ಆಳಿದ್ದನೆಂದು ತಿಳಿದು ಬರುತ್ತದೆ. ಕ್ರಿ.ಶ. 1040ರಲ್ಲಿ ಈ ನಗರಕ್ಕೆ ಜಯಸಿಂಹ ನಗರವೆಂಬ ಹೆಸರನಿಟ್ಟು ಕರೆದುದು ತಿಳಿದುಬರುತ್ತದೆ. ಈ ಪ್ರಾಚೀನ ಕಾಲದಿಂದ ಈ ಭಾಗದ ಅನೇಕ ಹಳ್ಳಿಗಳು ವ್ಯಾಪಾರದ ಕೇಂದ್ರಗಳಾಗಿದ್ದವು. ಚಿಟಗುಪ್ಪಾ, ಹಳ್ಳಿಖೇಡ, ಘಾಟಬೋರಾಳ, ಕನಕಟ್ಟಾ ಮುಂತಾದ ಗ್ರಾಮಗಳಿಂದ ವ್ಯಾಪಾರ ಭರದಿಂದ ನಡೆಯುತ್ತಿತ್ತು. ಅನೇಕ ವ್ಯಾಪಾರಿಗಳು ವಣಿಕ ಸಂಘಗಳನ್ನು ಕಟ್ಟಿಕೊಂಡು ಸುಮಾರು 500 ರಿಂದ ಸಾಪಿರ ಹೇರೆತ್ತುಗಳನ್ನು ಬಳಸಿಕೊಂಡು ದೂರ ದೂರದ ನಗರಗಳಿಂದ ಅವಶ್ಯಕ ವಸ್ತುಗಳು ಪೊರೈಸುತ್ತಿದ್ದರು. ಅಮರಾವತಿಯಿಂದ ಸಕ್ಕರೆ, ಕುಮಟಾದಿಂದ ಬಂಗಾರ, ಹೈದ್ರಾಬಾದದಿಂದ ಉಪ್ಪು ಹೀಗೆ ಅನೇಕ ಭಾಗಗಳಿಂದ ಸರಕುಗಳ ಹೇರೆತ್ತಿನ ಮೇಲೆ ಹಾಕಿಕೊಂಡು 5-6 ತಿಂಗಳವರೆಗೆ ಪ್ರಯಾಣಿಸಿ - ವ್ಯಾಪಾರದಲ್ಲಿ ತೊಡಗಿರುತ್ತಿದ್ದರು.

ಚಾಲುಕ್ಯ ಮೂರನೆಯ ತೈಲಪನ ನಂತರ ಕಲಚೂರಿ ಬಿಜ್ಜಳನು ಅಧಿಕಾರಕ್ಕೆ ಬಂದನು ಇವನ ಆಳ್ವಿಕೆ ಶಾಂತಿ ಸ್ಥಿರತೆಗಳು ಕಳೆದುಕೊಂಡು ಪ್ರಜೆಗಳು ನೆಮ್ಮದಿಯಿಂದ ಇರದಿದ್ದರೂ ಕೂಡ ಕರ್ನಾಟಕ ಇತಿಹಾಸ ಮತ್ತು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮಹತ್ವಪೂರ್ಣ ಅಧ್ಯಯವೆನಿಸಿತು. ಬಿಜ್ಜಳನ ಮಹಾಮಂತ್ರಿಗಳಾದ ಬಸವಣ್ಣನವರು ರಾಜ್ಯದ ಅನುಭವ ಮಂಟಪವೆಂಬ ಧಾರ್ಮಿಕ ಸಂಸತ್ತನ್ನು ಕಟ್ಟಿ ಬೆಳೆಸಿದರು. ಅನುಭವ ಮಂಟಪಕ್ಕೆ ಅಲ್ಲಮಪ್ರಭುಗಳನ್ನು ಅಧ್ಯಕ್ಷರನ್ನಾಗಿ ಮಾಡಿದರು. ಆರ್ಥಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ಬೆಳವಣಿಗೆಯೊಂದಿಗೆ ಧಾರ್ಮಿಕ ಕ್ಷೇತ್ರದಲ್ಲಿ ಹೊಸ ಅಧ್ಯಯ ಪ್ರಾರಂಭಿಸಿದರು. ವೀರಶೈವ ಧರ್ಮ ಸೇರಿಕೊಂಡು ಜೀವನದ ಮೌಲ್ಯಗಳಾದ ಸತ್ಯ, ಅಹಿಂಸೆ, ಪರೋಪಕಾರ, ಭಕ್ತಿ, ಜ್ಞಾನ ಹಾಗೂ ವೈರಾಗ್ಯಗಳ ಬಗ್ಗೆ ಚಿಂತನೆ ನಡೆಸುತ್ತಿದ್ದರು. ತಮಗೆ ಹೊಳೆದ ನೂತನ ವಿಚಾರಗಳು ವಚನಗಳೆಂಬ ಹೆಸರಿನಲ್ಲಿ ಬರೆದಿಡುತ್ತಿದ್ದರು. ಎಲ್ಲಾ ಶರಣರು ರಚಿಸಿದ ಇಂತಹ ವಚನ ಸಾಹಿತ್ಯವೇ ಇಂದು ವಿಶ್ವ ಸಾಹಿತ್ಯಕ್ಕೆ ಕನ್ನಡ ನಾಡು ನೀಡಿದ ವಿನೂತನ ಕೊಡುಗೆಯಾಗಿದೆ.

ಬಸವಣ್ಣನವರ ಪ್ರಭಾವಕ್ಕೆ ಒಳಗಾಗಿ ನಾಡಿನ ನಾನಾ ಭಾಗಗಳಿಂದ ಅನೇಕ ಶರಣರು ಕಲ್ಯಾಣಕ್ಕೆ ಬಂದು ಅನುಭವ ಮಂಟಪದ ಸದಸ್ಯರಾದರು. ಕಾಶ್ಮೀರದ ಅರಸು ಮೋಳಿಗೆಯ ಮಾರಯ್ಯ, ಅಫಘಾನಿಸ್ತಾನದಿಂದ ಮರುಳ ಶಂಕರದೇವನಂತಹ ಶರಣರು ಅಣ್ಣನ ಆಶ್ರಯದಲ್ಲಿ ಕಾಯಕ ನಿಷ್ಠೆಯನ್ನು ಕೈಕೊಂಡು ಬದುಕು ಹಸನಗೊಳಿಸಿದರು. ಹುಮನಾಬಾದ ತಾಲ್ಲೂಕಿನಲ್ಲಿ ಮುಗ್ಧ ಸಂಗಯ್ಯಾ, ಶರಣ ಭೊಮಣ್ಣ ಮೋಳಿಗೆಯ ಮಾರಯ್ಯ, ಘಟ್ಟಿಬೋರವಳ್ಳಿಯ ಘಟ್ಟಿವಾಳಯ್ಯಾ ಪ್ರಮುಖರಾಗಿದ್ದಾರೆ. ಹುಮನಾಬಾದ ನಗರದಲ್ಲಿ 101 ಮಠಗಳಿದ್ದವೆಂದು ತಿಳಿದು ಬರುತ್ತದೆ. ಈ ಮಠಗಳೆಲ್ಲ ಹಿರೇಮಠ ಎಂಬುವದರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಕರೆನಮಠ, ಮುರುಘ ಮಠ, ಹುಲಕಂತಿ ಮಠ, ಟೆಂಕಸಾಲಿಮಠ ಮುಂತಾದವು ಪ್ರಸಿದ್ಧವಾಗಿದ್ದವು. ಈ ಎಲ್ಲಾ ಧಾರ್ಮಿಕ ಚಟುವಟಿಕೆಗಳಿಂದ ಸಾಮಾಜಿಕ ಆರ್ಥಿಕ ಹಾಗೂ ಧಾರ್ಮಿಕ ರಂಗಗಳಲ್ಲಿ ಮಹತ್ತರ ಬದಲಾವಣೆಯುಂಟಾಯಿತು. ಕುಲ, ಜಾತಿ, ಧರ್ಮಗಳಿಗೆ ಹೊಸ ಅರ್ಥ ಹುಟ್ಟಿಕೊಂಡು ಸರ್ವ ಸಮಾನತೆಗೆ ಈ ಕಾಲ ನಾಂದಿಯಾಯಿತು.

ಕಲ್ಯಾಣದ ಕಲಚೂರಿಗಳ ನಂತರ ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತಿಯರು, ಬಹುಮನಿ, ಬರಿದಶಾಹಿ ಮನೆತನಗಳು ಈ ಪ್ರದೇಶವನ್ನು ಆಳಿದ್ದವು. ಬಹಮನಿಯ ಅರಸರಲ್ಲಿ ಮೂರನೆ ಮಹಮ್ಮದ ಶಹನ ಕಾಲ ಅವರ ಮನೆತನದ ಕೀರ್ತಿ ಹೆಚ್ಚಲು ಕಾರಣವಾಯಿತು. ಅವನ ಮಂತ್ರಿ ಮಹಮ್ಮದ ಗವಾನ ತುಂಬಾ ಚತುರನಾಗಿದ್ದನು. ಬಹಮನಿ ಅರಸರ ಕಾಲದಲ್ಲಿ ಈ ಪ್ರದೇಶ ಸಂಪದ್ ಭರಿತವಾಗಿತ್ತು. ಇವನ ನಂತರ ಔರಂಗಜೇಬನು ಸ್ವಲ್ಪಕಾಲ ಈ ಭಾಗ ಆಳಿದನು. ಕ್ರಿ.ಶ. 1708ರಲ್ಲಿ ಮರಾಠರು ಆಳಿದರು. ಔರಂಗಜೇಬನ ಮರಣದ ನಂತರ ಮರಾಠಾ ರಾಜ್ಯದಲ್ಲಿ ಆಂತರೀಕ ವ್ಯವಹಾರದಲ್ಲಿದ್ದ ಭಯ ತಪ್ಪಿ ಹೋಗಿ ಪೂರ್ಣ ಸ್ವಾತಂತ್ರ್ಯ ದೊರಕಿತು ಮೋಘಲ್ ಸಾಮ್ರಾಜ್ಯದ ಸಾರ್ವಭೌಮತ್ವವನ್ನು ಮಾನ್ಯತೆ ಮಾಡುವೆನೆಂಬ ಕರಾರಿನ ಮೇಲೆ ಮೋಘಲರು ಸಂಬಾಜಿಯ ಮಗ ಸಾಹುವನ್ನು ಸೆರೆಮನೆಯಿಂದ ಬಿಡುಗಡೆ ಮಾಡಿದರು.

ಕ್ರಿ.ಶ. 1708ರ ಜನವರಿ 12ರಲ್ಲಿ ಸಾಹು ಪಟ್ಟಕ್ಕೇರಿದನು. ಗಂಗಾಧರ ಪ್ರಲ್ಹಾದನನ್ನು ತನ್ನ ಪ್ರತಿನಿಧಿಯನ್ನಾಗಿ, ಬಾಜಿರಾವ ಪಂತ ಪಿಂಗಳೆಯನ್ನು ಪೇಶ್ವೆಯನ್ನಾಗಿ ಹಾಗೂ ಧನಾಜಿ ಜಾಧವನನ್ನು ಸೇನಾಪತಿಯಾಗಿ ನೇಮಿಸಿಕೊಂಡನು.

ಧನಾಜಿ ಜಾಧವನು ನಿರಂತರವಾಗಿ ಚೌಥಾಯ್ ಕರವಸೂಲಿ ಮಾಡಿದನು. ಆ ಸಮಯದಲ್ಲಿ ಹುಮನಾಬಾದ ನಗರಕ್ಕೆ ಹತ್ತಾರು ಸಲ ಬಂದು ಹೋದನು. ಇವನ ಮರಣದ ನಂತರ ಇವನ ಮಗ ಚಂದ್ರಸೇನ್ ಜಾಧವ ಸೇನಾಧಿಪತಿಯಾದನು. ಇವನು ಹುಮನಾಬಾದ ನಗರಕ್ಕೆ ಹಳೆಯ ಹೆಸರನ್ನೇ ಕೊಟ್ಟು ಜಯಸಿಂಗ ನಗರವೆಂದು ಕರೆದನು. ಇವನ ನಂತರ ಅವನ ಮಗನಾದ ರಾಮಚಂದ್ರ ಜಾಧವ ಹುಮನಾಬಾದ ನಗರವನ್ನು ಅಭಿವೃದ್ಧಿ ಪಡಿಸಿದನು. ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಪಟ್ಟಣದ ಸುತ್ತಲೂ ಕೋಟೆ ಕಟ್ಟಿಸಿದನು.

ಕ್ರಿ.ಶ. 1948ರವರೆಗೆ ಈ ಪ್ರದೇಶವನ್ನು ನಿಜಾಮನು ಆಳಿದನು ಅವನ ಆಳ್ವಿಕೆಯಲ್ಲಿ ಹುಮನಾಬಾದ ಪೈಗಾ ತಾಲ್ಲೂಕವಾಗಿತ್ತು. ಇದು ನಿಜಾಮನ ಸರ್ಫ–ಇ–ಖಾಸ್ ಆಗಿದ್ದು. ಇದರ ಉತ್ಪನ್ನ ನಿಜಾಮನ ಖಾಸಗಿ ಜೀವನಕ್ಕೆ ಸೇರುತ್ತಿತ್ತು. ಇದೇ ಸಮಯದಲ್ಲಿ ಚಿಟಗುಪ್ಪಾ ಕೂಡಾ ಪೈಗಾವಾಗಿತ್ತು. ನಿಜಾಮನ ಆಳ್ವಿಕೆಯಲ್ಲಿ ಈ ಭಾಗ ಯಾವುದೇ ಅಭಿವೃದ್ಧಿ ಕಾಣದೆ ಹಾಳಾಯಿತು ಕನ್ನಡ ಭಾಷೆಯ ಕೊರತೆಯಾದ ಈ ಭಾಗದಲ್ಲಿ ಉರ್ದು ಶಾಲೆಗಳು ಪ್ರಾರಂಭವಾದವು. ರಾಜಕೀಯ ಭಾಷೆ ಉರ್ದು ಮತ್ತು ಫರ್ಷಿಯನ್‌ಗಳಾಗಿದ್ದವು.

ನಿಜಾಮನ ಆಡಳಿತದಲ್ಲಿ ಖಾಸಿಂ ರಜ್ವಿ ಎಂಬುವವನ ನೇತೃತ್ವದಲ್ಲಿ ರಜಾಕಾರರು ಎಂಬ ಪುಂಡ ಪೋಕರ ಗುಂಪೊಂದು ಸಂಘಟನೆಯಾಯಿತು. ಈ ರಜಾಕರರು ಹಿಂದೂ ಜನರನ್ನು ನಾನಾ ರೀತಿಯಿಂದ ಪೀಡಿಸಲು ಪ್ರಾರಂಭಿಸಿದರು. ಇವರ ಅತ್ಯಾಚಾರಕ್ಕೆ ಬಲಿಯಾಗಿ ಅನೇಕರು ಪ್ರಾಣ ಕಳೆದುಕೊಂಡರು. ಸಾವಿರಾರು ಜನರು ಆಸ್ತಿ–ಪಾಸ್ತಿ ತೊರೆದು ಸೊಲ್ಲಾಪುರ, ಪೂನಾ ಹಾಗೂ ಮುಂಬಯಿಗಳಿಗೆ ಹೊರಟು ಹೋದರು. ಕ್ರಿ.ಶ. 1942ರಲ್ಲಿ ಹುಮನಾಬಾದ ಆರ್ಯ ಸಮಾಜದ ನೇತಾರರಾದ ಶಿವಚಂದ್ರಜಿ ನೆಲ್ಲಗಿ, ಲಕ್ಷ್ಮಣರಾವ, ರಾವಜಿರಾವ ಹಾಗೂ ನರಸಿಂಗರಾವ ಮೊದಲಾದವರ ಕೊಲೆಗಳು ರಜಾಕಾರರಿಂದಲೇ ನಡೆದವು. ಚಿಟಗುಪ್ಪಾ ಪೈಗಾದಲ್ಲಿಯೂ ಕೂಡಾ ರಜಾಕಾರರು ಗದ್ದಲ ಪ್ರಾರಂಭಿಸಿದರು. ಇಷ್ಟರಲ್ಲಿ ದೇಶದ ತುಂಬೆಲ್ಲಾ ಸ್ವಾತಂತ್ರ್ಯದ ಚಳುವಳಿ ಪ್ರಾರಂಭವಾಗಿತ್ತು.

ನಿಜಾಮ ಸರಕಾರದಲ್ಲಿ ಇಂಗ್ಲಿಷ್ ಭಾಷೆ ಶಿಕ್ಷಕರಾದ ಶಿವ ಚಂದ್ರಜಿ ನೆಲ್ಲಗಿಯವರು ಉತ್ತಮ ಸಂಘಟಕರಾಗಿದ್ದರು. ದೇಶ ಪ್ರೇಮಿಗಳಾಗಿದ್ದರು. ಭಾರತ ಸ್ವಾತಂತ್ರ್ಯಕ್ಕಾಗಿ ಅವರು ತಮ್ಮ ಪ್ರಾಣವನ್ನೆ ಬಲಿಕೊಟ್ಟು ದೊರಕಿಸಿಕೊಟ್ಟರು.

ಕ್ರಿ.ಶ. 1938ರಲ್ಲಿಯೇ ಹುಮನಾಬಾದ ನಗರದಲ್ಲಿ ನವತರುಣರ ತಂಡವೊಂದು ಗುಂಪುಗೂಡಿ ಸಮಾಜದಲ್ಲಿ ನಡೆದ ಅನ್ಯಾಯದ ವಿರುದ್ಧ ಹೋರಾಡಲು ತಯಾರಾದರು.

*ನಗರ ರಚನೆ–ಸಂಸ್ಕೃತಿ*

ಬೀದರ ನಗರದ ಪಶ್ಚಿಮ ಭಾಗದಲ್ಲಿ ಸುಮಾರು 50ಕಿ.ಮಿ. ಅಂತರದಲ್ಲಿ ಹುಮನಾಬಾದ ನಗರವಿದೆ. ಈ ನಗರದ ಜನಸಂಖ್ಯೆಯು ಕ್ರಿ.ಶ. 2001ರ ಜನಗಣತಿಯ ಪ್ರಕಾರ 2,94,413 ಇದೆ. ನಂತರದಲ್ಲಿ ಮುಸ್ಲಿಂ ಆಳ್ವಿಕೆಯಲ್ಲಿ ಹುಮನಾಬಾದ ಎಂಬ ಹೆಸರಾಯಿತು. ಚಾಲುಕ್ಯ ಅರಸನಾದ ಎರಡನೆ ಜಯಸಿಂಹನ ಕಾಲದಲ್ಲಿಯೇ ಈ ಊರು ರಚನೆಗೊಂಡು ಪ್ರಸಿದ್ಧ ವ್ಯಾಪಾರ ಕೇಂದ್ರವಾಯಿತು. ಸಾಹು ಮಹಾರಾಜನ

ಮಂತ್ರಿಯಾದ್ ಧನಾಜಿ ಜಾಧವ, ಅವನ ಮಗ ಚಂದ್ರಸೇನ್ ಜಾಧವರ ಕಾಲದಲ್ಲಿ ಈ ನಗರ ಪುಜರುಜ್ಜೀವನ ಪಡೆಯಿತು. ಮುಂದೆ ರಾಮಚಂದ್ರ ಜಾಧವನು ಈ ನಗರವನ್ನು ಪಗಡೆ ಬಜಾರಿನ ಮಾದರಿಯಲ್ಲಿ ರಚಿಸಿ ಹರಪ್ಪಾ ಪಟ್ಟಣದಂತೆ. ಓಣಿ ಓಣಿಗಳಲ್ಲಿ ಒಳಚರಂಡಿ ವ್ಯವಸ್ಥೆ ಮಾಡಿಸಿದನು. ನಗರದ ಸುತ್ತಲೂ ಭದ್ರವಾದ ಕೋಟೆ ಕಟ್ಟಿಸಿ 5 ಅಗಸಿಗಳು ಬಿಡಿಸಿದನು. ಹಣಕುಣಿ ಅಗಸಿ, ಚಿಟಗುಪ್ಪಾ ಆಗಸಿ, ಕಲಬುರ್ಗಿ ಅಗಸಿ, ಭಾಲ್ಕಿ ಅಗಸಿ ಹಾಗೂ ದೇವರ ಅಗಸಿ ಎಂದು ಅವುಗಳು ಪ್ರಸಿದ್ಧವಾಗಿದ್ದವು. ಈಗ ಅಗಸಿಯೊಂದು ಬಿಟ್ಟರೆ ಉಳಿದೆಲ್ಲವು ಹಾಳಾಗಿ ಹೋಗಿದೆ. ಈ ನಗರ ಸುಂದರವಾಗಿ ನಿರ್ಮಿಸಲಾಗಿದೆ. ಈ ದೇವಾಲಯದ ಹತ್ತಿರವೇ ಅರಸನ ಅರಮನೆಯು ಇಲ್ಲಿವರೆಗೆ ಇತ್ತು. ಆದರೆ ಅದನ್ನು ಈಗ ನಾಶಪಡಿಸಿ ಅದರ ಸ್ಥಳದಲ್ಲಿ ಕಲ್ಯಾಣ ಮಂಟಪ ಕಟ್ಟುವ ಯೋಜನೆ ನಡೆದಿದೆ.

ಹುಮನಾಬಾದ ನಗರವು ರಾಷ್ಟ್ರೀಯ ಹೆದ್ದಾರಿ 9ರ ಮೇಲೆ ನೆಲೆಸಿದ್ದು: ಈಗ ಭರದಿಂದ ಬೆಳೆಯುತ್ತಿದೆ. ನಗರ ಸಭೆಯವರು ವಿವಿಧ ಬಡಾವಣೆಗಳು ರಚಿಸಿ ಆಧುನಿಕ ಸೌಲಭ್ಯವುಳ್ಳ ಮನೆ ನಿರ್ಮಿಸಿಕೊಳ್ಳಲು ಸಹಕರಿಸುತ್ತಿದ್ದಾರೆ. ಹುಮನಾಬಾದ ನಗರದ ಸುತ್ತಲು 2–3 ಕಿ.ಮಿ. ಅಂತರದವರೆಗೆ ನಗರವು ಬೆಳೆದು ನಿಂತಿದೆ. ನಗರಕ್ಕೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಸರ್ಕಾರವು 4ಕೋಟಿ ರೂಪಾಯಿಗಳ ವೆಚ್ಚದಲ್ಲಿ ಹಳ್ಳಿಖೇಡ (ಕೆ) ಗ್ರಾಮದಿಂದ ಪೂರೈಸುತ್ತಿದೆ. ಹಲವಾರು ಖಾಸಗಿ ಶಿಕ್ಷಣ ಸಂಸ್ಥೆಗಳು ದಂತ ಮಹಾವಿದ್ಯಾಲಯಮ ಫಾರ್ಮಸಿ ವಿದ್ಯಾಲಯ, ಪದವಿ ಮಹಾವಿದ್ಯಾಲಯ, ಆಯುರ್ವೇದ ಮಹಾವಿದ್ಯಾಲಯಗಳು ನಗರದಲ್ಲಿ ಪ್ರಾರಂಭಿಸಿವೆ. ವೃತ್ತಿ ಶಿಕ್ಷಣ ಶಾಲೆಗಳು, ದೈಹಿಕ ತರಬೇತಿ ಕೇಂದ್ರಗಳು, ಮೊದಲಾದವು ಶಿಕ್ಷಣ ರಂಗವನ್ನು ಅಭಿವೃದ್ಧಿ ಪಡಿಸಿದೆ.

ಬೆಳೆಯುತ್ತಿರುವ ಈ ನಗರದಲ್ಲಿ ಸರಕಾರದ ಎಲ್ಲಾ ಇಲಾಖೆಗಳು ಕಾರ್ಯನಿರ್ವಹಿಸುತ್ತಿವೆ. ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ಮಾದರಿಯವಾದ ಸಾರಿಗೆ ಸಂಸ್ಥೆಯ ವಾಹನ ಚಾಲಕ ತರಬೇತಿ ಕೇಂದ್ರ ಈ ನಗರದಲ್ಲಿದೆ. ಸಣ್ಣ ಕೈಗಾರಿಕೆಯ ವಲಯವು ಹುಮನಾಬಾದ–ಗುಲಬರ್ಗಾ ರಾಜ್ಯ ಮಾರ್ಗದ ಹತ್ತಿರ ಬೃಹದಾಕಾರವಾಗಿ ಬೆಳೆಯುತ್ತಿದೆ. ಬೀದರ ಜಿಲ್ಲೆಯಲ್ಲಿಯೇ ಪ್ರಥಮವಾಗಿ ಈಜುಗೊಳ ಪಕ್ಕದ ಮಾಣಿಕನಗರ ಗ್ರಾಮದಲ್ಲಿ ನಿರ್ಮಾಣವಾಗುತ್ತಿದೆ. ಕೇಂದ್ರ ಸರ್ಕಾರವು ಮಂಜೂರು ಮಾಡಿದ ರೈಲ್ವೆ ಮಾರ್ಗವು (ಬೀದರ–ಗುಲಬರ್ಗಾ) ಹುಮನಾಬಾದ ನಗರದಿಂದಲೇ ಹಾಯ್ದು ಹೋಗುತ್ತಿದೆ. ಇದರಿಂದ ವ್ಯಾಪಾರ ವ್ಯವಹಾರ ಭರದಿಂದ ಬೆಳೆಯಲು ಅನುಕೂಲವಾಗುತ್ತದೆ.

ಹುಮನಾಬಾದ ನಗರ ಸಭೆಯು ಊರಲ್ಲಿಯ ಹೆದ್ದಾರಿಯನ್ನು ಜೋಡು ರಸ್ತೆಯಾಗಿ ನಿರ್ಮಿಸಿ ಮಧ್ಯದಲ್ಲಿ ಉನ್ನತ ಪ್ರಖರ ಬೆಳಕಿನ ವಿದ್ಯುತ್ ದೀಪಗಳು ಕೂಡಿಸಲು ಕಾರ್ಯೋನ್ಮುಖವಾಗಿದೆ. ನಗರದಲ್ಲಿ ಒಳ್ಳೆಯ ಉದ್ಯಾನವನ್ನು ನಿರ್ಮಿಸುವಲ್ಲಿಯೂ ಅದು ಪ್ರಯತ್ನಿಸುತ್ತಿದೆ. ಇದೀಗ ನಿರ್ಮಾಣಗೊಂಡ ಉದ್ಘಾಟನೆಯ ದಾರಿ ನೋಡುತ್ತಿರುವ ಪುರಸಭೆಯ ಕಟ್ಟಡ ರಥ ಮೈದಾನದ ಪಕ್ಕದಲ್ಲಿ ವೈಭವದಿಂದ ಮೆರೆಯುತ್ತಿದೆ. ತಹಸೀಲ ಕಾರ್ಯಾಲಯದ ಎದುರುಗಡೆ ಮಿನಿ ವಿಧಾನ ಸಭೆಯು ನಿರ್ಮಾಣ ಹಂತದಲ್ಲಿದೆ. ಹೀಗೆ ನಗರ ಪ್ರಗತಿಯ ಪಥದಲ್ಲಿದೆ.

***ಶಿಕ್ಷಣದ ಪ್ರಗತಿ:-***

ಶಿಕ್ಷಣದ ಪ್ರಗತಿಯಲ್ಲಿ ರಾಜ್ಯದ ಇನ್ನುಳಿದ ಭಾಗಗಳಿಗಿಂತ ಈ ಭಾಗ ತುಂಬಾ ಹಿಂದುಳಿದಿದ್ದು. ನಿಜಾಮನ ಆಡಳಿತದಲ್ಲಿ ಶಿಕ್ಷಣದ ಮಾಧ್ಯಮ ಉರ್ದು ಭಾಷೆಯಾಗಿತ್ತು. ಶಿಕ್ಷಣದ ಮಾಧ್ಯಮ ಉರ್ದುವಾದರೂ ಮನೆ ಮಾತು ಕನ್ನಡವಾಗಿತ್ತು. 1859ರಲ್ಲಿ ಆರಂಭವಾದ ನಿಜಾಮರ ಶಿಕ್ಷಣ ಖಾತೆಯು ಸುಮಾರು 90 ವರ್ಷಗಳವರೆಗೆ ಕಾರ್ಯನಿರ್ವಹಿಸಿತು. ಇಲ್ಲಿ ಶಿಕ್ಷಿತರಾದವರು ಹೆಚ್ಚಾಗಿ ಉರ್ದು ಬಲ್ಲವರೇ ಕಾಣಸಿಗುತ್ತಾರೆ. ನಿಜಾಮನ ಆಳ್ವಿಕೆಯಲ್ಲಿ ಉರ್ದುವಿನ ಜೊತೆಗೆ ಫರ್ಷಿಯನ್ ಭಾಷೆಯು ಕೂಡ ಚಲಾವಣೆಯಲ್ಲಿತ್ತು. ಮುಂದೆ ಇಂಗ್ಲೀಷರ ಕಾಲದಲ್ಲಿ ಶಿಕ್ಷಣದಲ್ಲಿ ಇಂಗ್ಲೀಷ ಭಾಷೆ ಕಲಿಯಲು ಅನುವು ದೊರೆಯಿತು. 1956ರಲ್ಲಿ ಭಾಷಾವಾರು ಪ್ರಾಂತಗಳು ರಚನೆಯಾದ ಮೇಲೆ ಪ್ರತಿಯೊಂದು ರಾಜ್ಯದಲ್ಲಿ ಆಯಾ ಜನರ ಆಡು ಭಾಷೆ ಅಲ್ಲಿಯ ಆಡಳಿತ ಭಾಷೆಯಾಯಿತು. ಹೀಗಾಗಿ ಕರ್ನಾಟಕದಲ್ಲಿ ಕನ್ನಡವು ಶಿಕ್ಷಣದ ಅಧಿಕೃತ ಭಾಷೆಯಾಗಿ ಹಳ್ಳಿ ಹಳ್ಳಿಗೆ ಕನ್ನಡ ಶಾಲೆಗಳು ಪ್ರಾರಂಭವಾದವು. ಈಗ ಹುಮನಾಬಾದ ತಾಲ್ಲೂಕಿನಲ್ಲಿ 10 ಶಿಶು ವಿಹಾರಗಳು, 211 ಅಂಗನವಾಡಿಗಳು, 33 ಕಿರಿಯ ಪ್ರಾಥಮಿಕ ಶಾಲೆಗಳು, 152 ಹಿರಿಯ ಪ್ರಾಥಮಿಕ ಶಾಲೆಗಳು, 31 ಪ್ರೌಢ ಶಾಲೆಗಳು ಇವೆ. ಹುಮನಾಬಾದ ನಗರದಲ್ಲಿ 3, ಚಿಟಗುಪ್ಪಾದಲ್ಲಿ 2, ದುಬಲಗುಂಡಿ, ಬೇಮಲಖೇಡಾ, ತಾಳಮಡಗಿ, ಹಳ್ಳಿಖೇಡ(ಬಿ), ಮುನ್ನಾಏಖ್ಖೆಳ್ಳಿ, ನಿರ್ಣಾಗಳಲ್ಲಿ ತಲಾ ಒಂದರಂತೆ ಸುಮಾರು 11 ಕಿರಿಯ ಮಹಾವಿದ್ಯಾಲಯಗಳು ಹಾಗೂ ಹುಮನಾಬಾದ ಪಟ್ಟಣದಲ್ಲಿ ಶ್ರೀ ವೀರಭದ್ರೇಶ್ವರ ಶಿಕ್ಷಣ ಸಂಸ್ಥೆಯ, ದಿಕ್ಷಾ ಭೂಮಿ ಶಿಕ್ಷಣ ಸಂಸ್ಥೆಯ ಹಿರಿಯ ಮಹಾವಿದ್ಯಾಲಯಗಳು, ಚಿಟಗುಪ್ಪಾದಲ್ಲಿ ಕರ್ನಾಟಕ ಶಿಕ್ಷಣ ಸಂಸ್ಥೆಯ ಹಿರಿಯ ಮಹಾವಿದ್ಯಾಲಯ ಪ್ರಾರಂಭವಾಗಿ ಉಚ್ಚಮಟ್ಟದ ಶಿಕ್ಷಣ ನೀಡುತ್ತಿವೆ. ತಾಂತ್ರಿಕ ಶಿಕ್ಷಣದ ತರಬೇತಿಯನ್ನು 3ಕೈಗಾರಿಕಾ ತರಬೇತಿ ಕೇಂದ್ರಗಳು ನೀಡುತ್ತಿವೆ.

ಇಷ್ಟೆಲ್ಲಾ ಶಾಲಾ ಕಾಲೇಜುಗಳು ಇದ್ದರೂ ಕೂಡಾ ಶಿಕ್ಷಣ ಪ್ರಸಾರ, ಪ್ರಚಾರ ಭರದಿಂದ ನಡೆದರೂ ಕೂಡ ಸಾಕ್ಷರತೆಯ ಪ್ರಮಾಣ ಮಂದಗತಿಯಲ್ಲಿಯೇ ಇದೆ. ತಾಲ್ಲೂಕಿನಾದ್ಯಂತ ಸಾಕ್ಷರತೆಯ ಕೇಂದ್ರಗಳು ಪ್ರಾರಂಭಿಸಿ ಜನರಲ್ಲಿ ವಿದ್ಯೆಯ ಬಗ್ಗೆ ನವಚೈತನ್ಯ ಮೂಡಿಸಿವೆ. ಅನೇಕರನ್ನು ನವಸಾಕ್ಷರರನ್ನಾಗಿ ಪರಿವರ್ತಿಸುವ ಕಾರ್ಯ ಭರದಿಂದ ಸಾಗಿದೆ. ಈ ಸಾಕ್ಷರತಾ ಆಭಿಯಾನದಲ್ಲಿ ಎಲ್ಲಾ ಜಾತಿ, ವರ್ಗದವರಿಗೆ ಶಿಕ್ಷಣ ಪಡೆಯುವ ಅವಕಾಶ ಸರಕಾರ ಒದಗಿಸಿದೆ. ಹಿಂದುಳಿದ ಜಾತಿ ಜನಾಂಗದವರಿಂದಲೇ ಹಲವಾರು ಶಾಲೆ ಕಾಲೇಜುಗಳು ಪ್ರಾರಂಭವಾಗಿವೆ. ಈ ಹಿನ್ನಲೆಯಲ್ಲಿ ಹುಮನಾಬಾದ ಹಾಗೂ ಹಳ್ಳಿಖೇಡ(ಬಿ) ಗಳಲ್ಲಿ ಅಂಬೇಡ್ಕರ್ ಪ್ರೌಢ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ.

ಮಹಿಳೆಯರ ಶಿಕ್ಷಣ ಪ್ರಗತಿಗಾಗಿ ಪ್ರತ್ಯೇಕವಾದ ಶಾಲಾ ಕಾಲೇಜುಗಳು ಈ ತಾಲ್ಲೂಕಿನಲ್ಲಿವೆ. ಹುಮನಾಬಾದ ನಗರದಲ್ಲಿ 2 ಪ್ರೌಢ ಶಾಲೆಗಳು ಹಾಗೂ ಒಂದು ಕಿರಿಯ ಕಾಲೇಜು ಇದೆ ಚಿಟಗುಪ್ಪಾ ನಗರದಲ್ಲಿ ಒಂದು ಪ್ರೌಢ ಶಾಲೆಯಿದೆ. ಇದರಿಂದ ಮಹಿಳೆಯರ ಸಾಕ್ಷರತಾ ಪ್ರಮಾಣ ಅಭಿವೃದ್ಧಿ ಸಾಧಿಸುತ್ತಿದೆ.

ಮಾಣಿಕನಗರದಲ್ಲಿ ಹಿಂದಿ ಪ್ರೌಢ ಶಾಲೆ, ಘಾಟ್‌ಬೋರಾಳ್‌ನಲ್ಲಿ ಮರಾಠಿ ಪ್ರೌಢ ಶಾಲೆ, ಹುಮನಾಬಾದ ಹಾಗೂ ಚಿಟಗುಪ್ಪದಲ್ಲಿ ಉರ್ದು ಪ್ರೌಢ ಶಾಲೆಗಳು ಪ್ರಾರಂಭವಾಗಿದ್ದು. ಕನ್ನಡ ಭಾಷೆಯ ಜೊತೆಗೆ ಹಿಂದಿ, ಮರಾಠಿ ಹಾಗೂ ಉರ್ದು ಭಾಷೆಗಳು ಬೆಳವಣಿಗೆ ಸಾಧಿಸುತ್ತಿವೆ. ಮಾಣಿಕನಗರದ ಹಾಗೂ

ಹುಮನಾಬಾದ ನಗರದಲ್ಲಿ ಇಂಗ್ಲಿಷ್ ಮಾಧ್ಯಮದ ಶಾಲೆಗಳು ಆರಂಭವಾಗಿವೆ. ಇತ್ತೀಚೆಗೆ ಹೆಣ್ಣು ಮಕ್ಕಳಿಗಾಗಿಯೇ ಇಂಗ್ಲೀಷ್ ಮಾಧ್ಯಮದ ಕಿರಿಯ ಕಾಲೇಜು ಪ್ರಾರಂಭವಾಗಿದೆ. ಇದಲ್ಲದೆ ಹುಮನಾಬಾದ ನಗರದಲ್ಲಿ ತರಬೇತಿ ಕೇಂದ್ರವು ಕೂಡಾ ನಡೆಯುತ್ತವೆ. 2001ರ ಜನಗಣತಿ ಪ್ರಕಾರ ಹುಮನಾಬಾದ ತಾಲ್ಲೂಕಿನ ಸಾಕ್ಷರತೆಯ ಪ್ರಮಾಣ ಒಟ್ಟು ಶೇಕಡಾ 62% ಇದೆ, ಇದರಲ್ಲಿ ಗಂಡಸರದು ಶೇಕಡ 36% ಇದ್ದರೆ, ಹೆಂಗಸರದು ಶೇಕಡ 26% ಪ್ರಮಾಣದಲ್ಲಿದೆ.

*ವಿದ್ವಾಂಸರು:-*

ಹುಮನಾಬಾದ ತಾಲ್ಲೂಕಿನಲ್ಲಿ ಅನೇಕ ಪ್ರತಿಭಾವಂತ ಕವಿಗಳು, ಕಲಾವಿದರು, ಜಾನಪದ ವಿದ್ವಾಂಸರು, ನಾಟಕ ತಜ್ಞರು ಆಗಿ ಹೋಗಿದ್ದಾರೆ. ಧುಮ್ಮನಸೂರಿನ ಸಿದ್ಧಪ್ರಭುಗಳು, ಚಿಟಗುಪ್ಪದ ಶಿಲ್ಲಪ್ಪ ಭೂತಾಳೆ ಮೊದಲಾದವರು ಸಣ್ಣಾಟಗಳು ರಚಿಸಿದ್ದಾರೆ. ಅದರ ಜೊತೆಗೆ ತತ್ವದ ಪದಗಳು ಬರೆದಿದ್ದಾರೆ. ಈಗಲೂ ಕೂಡಾ ಅನೇಕ ಕವಿಗಳನ್ನು ನಾವು ಗುರುತಿಸಬಹುದು. ಹುಡುಗಿಯ ದಿವಂಗತ ಬಸವರಾಜ ಸೈನೀರ, ಗಡವಂತಿಯ ಬಂಡೆಪ್ಪಾ ಖುಬಾ, ಮಾಣಿಕರಾವ ಧನಾಶ್ರಿ, ಶ್ರೀ ಎಚ್. ಕಾಶಿನಾಥರೆಡ್ಡಿ, ದೇಶಾಂಶ ಹುಡುಗಿ ಮೊದಲಾದವರು, ಜಾನಪದ ಕವಿಗಳು ಹಾಗೂ ಕಲಾವಿದರ ಸಂಖ್ಯೆಯೂ ಹೆಚ್ಚಾಗಿದೆ. ಈ ನಾಡಿನಲ್ಲಿ ವಚನ ಸಾಹಿತ್ಯದ ವಿಶಿಷ್ಟವಾದ ಪರಂಪರೆ ಸುಮಾರು 900 ವರ್ಷಗಳಿಂದ ಬೆಳೆದುಕೊಂಡು ಬಂದಿದೆ.

*ಸಂಸ್ಕೃತಿ:-*

ಹುಮನಾಬಾದ ತಾಲ್ಲೂಕಿನ ಜನರು ಆರೋಗ್ಯವಂತರು ಕಾರಣವೆಂದರೆ ಹೊಲದಲ್ಲಿ ದುಡಿಯುವ ಶ್ರಮ ಜೀವಿಗಳು. ಪಟ್ಟಣದವರಿಗಿಂತ ಹಳ್ಳಿಯ ಜನರು ಗಟ್ಟಿಗರು. ಈ ತಾಲ್ಲೂಕಿನ ಆಜು ಬಾಜು ಆಂಧ್ರ ಹಾಗೂ ಮಹಾರಾಷ್ಟ್ರದ ಜನ ಸಂಪರ್ಕವಿರುವದರಿಂದ ಮರಾಠಿ ಹಾಗೂ ತೆಲುಗು ಭಾಷೆಯ ಅನೇಕ ಶಬ್ದಗಳು ಕೂಡ ಕನ್ನಡದಲ್ಲಿ ಕಲೆತುಕೊಂಡಿವೆ. ಇಲ್ಲಿಯ ಜನರ ಮುಖ್ಯ ಉದ್ಯೋಗ ಒಕ್ಕಲುತನ. ಈ ಒಕ್ಕಲುತನ ಮುಖ್ಯವಾಗಿ ಮಳೆಯ ಮೇಲೆ ಅವಲಂಬಿತವಾಗಿದೆ. ಮಳೆಯು ಅನಿಶ್ಚಿತವಾಗಿರುವದರಿಂದ ಒಕ್ಕಲಿಗರ ಸ್ಥಿತಿ ಗಂಭೀರವಾಗಿದೆ. ಆದರೆ ದೇವರ ಮೇಲಿನ ಭಕ್ತಿಗೇನು ಧಕ್ಕೆಯಾಗಿಲ್ಲ. ದಸರಾ ಹಬ್ಬದಲ್ಲಿ ತುಳಜಾಪೂರಕ್ಕೆ ಕಾಲುನಡಿಗೆಯಿಂದಲೆ ಸಾವಿರಾರು ಜನರು ನೂರಾರು ಕಿ.ಮಿ. ಅಂತರ ಕ್ರಮಿಸುತ್ತಾರೆ. ಊರಿನಲ್ಲಿ ಒಕ್ಕಲುತನಕ್ಕೆ ಸಂಬಂಧಿಸಿದ ಬಡಿಗತನ, ಕುಂಬಾರಿಕೆ, ಕಮ್ಮಾರಿಕೆ, ಬಣ್ಣಗಾರಿಕೆ, ನೇಕಾರಿಗೆಳು ಒಳ್ಳೆಯ ಸ್ಥಿತಿಯಲ್ಲಿದ್ದವು. ಇಂದು ಈ ಕೈಗಾರಿಕೆಗಳೆಲ್ಲಾ ಮೂಲೆಗುಂಪಾಗಿ ನಗರ ಪದ್ದತಿ ಅನುಸರಿಸುವುದು ಸಾಮಾನ್ಯವಾಗಿದೆ.

ಬಡತನ ಬಹಳಿರಲಿ ಬಹಳೆ ಮಕ್ಕಳು ಇರಲಿ ಎಂಬ ಗೃಹಿಣಿಯೂ ತನ್ನ ಬಡತನ ಅಧಿಕವಾಗಿದ್ದರೂ ಕೂಡಾ ಜನಪದ ಕಲೆಯನ್ನು ಆಶ್ರಯಿಸಿಯೇ ಬದುಕಿದ್ದಾಳೆ. ಊರೂರಿಗೆ ಬಯಲಾಟಗಳು, ಕೋಲಾಟಗಳು, ಆಡುತ್ತಾರೆ. ಏಕತಾರಿ ಪದಗಳು, ಭಜನೆ ಹಾಡುಗಳು ಹಾಡುವವರು ಇದ್ದಂತೆ ಕೇಳುವವರು ಇದ್ದಾರೆ. ಭೂತೆರಾಟದಂತಹ ಜನಪದ ಕಥನ ಗೀತೆಗಳು ರಾತ್ರಿಯಲ್ಲಾ ಕುಳಿತು ಕೇಳುವ ದೃಶ್ಯ ಸಾಮಾನ್ಯವಾಗಿದೆ. ಅದೇ ರೀತಿ ಗೊಂದಲಿಗರ ಕಥೆಗಳು ಕೇಳುತ್ತಾರೆ. ಹಳ್ಳಿಗಳಲ್ಲಿ ಸೈಕಲ್ ಹಾಗೂ ಟಿ.ವಿ.ಎಸ್. ದ್ವಿಚಕ್ರ

ವಾಹನಗಳು ಹೆಚ್ಚಾಗಿ ಬಳಸುತ್ತಿದ್ದಾರೆ. ಆದರೆ ಎತ್ತಿನ ಬಂಡಿಗಳು ಕೇವಲ ಒಕ್ಕಲುತನ ಕೆಲಸಕ್ಕೆ ಸೀಮಿತವಾಗಿದೆ. ಊರೂರಿಗೆ ಜಾತ್ರೆಗಳೂ ನಡೆಯುತ್ತಿದ್ದರೂ ಮೊದಲಿನ ವೈಭವ ಕಳೆದುಕೊಂಡಿವೆ. ಹಳ್ಳಿಗಳಲ್ಲಿ ಹಿಂದೂ ಮುಸ್ಲಿಂರಲ್ಲಿ ಕೋಮು ಸೌಹಾರ್ದತೆಯಿದೆ. ವೇಷ-ಭೂಷಣಗಳಲ್ಲಿ ಎರಡು ಜನಾಂಗ ವ್ಯತ್ಯಾಸವಿಲ್ಲದಂತೆ ಸಾಮ್ಯತೆಯಿದೆ. ಹಳ್ಳಿಗಳಲ್ಲಿ ಮೊಹರಂ ಹಬ್ಬವನ್ನು ಹಿಂದೂಗಳೇ ಆಚರಿಸುತ್ತಾರೆ. ಮುಸ್ಲಿಂರೂ ಕೂಡಾ ಹೋಳಿ ಹಬ್ಬದಲ್ಲಿ ಭಾಗಿಗಳಾಗುತ್ತಾರೆ. ಹಳ್ಳಿಯ ಮುಸ್ಲಿಮರು ದಿನ ನಿತ್ಯದಲ್ಲಿ ಉರ್ದುವಿಗಿಂತ ಕನ್ನಡ ಮಾತುಗಳೇ ಹೆಚ್ಚಾಗಿ ಆಡುತ್ತಾರೆ.

<u>ಭಾಷೆ:-</u>

ಬೀದರ ಜಿಲ್ಲೆಯ ಭಾಷೆಯು ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ವಿಚಿತ್ರವಾಗಿದ್ದು: ಇದಕ್ಕೆ ಹುಮನಾಬಾದ ತಾಲೂಕು ಹೊರತಾಗಿಲ್ಲ. ಈ ತಾಲ್ಲೂಕಿನ ಕನ್ನಡ ಭಾಷೆಯ ಮೇಲೆ ಉರ್ದು, ಮರಾಠಿ, ತೆಲುಗು ಹಾಗೂ ಇಂಗ್ಲಿಷ ಭಾಷೆಗಳ ಪ್ರಭಾವ ಹೆಚ್ಚಾಗಿದ್ದು ಮಿಶ್ರ ಕನ್ನಡವಾಗಿದೆ. ಇಲ್ಲಿಯ ಜನರು ಹಳ್ಳೆಗನ್ನಡದ ಅನೇಕ ಶಬ್ದಗಳನ್ನು ಹಾಗೆಯೇ ಉಳಿಸಿಕೊಂಡು ಬಂದಿದ್ದಾರೆ. ಹುಮನಾಬಾದ ತಾಲ್ಲೂಕಿನ ಜನರು ತಮ್ಮ ದಿನನಿತ್ಯದ ಕನ್ನಡ ಭಾಷೆಯ ಬಳಕೆಯಲ್ಲಿ ಸರ್ವನಾಮಗಳು ವಿಚಿತ್ರವಾಗಿ ಬಳಸುತ್ತಾರೆ. ಉದಾರಣೆಗೆ ಅವನು, ಇವನು, ಇವಳು, ಅವಳು, ಅದು, ಇದು ಎಂಬುದಕ್ಕೆ ಬದಲಾಗಿ ಅಂವ, ಇಂವ, ಅಕಿ, ಇಕಿ, ಕದು, ಕಿದೂ ರೂಢಿಯಲ್ಲಿವೆ. ಈ ಶಬ್ದಗಳಿಗೆ ವಿಭಕ್ತಿ ಪ್ರತ್ಯಯ ಹಚ್ಚಿದರೆ ಕಂವನೆ, ಕಿಂವನೆ, ಕಕಿಂದು, ಕಿಕಿಂದು, ಕದಕ್ಕೆ, ಕಿದಕ್ಕೆ ಎಂದು ರೂಪಗೊಳ್ಳುತ್ತದೆ.

ಈ ತಾಲ್ಲೂಕಿನಲ್ಲಿ ಕನ್ನಡದ ಅಪಭ್ರಂಶ ಶಬ್ದಗಳು ಹೆಚ್ಚಾಗಿ ಬಳಸುತ್ತಾರೆ. ಉದಾ:- ಮಹಾನವಮಿ, ಕೋಟೆ, ಬಿಸ್‌ಮಾರ್ಕ್, ಬಯಕೆ ಎಂಬ ಶಬ್ದಗಳಿಗೆ ಬದಲಾಗಿ ಮಾನಂಬಿ, ಕ್ವಾಟಿ, ತೀಸಮಾರ್ಕ್, ಬಂಕಿ ಎಂಬ ಶಬ್ದಗಳು ಬಳಸುತ್ತಾರೆ. ಎ. ಕಾರಾಂತ ಶಬ್ದಗಳು ಈ ಕಾರಾಂತವಾಗಿ ಉಚ್ಛರಿಸುತ್ತಾರೆ.

ಉದಾ: ಆನೆ, ಒಂಟೆ, ಕುದುರೆ, ಮನೆ, ಎಲೆ, ತಲೆ, ಕತ್ತೆ, ಕಾಗೆ, ಜಾತ್ರೆ, ಪಾತ್ರೆ, ಮೊದಲಾದವುಗಳನ್ನು ಆನಿ, ಒಂಟಿ, ಕುದರಿ, ಮನಿ, ಎಲಿ, ತೆಲಿ, ಕತ್ತಿ, ಕಾಗಿ, ಜಾತ್ರಿ, ಪಾತ್ರಿ ಹೀಗೆ ಈ ಕಾರಂತವಾಗಿ ಬಳಸುತ್ತಾರೆ.

ಇಲ್ಲಿಯ ಜನರ ಭಾಷೆಯಲ್ಲಿ ಅನ್ಯಭಾಷಾ ಶಬ್ದಗಳು ಹೆಚ್ಚಾಗಿ ಬಳಕೆಯಾಗುತ್ತವೆ. ಕನ್ನಡದ ಅಂಕಿಗಳು ಯಾರು ಕೂಡಾ ತಪ್ಪಿಯೂ ಉಚ್ಛರಿಸುವುದಿಲ್ಲ. ದಿನನಿತ್ಯದ ವ್ಯವಹಾರದಲ್ಲಿ ದಹಾ, ಬೀಸ್, ತೀಸ್, ಚಾಳಿಸ, ಪನ್ನಾಸ್, ಶಂಬೂರ, ಪಾನಸೇ, ಹಜಾರ್, ಲಾಕ್ ಎಂದು ಹಿಂದಿ ಅಂಕಿಗಳು ಹೇಳುತ್ತಾರೆ. ಅದರಂತೆ ಮರಾಠಿ ಶಬ್ದಗಳಾದ ಮಳ (ತೋಟ), ಶಿವಾರ (ಭಾಗ), ಪರಂತು (ಆದರೆ) ಶಬ್ದಗಳು ಬಳಕೆಯಲ್ಲಿವೆ. ತೆಲುಗು ಶಬ್ದಗಳು ಕನ್ನಡದಲ್ಲಿ ಮಿಳಿತವಾಗಿವೆ.

ಈ ತಾಲ್ಲೂಕಿನಲ್ಲಿ ಜನಪದರ ಮಾತುಗಳಲ್ಲಿ ಹೊತ್ರಾಳಿ, ರಜಗಿಲ್, ಸರಿಹೋಗು, ಧತಿಪ್ರಾಂತ ಮೊದಲಾದ ಹಳೆಗನ್ನಡದ ಶಬ್ದಗಳು ಸಾಕಷ್ಟು ದೊರೆಯುತ್ತವೆ. ಒಂದೊಂದು ಶಬ್ದಕ್ಕೆ ಹತ್ತಾರು ಅರ್ಥ ಕೊಡುವ ಮಾತುಗಳು ಕೇಳಿದರೆ ಈ ಜನ ಎಂಥಾ ಮೇದಾವಿಗಳು ಎಂಬ ಕವಿರಾಜ ಮಾರ್ಗಕಾರವ

ನೆನಪಾಗುತ್ತದೆ. ಉದಾ: ಹೆಚ್ಚು ಎಂಬ ಶಬ್ದಕ್ಕೆ ತೊಲ್, ಮನಾರ್, ಅನಗಡ, ಬಕ್ಕುಳ್, ರಗಡ್, ಢಿಗಾರಿ, ದುನ್ಯಾದ್, ಕಂಡಾಬಟ್ಟಿ, ತಪ್ಪಾತಾರ ಮಸ್ತ, ಮನಗಂಡ ಹೀಗೆ ಬಳಸಲಾಗುತ್ತದೆ.

ಉರ್ದುವಿನ ಹಮ್‌ಬಿ, ತುಮ್‌ಬಿ ಎಂಬಂತಹ ಶಬ್ದಗಳು ಕನ್ನಡದ ಮೇಲೆ ಪ್ರಭಾವ ಬೀರಿ ನಾಭೀ, ನೀಭಿ, ಅಂವಭಿ ಎಂಬತಹ ಸರ್ವನಾಮಗಳನ್ನು ಹುಟ್ಟಿಕೊಂಡಿವೆ. ಭಾಷಾ ಶಾಸ್ತ್ರಜ್ಞರು ಇಲ್ಲಿಯ ಭಾಷೆಯ ಬಗ್ಗೆ ಉತ್ತಮ ರೀತಿಯ ಸಂಶೋಧನೆ ಮಾಡಬೇಕಾಗುತ್ತದೆ.

***ಜಾನಪದ ವೈಶಿಷ್ಟ್ಯಗಳು:-***

ಕರ್ನಾಟಕ ಸಾಂಸ್ಕೃತಿಕ ಪರಂಪರೆಗೆ ಹುಮನಾಬಾದ ತಾಲ್ಲೂಕಿನ ಕೊಡುಗೆ ಸಾಕಷ್ಟಿದೆ. ಅದರಲ್ಲಿಯೂ ಜನಪದ ಸಾಹಿತ್ಯದ ಹುಲ್ಲುಗಾವಲಾಗಿ ಜನರ ಕಣ್ಣುಕುಕ್ಕಿಸುತ್ತದೆ. ಇಲ್ಲಿಯ ಪ್ರಸಿದ್ಧ ತತ್ವ ಪದಕಾರರಾದ ದುಮ್ಮನಸೂರಿನ ಸಿದ್ಧ ಪ್ರಭುಗಳು ಸಾವಿರಗಟ್ಟಲೇ ತತ್ವ ಪದಗಳು ರಚಿಸಿದ್ದು ಶಿಶುನಾಳ ಷರೀಫರ ನೆನಪನ್ನು ಮರುಕಳಿಸುತ್ತಾರೆ. ಅವರು ರಚಿಸಿದ ಭೂ ಕೈಲಾಸ ಮತ್ತು ಚಂದ್ರ ಶಿರೋಮಣಿ ಎಂಬ ಸಣ್ಣಾಟಗಳು ಈಗಾಗಲೇ ಪ್ರಟಕಗೊಂಡಿವೆ. ಅವರ ತತ್ವ ಪದಗಳ ಸಂಕಲನ ಪ್ರಕಟವಾಗುವ ಹಂತದಲ್ಲಿದೆ. ಅದೇ ರೀತಿ ನಿಡವಂಚಿ ಗ್ರಾಮದ ಭದ್ರೇಶ್ವರರ ಅನುಭವ ಪದಗಳ ಸಂಕಲನ ಪ್ರಕಟಗೊಂಡಿದೆ. ಚಿಟಗುಪ್ಪಾದ ಶಿಲ್ಲಪ್ಪಾ ಭುತಾಳೆ ಕವಿಯ ಬದುಕು ಬರಹ ಗ್ರಂಥ ಹೊರಬಂದಿದೆ. ಅದೇ ಗ್ರಾಮದ ಮಂಕಲ ಹಣಮಂತಪ್ಪನವರ ತತ್ವ ಪದಗಳ ಸಂಗ್ರವೊಂದು ಆಚ್ಚಾಗುತ್ತಿದೆ. ಈ ಸಂಗ್ರಹಗಳು ಸಾಹಿತ್ಯದ ದೃಷ್ಟಿಯಿಂದ ಅದ್ವಿತಿಯವಾಗಿವೆ.

ಹುಮನಾಬಾದ ತಾಲ್ಲೂಕು ಜನಪದ ಸಾಹಿತ್ಯದ ಕಣಜ. ಈ ಭಾಗದ ಹಾಡುಗಳಲ್ಲಿ ಮುಖ್ಯವಾಗಿ ಗರತಿಯ ಹಾಡಿನ ತ್ರಿಪದಿಗಳು, ಹಂತಿ ಹಾಡುಗಳು, ಮೋಹರಂ ಪದಗಳು, ದನಬೆಳಗುವ ಹಾಡುಗಳು, ಸೀಗಿ, ಗೌರಿ ಹಾಗೂ ಸಂಪ್ರದಾಯದ ಹಾಡುಗಳಿಗೆ ಪ್ರಸಿದ್ಧವಾಗಿವೆ. ಸಣ್ಣಾಟಗಳು ಹಾಗೂ ದೊಡ್ಡಾಟಗಳು ಈ ಭಾಗದಲ್ಲಿ ಸಾಕಷ್ಟು ಆಡುತ್ತಾರೆ. ದಕ್ಷಿಣ ಕನ್ನಡದ ಯಕ್ಷಗಾನಕ್ಕೆ ಸರಿಸಮಾನವಾದ ದೊಡ್ಡಾಟವು ಈ ಭಾಗದಲ್ಲಿ ತುಂಬಾ ಜನಪ್ರೀಯ ಜನಪದ ಗೀತೆ. ಆದರೆ ದುರ್ದೈವದಿಂದ ಶಿವರಾಂ ಕಾರಂತರಂತಹ ಸಾಹಿತಿಗಳು ಇಲ್ಲಿ ಹುಟ್ಟಿಕೊಂಡಿಲ್ಲ. ಮಂಗಲಗಿಯ ನನ್ನಾ ಸಾಹೇಬನಂತಹ ಲಾವಣಿಕಾರ ಈ ತಾಲ್ಲೂಕಿನಲ್ಲಿ ಹುಟ್ಟಿಕೊಂಡು ನಾಗೇಶಿ(ಹೆಣ್ಣಿನ ಪಕ್ಷ) ಯಂತಹ ಪದಗಳು ರಚಿಸಿದ್ದಾನೆ. ಕೈಯಲ್ಲಿ ಡಪ್ಪು ಹಿಡಿದು ಬಾರಿಸಲು ಪ್ರಾರಂಭಿಸಿದರೆ ಹಗಲು ರಾತ್ರಿಗಳು ಅವನಿಗೆ ಸಾಲುತ್ತಿರಲಿಲ್ಲ. ಇಂತಹ ಹಾಡುಗಳು ಎಚ್. ಕಾಶಿನಾಥರೆಡ್ಡಿಯವರು ಪ್ರಥಮವಾಗಿ ಸಂಗ್ರಹಿಸಿದ್ದಾರೆ.

ದೊಡ್ಡಾಟದಲ್ಲಿ ಪ್ರಸಿದ್ದವಾದವುಗಳೆಂದರೆ ಸೈರೇಂದ್ರಿ, ಕೀಚಕವಧ ಕನಕಾಂಗಿ ಕಲ್ಯಾಣ, ಪಾಂಡವ ಪ್ರತಾಪ, ಐರಾವಣ ಮಹಿರಾವಣ ಸತ್ಯ ಹರಿಶ್ಚಂದ್ರ, ಕೃಷ್ಣಾರ್ಜುನ ಕಾಳಗ ಮೊದಲಾದವುಗಳು ದೊಡ್ಡಾಟದಲ್ಲಿ ಗಂಗಾಳ ಮಂಟಪ, ತಿರುಗು ಮಂಟಪಗಳು ರಚಿಸಿ ಅಂತಹ ಅಟ್ಟಗಳ ಮೇಲೆ ಬೆಳಗಾಗುವವರೆಗೆ ಕುಣಿತ ಮಣಿತಗಳು, ಹಾಸ್ಯ ಶೃಂಗಾರ ವೀರರಸಗಳು ಪ್ರದರ್ಶಿತವಾಗುತ್ತಿದ್ದವು. ಡಾ: ಸಿದ್ದರಾಮ ಪೋಲಿಸ್ ಪಾಟೀಲರ ಪ್ರಕಾರ ಈ ಭಾಗದಲ್ಲಿ ಸುಮಾರು ಎರಡುನೂರು ಬಯಲಾಟಗಳು ದೊರೆಯುತ್ತವೆ ಎಂಬ ಮಾತು ಎಂತಹವರಿಗೂ ಆಶ್ಚರ್ಯವುಂಟು ಮಾಡುತ್ತವೆ. ಇಂತಹ ಜಾನಪದ ಶ್ರೀಮಂತಿಕೆ ಈ ಭಾಗ ಪಡಿದಿದೆ ಎಂದರೆ ನಮ್ಮ ಪ್ರಾಚೀನ ರಸಿಕತೆಗೆ ಬೆರಗಾಗಬೇಕು.

ಹಳ್ಳಿ ಹಳ್ಳಿಗಳಲ್ಲಿ ಹೆಣ್ಣು ಮಕ್ಕಳು ತೋಟ ಗದ್ದೆಗಳಲ್ಲಿ ಕೆಲಸ ಮಾಡುತ್ತಿರುವಾಗ ಗುಂಪಾಗಿ ಹಾಡುವುದು. ರೈತ ಮೊಟ್ಟೆ (ಕಪಲ) ಹೊಡೆಯುವಾಗ ಹಾಡುವುದು, ಧಾನ್ಯ ಕುಟ್ಟುವಾಗ, ಬೀಸುವಾಗ ಹಾಡುವುದು ಸಾಮಾನ್ಯ ದೃಶ್ಯ ಈ ಭಾಗದ್ದಾಗಿದೆ. ಸಂದ್ರದಾಯದ ಹಾಡುಗಳೂ ನೂರಾರು ಸಂಖ್ಯೆಯಲ್ಲಿ ಹಾಡುವ ಅನೇಕ ಹೆಣ್ಣು ಮಕ್ಕಳು ಈ ತಾಲ್ಲೂಕಿನಲ್ಲಿದ್ದಾರೆ. ಬೀದರ ಜಿಲ್ಲೆಯ ವಿಶಿಷ್ಟ ಕಲೆಯಾದ ಭೂತೆರಾಟವು ಈ ತಾಲ್ಲೂಕನಲ್ಲಿ ಇದೆ. ಹತ್ತಾರು ತಂಡಗಳು ಈ ಕಲೆಯನ್ನು ಪ್ರದರ್ಶಿಸುತ್ತವೆ. ಈ ತಾಲ್ಲೂಕಿನ ಗಡವಂತಿ ಗ್ರಾಮದಲ್ಲಿ ಕರಡಿ ಮಜಲು, ಕಲ್ಲೂರ ಗ್ರಾಮದಲ್ಲಿ ಚಿಟ್ಟಹಲಿಗೆ ಮೇಳಗಳು ಇವೆ. ಶೃಂಗಾರರಸ ಪ್ರಧಾನವಾದ ಹೋಳಿ ಹಾಡುಗಳನ್ನು, ಕೋಲಿನ ಪದಗಳನ್ನು ಊರೂರಲ್ಲಿ ಕೇಳಬಹುದು.

ಹುಮನಾಬಾದ ತಾಲ್ಲೂಕಿನ ಹುಡುಗಿ ಗ್ರಾಮದ ಶ್ರೀಮತಿ ಮಲ್ಲಮ್ಮಾ ಹಾಗೂ ಶ್ರೀಮತಿ ಕಲ್ಲಮ್ಮರ ಜನಪದ ಹಾಡುಗಳಿಗೆ ಮೆಚ್ಚದವರೇ ಇಲ್ಲ. ಇವರಿಬ್ಬರೂ ಗುಲಬರ್ಗಾ ಆಕಾಶವಾಣಿಯಿಂದ ಸುಮಾರು 10 ವರ್ಷಗಳಿಂದ ತಮ್ಮ ಕಂಠದಾನ ಮಾಡುತ್ತ ಬಂದಿದ್ದಾರೆ. ಒಂದೆರಡು ಸಲ ಜಾನಪದ ಸಾಹಿತಿ ಎಚ್. ಕಾಶಿನಾಥರೆಡ್ಡಿಯವರ ನೇತೃತ್ವದಲ್ಲಿ ಬೆಂಗಳೂರು ದೂರದರ್ಶನದಿಂದ ಹಾಡುಗಳು ಬಿತ್ತರಿಸಿದ್ದಾರೆ. ಈ ತಾಲ್ಲೂಕಿನಲ್ಲಿ ಗೊಂದಲಿ ಕಲೆಯು ತುಂಬಾ ಪ್ರಸಿದ್ದಿ ಪಡೆದಿದೆ. ಮಾಣಿಕನಗರ, ಜಲಸಂಗಿ, ಚಿಟಗುಪ್ಪಾ, ಹುಮನಾಬಾದಗಳಲ್ಲಿ ಈ ಜನರ ತಂಡಗಳಿವೆ. ಹಳ್ಳಿಗಳಲ್ಲಿ ಪುರಾಣ, ಶಾಸ್ತ್ರಗಳ ಆಲಿಸುವಿಕೆ. ಪಂಚಾಂಗ ನೋಡುವದು ಇನ್ನೂ ಜೀವಂತವಾಗಿದೆ. ಸೂತ್ರದ ಗೊಂಬೆಯಾಟ, ತೊಗಲು ಗೊಂಬೆಯಾಟದ ಕಲಾವಿದರು ಈ ತಾಲ್ಲೂಕಿನ ಮಂಗಲಗಿ ಹಾಗೂ ನಾಗನ ಕೇರಿಯಲ್ಲಿದ್ದಾರೆ. ಆದರೆ ವಿಜ್ಞಾನ ಅವಿಷ್ಕಾರಗಳಿಂದ ಜನಪದ ಕಲೆಗಳು ಹಿಂದೆ ಸರಿಯುತ್ತಿವೆ. ಇಂದಿನ ಪೀಳಿಗೆಗೆ ಅದರಲ್ಲಿ ಆಸಕ್ತಿ ಕಡಿಮೆಯಾಗುತ್ತಿರುವುದು ದುರದೃಷ್ಟಕರ ಸಂಗತಿ.

***<u>ಅಧ್ಯಾತ್ಮ ರಂಗಕ್ಕೆ ಕೊಡುಗೆ:-</u>***

ಹುಮನಾಬಾದ ತಾಲ್ಲೂಕಿಗೆ ಅಧ್ಯಾತ್ಮ ಸಂಪತ್ತಿನ ಕೊರತೆಯಿಲ್ಲ. ಪ್ರಾಚೀನ ಅರ್ವಾಚೀನ ಕಾಲದ ಶರಣ ಸಂತರಿಂದ ಪಾವನಗೊಂಡ ನಾಡು. ಸಂತರಾದ ಮಾಣಿಕಪ್ರಭುಗಳು, ಕರಕನಳ್ಳಿಯ ಗಂಗಾಧರ ಬಕ್ಕಪ್ರಭುಗಳು ತಮ್ಮ ಪವಾಡಗಳಿಂದ ಸಾಮಾಜಿಕ ಪರಿಸರವನ್ನು ಶುದ್ಧಗೊಳಿಸಿದ ಮಹಂತರು. ಆರೋಢ ಮತವನ್ನೇ ಅಂಗೀಕರಿಸಿ ದೈಹಿಕ ಸುಖವನ್ನೂ ತೊರೆದು. ಜ್ಞಾನ ಸಾಮ್ರಾಜ್ಯಕ್ಕೆ ಹೆಜ್ಜೆಯಿಟ್ಟ ಹುಡುಗಿಯ ಕರಿಬಸವೇಶ್ವರರ ಪವಾಡಗಳು. ಜನಮಾನಸದಲ್ಲಿ ಭಕ್ತಿಯ ಗಂಗಾ ಪ್ರವಾಹವನ್ನುಂಟು ಮಾಡಿವೆ. ಅವರ ಪರಮ ಶಿಷ್ಯರಲ್ಲಿ ಒಬ್ಬರಾದ ವೆಂಕಮ್ಮಾ ತಾಯಿಯು ತಲೆಯ ಮೇಲೆಯೇ ಅನ್ನವನ್ನು ಬೇಯಿಸಿ ಗುರುವಿಗೆ ಪ್ರಸಾದ ಅರ್ಪಿಸಿದ ಪಂಚಶೀಲೆ ಬಂದ ಭಕ್ತ ಜನರಿಗೆ, ನೊಂದವರಿಗೆ, ದೀನದಲಿತರಿಗೆ ಕರುಣೆಯಿಂದ ಕಂಡು ಅವರಿಗೆ ಬಯಸಿದ ವರಗಳನ್ನು ಆಶಿರ್ವದಿಸಿದ ಸಂತ ಬಕ್ಕಪ್ರಭುಗಳು ಗೊಟ್ಟಂಗೊಟ್ಟಿ ಅರಣ್ಯ ಪ್ರದೇಶದಲ್ಲಿ ಘೋರ ತಪಸ್ಸನ್ನಾಚರಿಸಿದವರು.

ಭೂಲೋಕದ ಸ್ವರ್ಗವಾದ ಕಾಶ್ಮಿರವನ್ನು ತೊರೆದು ತನ್ನ ಅರಸೊತ್ತಿಗೆಯನ್ನು ಮಗನಿಗೆ ಒಪ್ಪಿಸಿ ಶರಣ ಸಂಗವನ್ನು ಬಯಸಿ ಬಂದ ಮಹಾದೇವ ಭೂಪಾಲ ಅವನ ರಾಣಿ ಮಹಾದೇವಿ ಕಲ್ಯಾಣಕ್ಕೆ ಬಂದು ಕಟ್ಟಿಗೆ ಕಾಯಕವನ್ನು ಸ್ವೀಕಾರ ಮಾಡಿ ಅನುಭವ ಮಂಟಪದ ಸದಸ್ಯತ್ವವನ್ನು ಪಡೆದ ಶರಣ ಮೋಳಿಗೆ

ಮಾರಯ್ಯನವರ ಗುಹೆಯು ಈ ತಾಲ್ಲೂಕಿನ ಮೋಳಕೇರಾದಲ್ಲಿದೆ. ಕಟ್ಟಿಗೆಯನ್ನೇ ಬಂಗಾರ ಮಾಡಿ ಶರಣ ಸಮೂಹಕ್ಕೆ ಹಂಚಿದ ಮಹಾನ್ ಆತ್ಮಜ್ಞಾನಿ, ಶರಣ ಸರೋಜ, ಭಕ್ತ ಜನ ಶ್ರೇಷ್ಠ ಮೋಳಿಗಯ್ಯಾನವರ ವಚನಗಳು ನವನೀತ. ಅವುಗಳನ್ನು ಅನುಭವಿಸಿಯೇ ಅರಿಯಬೇಕು. ಸಂತ ಮಾಣಿಕ ಪ್ರಭುಗಳ ಅಧ್ಯಾತ್ಮದ ಅಂಗಡಿಯನ್ನೇ ಮಾಣಿಕನಗರದಲ್ಲಿ ಪ್ರಾರಂಭಿಸಿ ಅಧ್ಯಾತ್ಮದ ಹಸಿವುಳ್ಳವರಿಗೆ ಬೇಕಾದುದನ್ನು ಕೊಟ್ಟ ಮಹಂತರು. ಎಲ್ಲಾ ಜಾತಿ ಬಾಂಧವರನ್ನು ಒಂದೇ ಸೂತ್ರದಲ್ಲಿ ಪೋಣಿಸಿದ ಸಕಲ ಮತಾಚಾರ್ಯರು ಸಂಗೀತ ಬೇಡಿದವರಿಗೆ ಸಂಗೀತವನ್ನು ಮುಕ್ತಿ ಮಾರ್ಗ ಬೇಡಿದವರಿಗೆ ಮೊಕ್ಷನ್ನು ಯೋಗ ಸಾಧಕರಿಗೆ ಯೋಗವನ್ನು ಸಂಸಾರಿಗೆ ಪರಮಸುಖವನ್ನು ದಯಪಾಲಿಸಿದ ಕಲಿಯುಗದ ಕಲ್ಪತರು ಶ್ರೀ ಮಾಣಿಕ ಪ್ರಭು.

ಈ ತಾಲ್ಲೂಕಿನ ಘೋಡವಾಡಿ ಗ್ರಾಮದಲ್ಲಿ ಸೂಫಿಸಂತರಾದ ಇಸ್ಮಾಯಿಲ್ ಖಾದ್ರಿಯವರು ಮಹಾನ ಸಂತರು. ಗೋಗಿಯ ಚಂದಾಹುಸೇನಿಯ ಮೊಮ್ಮಗನಾದ ಇಸ್ಮಾಯಿಲ್ ಖಾದ್ರಿ ಬಂದೇನವಾಜರ ಶಿಷ್ಯರು. ಘೋಡವಾಡಿ ಗ್ರಾಮದಲ್ಲಿ ಐಕ್ಯ ಹೊಂದಿ ದೀನದಲಿತರಿಗೆ ತನ್ನ ಲೀಲೆಯನ್ನು ತೋರುತ್ತಿದ್ದಾರೆ. ಹಿಂದೂ ಮುಸ್ಲಿಂ ಐಕ್ಯತೆಯ ಏಕೈಕ ಸ್ಥಾನವೆಂದರೆ ಘೋಡವಾಡಿ ಗ್ರಾಮವಾಗಿದೆ. ಇತ್ತೀಚಿಗೆ ಆಗಿಹೋದ ಧುಮ್ಮನ ಸೂರಿನ ಸಿದ್ದ ಪ್ರಭುಗಳು ನಾವದಗಿಯ ಸಂತ ಶರಣರಾದ ರೇವಪಯ್ಯಾ ಸ್ವಾಮಿಗಳ ಪರಮ ಶಿಷ್ಯರು. ಬಸವ ಭಕ್ತರಾದ, ಬಸವ ಪ್ರೇಮಿಗಳಾದ ರೇವಪ್ಪಯ್ಯಾ ಸ್ವಾಮಿಗಳು ಮಹಾನ ಯೋಗ ಸಾಧಕರು ಅವರ ಅನುಗ್ರಹಕ್ಕೆ ಪಾತ್ರರಾದ ಸಿದ್ಧಪ್ರಭುಗಳು ಸಾವಿರಾರು ತತ್ವ ಪದಗಳು ರಚಿಸಿ ಅಧ್ಯಾತ್ಮ ಪ್ರಪಂಚದಲ್ಲಿ ತೇಲಿ ಬಿಟ್ಟಿದ್ದಾರೆ. ಈ ರೀತಿಯಿಂದ ಕನ್ನಡ ನಾಡಿನ ಅಧ್ಯಾತ್ಮ ರಂಗಕ್ಕೆ ಹುಮನಾಬಾದ ತಾಲ್ಲೂಕಿನ ಕೊಡುಗೆ ಅಪಾರ.

***ಜಾತ್ರೆಗಳು:-***

ಹುಮನಾಬಾದ ನಗರದಲ್ಲಿ ಶ್ರೀ ವೀರಭದ್ರೇಶ್ವರ ಜಾತ್ರೆಯ ಪ್ರತಿವರ್ಷ ಜನೆವರಿ 14ರ ಮಕರ ಸಂಕ್ರಾಂತಿಯಂದು ಪ್ರಾರಂಭವಾಗಿ ಜನವರಿ 25ರಂದು ಅಗ್ನಿಪೂಜೆ ಹಾಗೂ ಜನೆವರಿ 26ರಂದು ರಥೋತ್ಸವ ನೆರವೇರುತ್ತದೆ. ಅಗ್ನಿಪೂಜೆಯ ದಿವಸ ವೀರಭದ್ರನ ಮೆರವಣಿಗೆ ವಾದ್ಯ ವೈಭವದಿಂದ ನಡೆಯುತ್ತದೆ. ನಂದಿಕೋಲು, ಕರಡಿ ಮಜಲು, ಭಜನೆಮೇಳಗಳು ಮೆರವಣಿಗೆಯ ಮುಂದೆ ಇರುತ್ತದೆ. ಪುರವಂತರ ಕುಣಿತ ಒಂದು ಕಡೆಗೆ ನಡೆದರೆ; ಮದ್ದು, ಪಟಾಕಿ, ಘೂಲಝುಡಿ, ಆಕಾಶ ದೀಪ ವಿವಿಧ ಸಿಡಿಮದ್ದಿನ ವಸ್ತುಗಳ ಸಿಡಿಸಲಾಗುತ್ತದೆ.

ಚಾಂಗಲೇರ ವೀರಭದ್ರೇಶ್ವರ ಜಾತ್ರೆಯು ಬಹು ವಿಜೃಂಭಣೆಯಿಂದ ನಡೆಯುತ್ತದೆ. ಅದರಂತೆ ಡಿಸೆಂಬರ್ ತಿಂಗಳಲ್ಲಿ ಮಾಣಿಕ ನಗರದಲ್ಲಿ ಸಂತ ಮಾಣಿಕ ಪ್ರಭುಗಳ ಜಾತ್ರೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಸಂಗೀತಗಾರರು ಬರುತ್ತಾರೆ. ಹಿಂದಿ ಚಲನಚಿತ್ರಗಳ ಸಂಗೀತ ದಿಗ್ಗಜರು ಈ ಜಾತ್ರೆಗೆ ಬಂದು ಹೋಗಿದ್ದಾರೆ. ಆಂಧ್ರ ಪ್ರದೇಶ, ಮಹಾರಾಷ್ಟ್ರದ ಭಕ್ತರ ಸಂಖ್ಯೆ ಹೆಚ್ಚಾಗಿರುತ್ತದೆ. ಜಾತ್ರೆಗೆ ಬಂದ ಜನರಿಗೆ ಅನ್ನದಾಸೋಹ ಏರ್ಪಡಿಸುತ್ತಾರೆ.

ಈ ತಾಲ್ಲೂಕಿನ ಕರಕನಳ್ಳಿಯಲ್ಲಿ ಸಂತರಾದ ಗಂಗಾಧರ ಬಕ್ಕ ಪ್ರಭುಗಳ ಜಾತ್ರೆ ಚಿಟಗುಪ್ಪಾದಲ್ಲಿ ಮಡಿವಾಳೇಶ್ವರ ಜಾತ್ರೆ, ಗೌಳಿಗ ಜನಾಂಗದ ಸಂತರಾದ ಬಾಳೋಬಾ ಮಹಾರಾಜರ ಜಾತ್ರೆ ಹಾಗೂ ರಾಮಪೂರದ ರಾಮಲಿಂಗೇಶ್ವರ ಜಾತ್ರೆಗಳು ನಡೆಯುತ್ತವೆ. ನಿರ್ಣಾ ಗ್ರಾಮದಲ್ಲಿ ಗುತ್ತಿಬಸವೇಶ್ವರ ಜಾತ್ರೆ,

ಉಡಬಾಳದಲ್ಲಿ ಎಲ್ಲಮ್ಮ ದೇವಿಯ ಜಾತ್ರೆಗಳು ನಡೆಯುತ್ತವೆ. ಹಿಂದುಳಿದ ಗುಡ್ಡಗಾಡು ಜನಾಂಗವಾದ ಲಮಾಣಿ ಜಾತಿಯ ದೇವರಾದ ಶ್ರೀದೇವಿ ಜಾತ್ರೆಯು ಇಲ್ಲಿಯ ಕಠಳ್ಳಿ ಗ್ರಾಮದ ಹತ್ತಿರ ಬಯಲು ಸ್ಥಳದಲ್ಲಿ ನಡೆಯುತ್ತದೆ. ಈ ಜಾತ್ರೆಗೆ ಬೇರೆ ಬೇರೆ ಜಿಲ್ಲೆಗಳಿಂದ ಭಕ್ತ ಜನರು ಬಂದು ಹರಕೆ ಸಲ್ಲಿಸಿ ಹೋಗುತ್ತಾರೆ.

ಮುಸ್ಲಿಂ ಹಾಗೂ ಹಿಂದೂ ಜನರ ಸಮನ್ವಯ ಕೇಂದ್ರವೆನಿಸಿದ ಘೋಡವಾಡಿಯಲ್ಲಿ ಹಜರತ್ ಇಸ್ಮಾಯಿಲ್ ಖಾದ್ರಿಯ ದೇವರ ಹೆಸರಿನಲ್ಲಿ ಖಂದೋರಿ ರಾಜಾರೋಷವಾಗಿ ನಡೆಯುತ್ತದೆ. ಇದಲ್ಲದೆ ಈ ತಾಲ್ಲೂಕಿನ ಹಣಕುಣಿಯಲ್ಲಿ ಲಕ್ಷ್ಮಿ ದೇವಿಯ ಕಾರ್ಯ ಭರದಿಂದ ಮೂರು ವರ್ಷಕ್ಕೊಮ್ಮೆ ನಡೆಸುತ್ತಾರೆ. ಜಾತ್ರೆಗಳು ಹಳ್ಳಿಯ ಜನರಿಗೆ ಮನರಂಜನೆ ಒದಗಿಸುತ್ತವೆ. ಜಾತ್ರೆಯಲ್ಲಿ ಸಿನೀಮಾಗಳು, ನಾಟಕಗಳು, ಸರ್ಕಸ್‌ಗಳು ತಿಂಗಳವರೆಗೆ ಕ್ಯಾಂಪ ಮಾಡಿ ಸುತ್ತಮುತ್ತಲಿನ ಹಳ್ಳಿಯ ಜನಕ್ಕೆ ಸಂತೋಷ ಒದಗಿಸುತ್ತದೆ. ಹಳ್ಳಿಯ ಜನರು ಜಾತ್ರೆಗಳಿಗೆ ಎತ್ತಿನ ಬಂಡಿಗಳು ಕಟ್ಟಿಕೊಂಡು ಬಂದು ಒಂದೆರಡು ದಿವಸ ಮುಕ್ಕಾಂ ಹೂಡಿ ಜಾತ್ರೆಯ ಆನಂದ ಅನುಭವಿಸುತ್ತಾರೆ.

ಈ ತಾಲ್ಲೂಕಿನಲ್ಲಿ ನಾಟಕಕಾರರು–ಜನಪದ ಸಾಹಿತಿಗಳು, ತತ್ವಪದಕಾರರು ಬಹಳಷ್ಟು ಇರುವದರಿಂದ ಈ ಎಲ್ಲಾ ಮಾಧ್ಯಮಗಳು ಹೆಚ್ಚು ಕನ್ನಡದಲ್ಲಿ ನಡೆದಿರುವದರಿಂದಲೆ ಇಲ್ಲಿ ಕನ್ನಡ ಚಟುವಟಿಕೆಗಳು ಸ್ವತಂತ್ರ ಪೂರ್ವದಿಂದಲೂ ನಡೆದಿದೆ. ಇದರಲ್ಲಿ. ಶ್ರೀ ಎಚ್. ಕಾಶಿನಾಥ ರೆಡ್ಡಿ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಹುಮನಾಬಾದ ತಾಲೂಕಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಯಶಸ್ವಿಯಾಗಿ ನಡೆಯಿಸಿದರು. ಸಮ್ಮೇಳನಾಧ್ಯಕ್ಷರಾಗಿ ಬಂಡೆಪ್ಪಾ ಬೂಬಾಯವರನ್ನು ಮಾಡಲಾಯಿತು. ಪ್ರೊ.ಮಟ್ಟಿ ಕ.ಸಾ.ಪ. ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಇವಾಗ ಪ್ರಸ್ತುತ ಅಧ್ಯಕ್ಷ ವೀರಂತ ರೆಡ್ಡಿ ಜಂಪಾರವರು ಅಧ್ಯಕ್ಷರಾದ ಮೇಲೆ ಎರಡು ವಲಯ ಕಸಾಪ ಸಮ್ಮೇಳನಗಳು ನಡೆಯಿಸಿ ತಾಲ್ಲೂಕಾ ಸಮ್ಮೇಳನವನ್ನು ಘಾಟಬೋರಾಳದಲ್ಲಿ ನಡೆಯಿಸಲು ತಿರ್ಮಾನಿಸಿದ್ದಾರೆ. ಶಾಲೆಗೊಂದು ಕಾರ್ಯಕ್ರಮಗಳು ಬಹಳ ಚುರುಕಾಗಿ ನಡೆಯಿಸುತ್ತಿದ್ದಾರೆ. ಶ್ರೀಯುತರು ಇಲ್ಲಿಯವರೆಗೆ ಒಂದು ವರ್ಷದಲ್ಲಿ 22 ಕಾರ್ಯಕ್ರಮ ನಡೆಸಿದ್ದಾರೆ. ಇವರು ಇನ್ನೂ ಹೆಚ್ಚು ಕನ್ನಡ ಕಾರ್ಯಕ್ರಮ ಜರುಗಿಸುವ ಯೋಜನೆಗಳ ಹಾಕಿಕೊಂಡಿದ್ದಾರೆ.

ಈ ತಾಲ್ಲೂಕಿನಲ್ಲಿ ಪೂಜ್ಯ ಮೈತ್ರಾದೇವಿ, ಚೆನ್ನಮಲ್ಲೇಶ್ವರ ತ್ಯಾಗಿ ಇಟಗಾ, ಅಕ್ಕ ಅನ್ನಪೂರ್ಣ ಹಂಗರಗಿ, ಡಾ: ಸೋಮನಾಥ ಯಾಳವಾರ, ಬಸವರಾಜ ತಂಬಾಕೆ, ಶಾಂತಪ್ಪ ಧಡಿಮಾಳ, ಶಿವಸ್ವಾಮಿ ಚಿನಕೇರಾ, ಕಲ್ಲಪ್ಪ ದೇವಣಿ, ಮುಂತಾದವರಿಂದ ಇಲ್ಲಿವರೆಗೆ ಸಾವಿರಾರು ಧಾರ್ಮಿಕ ಕಾರ್ಯಕ್ರಮಗಳು ಕನ್ನಡದಲ್ಲಿ ನಡೆಯಿಸುತ್ತಿರುವುದರಿಂದ ಪ್ರತಿ ಹಳ್ಳಿಯಲ್ಲಿಯೂ ಕನ್ನಡ ಜಾಗೃತಿಯನ್ನುಂಟು ಮಾಡುವಲ್ಲಿ ಸಹಕಾರಿಯಾಗಿವೆ.

*ಮನರಂಜನೆ:–*

ಜನರ ಮನರಂಜನೆಗಾಗಿ ಹುಮನಾಬಾದ ನಗರದಲ್ಲಿ ಎರಡು ಚಿಟಗುಪ್ಪಾದಲ್ಲಿ ಒಂದು ಸಿನೆಮಾ ಮಂದಿರಗಳಿವೆ. ಪ್ರತಿ ಹಬ್ಬ ಹುಣ್ಣಿಮೆ ಸಂದರ್ಭದಲ್ಲಿ ಹಳ್ಳಿಹಳಲ್ಲಿ ಕೋಲಾಟ, ಭಜನೆ ಹಾಗೂ ಸಣ್ಣಾಟಗಳು ಜನರಿಗೆ ಮನರಂಜನೆ ಒದಗಿಸುತ್ತವೆ ಎಲ್ಲಮ್ಮ ದೇವಿಯ ಭೂತೆರಾಟ ಪ್ರತಿ ಊರಿನಲ್ಲಿ ನೋಡ ಸಿಗುತ್ತದೆ. ಮಂಗಲಗಿ, ಬೋರಾಳ ಗ್ರಾಮಗಳು ಗೀಗಿ ಪದಗಳು ಜನ ಏಕಚಿತ್ತದಿಂದ ಕೇಳುತ್ತದೆ. ಡೊಂಬರಾಟ, ತೊಗಲು ಗೊಂಬೆ ಆಟಗಳು ಈ ತಾಲ್ಲೂಕಿನಲ್ಲಿವೆ. ದೇವರ ಹೆಸರಿನಲ್ಲಿ ಅಗ್ನಿಹಾಯುವದು, ಸಂದಿಕೋಲು

ಹಿಡಿಯುವುದು, ನೆಲ ಅಳೆಯುವುದು, ಎಲ್ಲಮ್ಮ ದೇವಿಗೆ ಕೊಡ ಹೊದೆಯುವುದು ಇಲ್ಲಿ ಸರ್ವೆ ಸಾಮಾನ್ಯ ಮನರಂಜನೆಗಳಾಗಿವೆ. ದೇವರ ಹೆಸರಿನಲ್ಲಿ ಹೇಳಿಕೆ ಕೇಳಿಕೆಗಳು ನಡೆಯುತ್ತವೆ. ಪ್ರತಿ ಅಮವಾಸ್ಯೆಯಂದು ಗುಂಡ ಮುಳುಗುವ ವ್ರತವನ್ನು ಅನೇಕ ಹಳ್ಳಿಗರು ಆಚರಿಸುತ್ತಾರೆ.

ಹುಮನಾಬಾದ ತಾಲ್ಲೂಕಿನ ಮುತ್ತಂಗಿ ಗ್ರಾಮದ ಶ್ರೀ ಗುರುಪಾದೇಶ್ವರ ವೃತ್ತಿ ನಾಟಕ ಸಂಘವು ಪ್ರತಿಯೊಂದು ಜಾತ್ರೆಯಲ್ಲಿ ಕ್ಯಾಂಪ ಮಾಡಿ ಸಾಮಾಜಿಕ ಹಾಗೂ ಪೌರಾಣಿಕ ನಾಟಕಗಳನ್ನು ಪ್ರದರ್ಶಿಸುತ್ತದೆ. ನಿರ್ಣಾ ವಾಡಿಯ ಬಹುರೂಪಿ ಜನಾಂಗದವರು ಹಗಲು ವೇಷಗಳನ್ನು ತೊಟ್ಟು ಜನಮನರಂಜಿಸುತ್ತಾರೆ. ಈ ಜನಾಂಗದ ಏಕನಾಥ ಬಹುರೂಪಿಯನ್ನು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿಯು ಪ್ರಸಿದ್ಧ ಕಲಾಕಾರನೆಂದು ಗುರುತಿಸಿ ರಾಜ್ಯ ಪ್ರಶಸ್ತಿಯನ್ನಿತ್ತು ಗೌರವಿಸಿದೆ. ನಾಟಕ ಅಕಾಡೆಮಿಯು ಕೂಡ ಈತನಿಗೆ ರಾಜ್ಯ ಪ್ರಶಸ್ತಿ ನೀಡಿದೆ. ಈ ತಾಲ್ಲೂಕಿನಲ್ಲಿ ಒಂದು ಕಾಲಕ್ಕೆ ಪ್ರಸಿದ್ಧ ಕುಸ್ತಿ ಪಟುಗಳಿದ್ದರು. ಬೋರಂಪಳ್ಳಿಯ ಅರ್ಕಿ ಶಿವರಾಯನು ಕುಸ್ತಿ ಪಟುಗಳ ಗುರುವಾಗಿದ್ದನು. ಈಗಲೂ ಹುಮನಾಬಾದ ವೀರಭದ್ರೇಶ್ವರ ಜಾತ್ರೆಯಲ್ಲಿ ಕುಸ್ತಿ ಕ್ರೀಡೆ ತಪ್ಪದೆ ನಡೆಯುತ್ತದೆ. ರಾಮಪುರ ಜಾತ್ರೆಯಲ್ಲಿಯೂ ಇದನ್ನು ನೋಡಬಹುದು.

***ಸಾರಿಗೆ-ಸಂಪರ್ಕ:-***

ಪ್ರಾಚೀನ ಕಾಲದಲ್ಲಿ ಹಳ್ಳಿಯಿಂದ ಹಳ್ಳಿಗಳಿಗೆ ಮಾರ್ಗಗಳು ಸರಿಯಾಗಿಲ್ಲದ ಕಾರಣ ಜನರು ಕಾಲುನಡೆಯಿಂದ ಅಥವಾ ಕುದುರೆ, ಎತ್ತಿನ ಬಂಡಿಗಳ ಮುಖಾಂತರ ಪ್ರಯಾಣಿಸುತ್ತಿದ್ದರು. ಕೆಲವು ಕಡೆ ಒಂಟೆಗಳು ಪ್ರಯಾಣದ ಸಾಧನಗಳಾಗಿದ್ದವು. ಬೀದರ ಜಿಲ್ಲೆಯ ಔರಾದ ತಾಲ್ಲೂಕ ಒಂದರಲ್ಲಿ ಮಾತ್ರ ಒಂಟೆಗಳು ಬಳಸುತ್ತಾರೆ. ಉಳಿದೆಲ್ಲಾ ಭಾಗಗಳಲ್ಲಿ ಎತ್ತಿನ ಬಂಡಿಗಳೇ ಪ್ರಮುಖ ಸಾರಿಗೆ ಸಾಧನಗಳಾಗಿವೆ. ಈ ತಾಲ್ಲೂಕಿನಲ್ಲಿ ಸುಮಾರು 4000 ಸಾವಿರ ಎತ್ತಿನ ಬಂಡಿಗಳಿವೆ. ಇತ್ತೀಚಿಗೆ ಇವುಗಳ ಸ್ಥಾನ ಟ್ರ್ಯಾಕ್ಟರಗಳು ವಹಿಸುತ್ತಿವೆ. ಮೊದಲು ಹೆದ್ದಾರಿಗಳು, ರಾಜ್ಯ ರಸ್ತೆಗಳು, ಜಿಲ್ಲಾ ರಸ್ತೆಗಳು, ಗ್ರಾಮೀಣ ರಸ್ತೆಗಳು ತುಂಬಾ ಕಡಿಮೆಯಾಗಿದ್ದವು. ಆದರೆ ಈಗ ಪ್ರಧಾನ ಮಂತ್ರಿ ಗ್ರಾಮೀಣ ಸಡಕ್ ಯೋಜನೆ ಬಂದ ನಂತರ ಪ್ರತಿಯೊಂದು ಹಳ್ಳಿಗಳ್ಳಿಗೆ ಉತ್ತಮ ರಸ್ತೆಗಳು ನಿರ್ಮಿಸಲಾಗುತ್ತಿದೆ.

ಈ ತಾಲ್ಲೂಕಿನಲ್ಲಿ ರಾಷ್ಟ್ರೀಯ ಹೆದ್ದಾರಿಯು ಹಾಯ್ದು ಹೋಗಿದೆ. ಆದ್ದರಿಂದ ಹೈದ್ರಾಬಾದ್ ಹಾಗೂ ಮುಂಬಯಿಗಳಿಗೆ ಸಂಪರ್ಕವುಂಟಾಗಿದೆ. ಅದೇ ರೀತಿ ರಾಜ್ಯ ರಸ್ತೆಗಳು, ಜಿಲ್ಲೆಯ ರಸ್ತೆಗಳು ಸಾಕಷ್ಟು ಅಭಿವೃದ್ಧಿ ಹೊಂದಿ ಪ್ರತಿಯೊಂದು ಊರಿಗೆ ಸಂಪರ್ಕ ಕಲ್ಪಿಸಿದೆ. ಹುಮನಾಬಾದ ನಗರದಿಂದ ದೇಶದ ಇನ್ನಿತರ ಭಾಗಗಳಿಗೆ ಸುಲಭವಾಗಿ ಪ್ರಯಾಣಿಸಬಹುದಾಗಿದೆ. ಸಾರಿಗೆ ಸಂಪರ್ಕದಲ್ಲಿ ಈ ನಗರ ಕೇಂದ್ರ ಸ್ಥಾನವಾಗಿದೆ. ಇಲ್ಲಿಂದ ನಮ್ಮ ರಾಜಧಾನಿ ಬೆಂಗಳೂರಿಗೆ ನೇರ ಸಂಪರ್ಕವಿದೆ.

ಹುಮನಾಬಾದ ತಾಲ್ಲೂಕಿನ ಹೆಚ್ಚಿನ ಜನರು ಹೆಚ್ಚಾಗಿ ಬಳಸುವ ವಾಹನವೆಂದರೆ ಸೈಕಲ್. ಹಳ್ಳಿಗಳಲ್ಲಿ ಮನೆಗೊಂದು ಸೈಕಲಗಳು ಇವೆ. ಈ ವಾಹನ ಹೊಲಗದ್ದೆಗಳಿಗೆ ಹೋಗಲು, ವ್ಯಾಪಾರಕ್ಕಾಗಿ ಬೇರೆ ಊರಿಗೆ ಹೋಗಲು ಉಪಯೋಗಿಸುವರು. ಆದರೆ ಇತ್ತೀಚಿಗೆ ಟಿ.ವಿ.ಎಸ್.ಗಳು, ಲೂನಾಗಳು ಹಾಗೂ ಮೋಟಾರ ಸೈಕಲುಗಳು ಗಣನೀಯ ಪ್ರಮಾಣದಲ್ಲಿ ಬಳಸಲಾಗುತ್ತಿದೆ. 1999ರ ಗಣತಿಯ ಪ್ರಕಾರ ಈ ತಾಲ್ಲೂಕಿನಲ್ಲಿ ಮೋಟಾರ ಸೈಕಲಗಳ ಸಂಖ್ಯೆ 2900, ಕಾರುಗಳ ಸಂಖ್ಯೆ 50, ಆಟೋರಿಕ್ಷಾಗಳ ಸಂಖ್ಯೆ 140, ಸರಕು

ಸಾಗಿಸುವ ವಾಹನಗಳು 340, ಇತರ ವಾಹನಗಳು 680 ರಷ್ಟು ಇವೆ. ಈ ತಾಲ್ಲೂಕಿನ ಶ್ರೀಮಂತ ವರ್ಗದವರು ಕಾರುಗಳನ್ನು ಬಳಸುತ್ತಾರೆ. ಜನಸಾಮಾನ್ಯರು ಸರಕಾರಿ ಬಸ್ಸುಗಳು, ಖಾಸಗಿ ವಾಹನಗಳು ಮುಖಾಂತರ ಪ್ರಯಾಣಿಸುತ್ತಾರೆ. 1956ರ ಮೊದಲು ಈ ಪ್ರದೇಶದಲ್ಲಿ ಹೈದ್ರಾಬಾದ ರಾಜ್ಯದ ರಸ್ತೆ ಸಾರಿಗೆ ವ್ಯವಸ್ಥೆ ಇತ್ತು. ಆಗ ಹುಮನಾಬಾದನಲ್ಲಿ ಒಂದು ಡಿಪೋ ಇತ್ತು. ಇದು ರಾಜ್ಯ ರಸ್ತೆ ಸಾರಿಗೆಯ ಒಂದು ಭಾಗವಾಗಿ ರಾಯಚೂರು ವಿಭಾಗದ ಅಧೀನದಲ್ಲಿ ಕೆಲವು ದಿವಸ ಉಳಿದು 1960ರಲ್ಲಿ ಈ ವಿಭಾಗವನ್ನು ರಾಯಚೂರಿನಿಂದ ಗುಲಬರ್ಗಾ ವಿಭಾಗಕ್ಕೆ ಸ್ಥಲಾಂತರಿಸಲಾಯಿತು. 1961ರ ನವೆಂಬರ ತಿಂಗಳಿನಿಂದ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಸ್ಥಾಪನೆಯಾದಾಗಿನಿಂದ ಹುಮನಾಬಾದ ಡಿಪೋ ಒಂದೇ ಬೀದರ ಜಿಲ್ಲೆಯ ಬಸ್ ಕಾರ್ಯಗಾರ ಸ್ಥಳವಾಗಿತ್ತು. 18 ವರ್ಷಗಳ ಹಿಂದೆ ಬೀದರ ನಗರದಲ್ಲಿಯೂ ಒಂದು ಕಾರ್ಯಾಗಾರ ಪ್ರಾರಂಭವಾಗಿದೆ.

ಎರಡು ವರ್ಷ ಹಿಂದೆ ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನು ಬಲಪಡಿಸಲು ಮತ್ತು ಸಾರ್ವಜನಿಕರಿಗೆ ಹೆಚ್ಚಿನ ಸಾರಿಗೆ ಸೇವೆಯನ್ನು ಒದಗಿಸುವ ನಿಟ್ಟಿನಲ್ಲಿ ಕರ್ನಾಟಕ ಸರಕಾರವು ಹೈದ್ರಾಬಾದ ಕರ್ನಾಟಕ ಜಿಲ್ಲೆಗಳಿಗಾಗಿ ಒಂದು ಪ್ರತ್ಯೇಕ ಸಾರಿಗೆ ನಿಗಮವನ್ನು ರಚಿಸಿ ಆಸ್ತಿತ್ವಕ್ಕೆ ತರಲಾಯಿತು. ಸಂಸ್ಥೆ ಪ್ರಾರಂಭಗೊಂಡಾಗ 1852 ಬಸ್‌ಗಳೊಂದಿಗೆ ಪ್ರತಿನಿತ್ಯ 11273 ಟ್ರಿಪ್‌ಗಳನ್ನು ಆಚರಿಸಿ 5.42 ಲಕ್ಷ ಕಿ.ಮಿ.ಗಳ ಆಚರಣೆ ಮಾಡಲಾಗುತ್ತಿತ್ತು. ಪ್ರತಿದಿನ ಸರಾಸರಿ 8 ಲಕ್ಷ ಪ್ರಯಾಣಿಕರಿಗೆ ಸಾರಿಗೆ ವ್ಯವಸ್ಥೆ ಕಲ್ಪಿಸಲಾಗುತ್ತಿತ್ತು. ಆದರೆ ಪ್ರತ್ಯೇಕ ಸಂಸ್ಥೆಯನ್ನು ರಚಿಸಿದ ಕೇವಲ ಎರಡು ವರ್ಷಗಳಲ್ಲಿ ಈ ಸಂಸ್ಥೆಯಲ್ಲಿ 2252 ಬಸ್ಸಗಳೊಂದಿಗೆ ಪ್ರತಿದಿನ 13297 ಟ್ರಿಪಗಳನ್ನು ಆಚರಿಸುತ್ತಾ ದಿನಂಪ್ರತಿ 6.98 ಲಕ್ಷ ಕಿ.ಮಿ.ಗಳನ್ನು ಆಚರಣೆ ಮಾಡಲಾಗುತ್ತಿದೆ. ಪ್ರತಿ ದಿನ ಸರಾಸರಿ 8.50 ಜನ ಸಂಖ್ಯೆಗೆ ಸಾರಿಗೆ ಸೌಲಭ್ಯ ಒದಗಿಸಲಾಗಿದೆ.

ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ಚಾಲಕರ ತರಬೇತಿ ಕೇಂದ್ರ ಹುಮನಾಬಾದ ನಗರದಿಂದ 1 ಕಿ.ಮಿ. ಅಂತರದಲ್ಲಿದೆ. ಒಂದು ಕೋಟಿ ರೂ. ವೆಚ್ಚದಲ್ಲಿ 25 ಎಕರೆ ಜಮೀನಿನಲ್ಲಿ ಅತ್ಯಾಧುನಿಕ ತರಬೇತಿ ಶಾಲೆಯನ್ನು ನಿರ್ಮಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಇದೇ ಕೇಂದ್ರ ಪ್ರಥಮ ಸುಸಜ್ಜಿತವಾದ ಕೇಂದ್ರವೆನಿಸಿದೆ. ಹುಮನಾಬಾದ ತಾಲ್ಲೂಕಿನ ಪ್ರತಿ ಹಳ್ಳಿಗೂ ಬಸ್‌ಗಳು ಓಡಾಡುತ್ತವೆ. ಇದಲ್ಲದೆ ಖಾಸಗಿ ಬಸ್‌ಗಳು, ಟೆಂಪೊಗಳು, ಜೀಪ್‌ಗಳು, ಓಡಾಡುತ್ತವೆ. ಇಲ್ಲಿಯ ಎಲ್ಲಾ ರಸ್ತೆಗಳು ರಾಷ್ಟ್ರೀಕರಣಗೊಂಡಿವೆ. ತಾಲ್ಲೂಕಿನ ಎಲ್ಲ ರಸ್ತೆಗಳ ಒಟ್ಟು ಉದ್ದ 501 ಕಿ.ಮಿ. ಗಳು ಭಾರಿ ಸೇತುವೆಗಳ ಸಂಖ್ಯೆ 4 ಅಲ್ಲಲ್ಲಿ ಚಿಕ್ಕ ಸೇತುವೆಗಳಿವೆ.

ಅಂಚೆ ಮತ್ತು ತಂತಿ ಇಲಾಖೆ ಮುಖ್ಯ ಕಚೇರಿಯು ಹುಮನಾಬಾದ ನಗರದಲ್ಲಿದೆ. ಈ ತಾಲ್ಲೂಕಿನಲ್ಲಿ 56 ಅಂಚೆ ಕಚೇರಿಗಳು 17 ದೂರವಾಣಿ ವಿನಿಮಯ ಕೇಂದ್ರವೂ ಕೂಡ ನಗರದಲ್ಲಿದೆ. ಮನೆ ಮನೆಗಳಲ್ಲಿ ಟೆಲಿವಿಷನ್‌ಗಳು ಇವೇ. ರೇಡಿಯೋಗಳು, ಸಾಕಷ್ಟು ಬಳಕೆಯಲ್ಲಿವೆ. ಈ ತಾಲ್ಲೂಕ ರಾಷ್ಟ್ರೀಯ ಹೆದ್ದಾರಿಯ ಮೇಲೆ ಇರುವುದರಿಂದ ಸಾರಿಗೆ ಸಂಪರ್ಕ ವ್ಯವಸ್ಥೆಯಲ್ಲಿ ಪ್ರಗತಿ ಕಂಡಿದೆ.

*ಸಾಮಾಜಿಕ ಸೇವೆಗಳು:-*

ಈ ತಾಲ್ಲೂಕಿನಲ್ಲಿ ಪ್ರಮುಖವಾದ ಸಹಕಾರ ಸಂಘಗಳಿವೆ. ನೋಂದಣಿಯಾದ ಹಾಗೂ ನೋಂದಣಿ ಆಗದೆ ಇರುವ ಸಂಘ ಸಂಸ್ಥೆಗಳು ಇವೆ. ಸಾರ್ವಜನಿಕ ಹಿತಕ್ಕಾಗಿ ಶ್ರಮಿಸುತ್ತಿರುವ ಹಾಗೂ ಹಿಂದೆ ಶ್ರಮಿಸಿದ ಸಂಸ್ಥೆಗಳಲ್ಲಿ ಪ್ರಮುಖವಾದವುಗಳೆಂದರೆ ಆರ್ಯಸಮಾಜ, ವಿಶ್ವಹಿಂದೂ ಪರಿಷತ್, ಖಾದಿ ಗ್ರಾಮೋದ್ಯೋಗ ಸಂಘ, ವಿವಿದೋದ್ದೇಶ ಸಹಕಾರ ಸಂಘ, ಸರಕಾರಿ ನೌಕರರ ಮನೋರಂಜನ ಸಂಘ, ಯುವಕ ಮಂಡಳಗಳು, ಮಹಿಳಾ ಮಂಡಳಗಳು, ಮಹಿಳಾ ಸ್ವಸಹಾಯ ಗುಂಪುಗಳು ಮೊದಲಾದವು. ಬಸವ ತೀರ್ಥ ವಿದ್ಯಾಪೀಠ, ಸದ್ಬೋಧಿನಿ ಶಿಕ್ಷಣ ಸಂಸ್ಥೆ, ಮಾಣಿಕ ಪ್ರಭು ಶಿಕ್ಷಣ ಸಂಸ್ಥೆ, ವಿವೇಕಾನಂದ ಶಿಕ್ಷಣ ಸಮಿತಿ, ಆಲ್ ಅಮೀನ ಶಿಕ್ಷಣ ಕಾಲೇಜುಗಳು ವೃತಿ ತರಬೇತಿ ಶಾಲೆಗಳು ಪ್ರಾರಂಭಿಸಿವೆ.

ಹುಮನಾಬಾದ ತಾಲ್ಲೂಕು ಪಂಚಾಯತ್ ಆಶ್ರಯದಲ್ಲಿ 170 ಸಹಕಾರಿ ಸಂಘಗಳು, 190 ಯುವಕ ಮಂಡಳಗಳು, ಹಾಗೂ 75 ಮಹಿಳಾ ಮಂಡಳಗಳು ಈ ತಾಲ್ಲೂಕಿನಲ್ಲಿವೆ. ಕೃಷಿ ಸಾಲ ನೀಡುವ ಸಹಕಾರಿ ಸಂಘಗಳು ಒಟ್ಟು 28 ಇರುತ್ತವೆ. ತಾಲ್ಲೂಕಿನಲ್ಲಿ 3 ಚಿತ್ರ ಮಂದಿರಗಳಿವೆ. ನ್ಯಾಯ ಬೆಲೆ ಅಂಗಡಿಗಳಿವೆ. ಮೂರು ನಿಯಂತ್ರಿತ ಮಾರುಕಟ್ಟೆಗಳಿವೆ. ಒಕ್ಕಲಿಗರು ಬೆಳೆದ ಧಾನ್ಯ ಸಾಮಗ್ರಿಗಳು ಮಾರಾಟ ಮಾಡುವುದಕ್ಕೆ ಇಲ್ಲಿ ಅನುಕೂಲವಿದೆ. ಈ ತಾಲ್ಲೂಕಿನಲ್ಲಿ ಒಟ್ಟು 10 ವಾಣಿಜ್ಯ ಬ್ಯಾಂಕ್‌ಗಳು, 6 ಗ್ರಾಮೀಣ ಬ್ಯಾಂಕಗಳು, 10 ಸಹಕಾರ ಬ್ಯಾಂಕಗಳೂ, ಒಂದು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್ ಇರುತ್ತದೆ. ಈ ಬ್ಯಾಂಕ್‌ಗಳ ಮುಖಾಂತರ ರೈತರು ಸಾಲ ಸೌಲಭ್ಯ ಪಡೆದಿರುತ್ತಾರೆ. ಈ ತಾಲ್ಲೂಕಿನಲ್ಲಿ ಅನೇಕ ನೋಂದಾಯಿತ ಲೇವಾದೇವಿ ಸಂಸ್ಥೆಗಳು ಪ್ರಾರಂಭವಾಗಿವೆ.

*ವೈದ್ಯಕೀಯ ಸೇವೆಗಳು:-*

ಈ ತಾಲ್ಲೂಕಿನ ಪ್ರತಿಯೊಂದು ಹಳ್ಳಿಗಳಲ್ಲಿ ನಾಟಿ ಔಷಧಿಗಳ ಬಳಕೆ ಪ್ರಾಚೀನ ಕಾಲದಿಂದಲೂ ಇದೆ. ಹಲವು ಜನಪದ ವೈದ್ಯರು ಇನ್ನೂ ಇಲ್ಲಿ ಕಾಣಸಿಗುತ್ತಾರೆ. ತಾಲ್ಲೂಕಿನ ಮುಖ್ಯ ಸ್ಥಳಗಳಾದ ಹುಮನಾಬಾದ, ಚಿಟಗುಪ್ಪಾ, ಮುನ್ನಾಏಖ್ಖೆಳಿ, ಹಾಗೂ ಘಾಟಬೋರಾಳ ಮೊದಲಾದ ಸ್ಥಳಗಳಲ್ಲಿ ಸರಕಾರಿ ಆಸ್ಪತ್ರೆಗಳಿವೆ. ಒಟ್ಟು 3 ಆಸ್ಪತ್ರೆಗಳು, 7 ಪ್ರಾಥಮಿಕ ಆರೋಗ್ಯ ಘಟಕಗಳು, 7 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಈ ತಾಲ್ಲೂಕಿನಲ್ಲಿವೆ. ಹುಮನಾಬಾದ ನಗರದಲ್ಲಿ ಜರ್ಮನಿಯ ಹಣದ ಸಹಾಯದಿಂದ ಸುಮಾರು 2ಕೋಟಿ ರೂ. ವೆಚ್ಚದಲ್ಲಿ 50 ಹಾಸಿಗೆಗಳ ಆಧುನಿಕ ಸೌಲಭ್ಯಗಳಿಂದ ಕೂಡಿದ ಆಸ್ಪತ್ರೆಯೊಂದನ್ನು ನಿರ್ಮಸಲಾಗಿದೆ. ಈ ಆಸ್ಪತ್ರೆಯಲ್ಲಿ ಅರೆವಳಿಕೆಯ ತಜ್ಞರು, ಮಕ್ಕಳ ವೈದ್ಯರು, ದಂತ ವೈದ್ಯರು ಇದ್ದಾರೆ. ಕುಷ್ಟರೋಗ ನಿಯಂತ್ರಣ ವಿಭಾಗ, ಎಕ್ಸರೇ ವಿಭಾಗ, ಹಾಗೂ ಶಸ್ತ್ರ ಪರೀಕ್ಷಾ ಕೇಂದ್ರಗಳು, ರಕ್ತ ಪರೀಕ್ಷಾ ಕೇಂದ್ರಗಳು ಪ್ರತಿಯೊಂದು ನಗರ ಪ್ರದೇಶಗಳಲ್ಲಿವೆ. ಆರ್.ಎಂ.ಪಿ. ವೈದ್ಯರು ಹಳ್ಳಿಯಿಂದ ಹಳ್ಳಿ ತಿರುಗುತ್ತ ಗ್ರಾಮೀಣ ರೋಗಿಗಳಿಗೆ ಔಷದೋಪಚಾರ ಮಾಡುತ್ತಾರೆ. ಹೆಚ್ಚಿನ ಆರೋಗ್ಯ ಪಡೆಯಲು ಅಥವಾ ವಾಸಿಯಾಗಲು ರೋಗಿಗಳಿಗೆ ಚಿಕಿತ್ಸೆ ಪಡೆಯಲು ಸೋಲ್ಲಾಪೂರ, ಗುಲಬರ್ಗಾ ಅಥವಾ ಹೈದ್ರಾಬಾದ ನಗರಗಳಿಗೆ ಹೋಗುತ್ತಾರೆ.

*ಆಡಳಿತ:-*

ನಿಜಾಮನ ಆಳ್ವಿಕೆಗಿಂತ ಮೊದಲ ಈ ಪ್ರದೇಶವನ್ನು ದೆಹಲಿ ಸುಲ್ತಾನರು ಪರಗಣವನ್ನಾಗಿ ಮಾರ್ಪಡಿಸಿ ಇಲ್ಲಿ ಅಮೀಲರನ್ನು ಹಾಗೂ ಸಿಖ್ಖದಾರರನ್ನು ಅಧಿಕಾರಿಗಳಾಗಿ ನೇಮಿಸಿದ್ದರು. ಇದರ ಕೆಳಗೆ ಮುನ್ಸಿಫ್, ಪೋತ್‌ದಾರ, ಕಾರಕೂನ್, ಖನಂಗೋ ಮುಂತಾದವರು ಅಧಿಕಾರಿಗಳಾಗಿದ್ದರು. ಆಗಿನ ಕಾರಕೂನರೇ ಈಗ ರಿಜಿಸ್ಟಾರ್‌ರಾಗಿ, ಖನಂಗೋಗಳೆ ಇಂದಿನ ರೆವಿನ್ಯೂ ನಿರೀಕ್ಷಣಾಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದಾರೆ. ನಿಜಾಮ ಆಳ್ವಿಕೆಯಲ್ಲಿ ಈ ಆಡಳಿತ ಕ್ರಮವು ಬದಲಾಗಿ ಫಾಯಿಗಾ, ಜಹಗೀರ್ ಹಾಗೂ ಸರ್ಫ-ಇ-ಖಾಸ್ ಎಂದು ಆಡಳಿತದ ವಿಭಾಗವಾದವು.

ಹುಮನಾಬಾದ ನಗರವು ನಿಜಾಮರ ಸರ್ಫ್-ಇ-ಖಾಸ್ ಆಗಿತ್ತು ಈ ತಾಲ್ಲೂಕಿನ ಪ್ರಮುಖ ಸ್ಥಳಗಳಾದ ಹುಮನಾಬಾದ, ಚಿಟಗುಪ್ಪಾ, ಹಳ್ಳಿಖೇಡ ಮೊದಲಾದವು ಫಾಯಿಗಾಗಳಾಗಿದ್ದವು. ಇನ್ನು ಕೆಲವು ಹಳ್ಳಿಗಳು ಜಹಗೀರಗಳಾಗಿದ್ದವೆಂದು ತಿಳಿದು ಬರುತ್ತದೆ. ಈ ಆಡಳಿತದಲ್ಲಿ ಫಾಯಿಗಾದ ಹಿರಿಯ ಅಧಿಕಾರಿ ನಿಜಾಮನ ತಾಲ್ಲೂಕದಾರ ಅವರ ಕೆಳಗೆ ಶಿರಸ್ತೆದಾರ, ಗಿರಿದಾವರ ಇರುತ್ತಿದ್ದರು. ಗ್ರಾಮದ ಒಡೆಯ ಅಥವಾ ನ್ಯಾಯಾಧೀಶರು ಪಟೇಲರಾಗಿದ್ದರು. 1905ರಲ್ಲಿ ಗುಲಬರ್ಗಾವು ವಿಭಾಗೀಯ ಸ್ಥಳವಾಯಿತು. ಬೀದರ ಜಿಲ್ಲೆಯನ್ನು ಈ ವಿಭಾಗದಲ್ಲಿ ಸೇರಿಸಲಾಯಿತು. ಈ ವಿಭಾಗದ ಮುಖ್ಯಸ್ಥನನ್ನು ಸುಭೆದಾರ ಎಂದು ಕರೆಯುತ್ತಿದ್ದರು. ಜಿಲ್ಲೆಯ ಮುಖ್ಯಸ್ಥರಾಗಿ ನ್ಯಾಯಾಧೀಶರು ಇರುತ್ತಿದ್ದರು. ಇದಲ್ಲದೆ ಜಿಲ್ಲೆಯನ್ನು ಉಪ-ವಿಭಾಗಗಳಾಗಿ ಮಾಡಿ ಆಡಳಿತ ನೋಡಿಕೊಳ್ಳಲು ಎರಡನೆ ಹಾಗೂ ಮೂರನೆ ದರ್ಜೆಯ ತಾಲ್ಲೂಕದಾರರನ್ನು ನೇಮಿಸಿದ್ದರು. ಇವರೆಲ್ಲರೂ ನಿಜಾಮನ ನಿರಂಕುಶ ಪ್ರಭುತ್ವದ ಅಳ್ವಿಕೆಯ ಅಧಿಕಾರಿಗಳು.

ಫಾಯಿಗಾ ತಾಲ್ಲೂಕಿನಲ್ಲಿ ತಾಲ್ಲುಕದಾರರೇ ಹಿರಿಯ ಅಧಿಕಾರಿಯಾಗಿ ಇರುತ್ತಿದ್ದುದರಿಂದ ತನ್ನ ಇಷ್ಟದಂತೆ ತೆರಿಗೆ ಹೇರಿ, ಕಂದಾಯ ವಸೂಲಿ ಮಾಡುವುದಲ್ಲದೆ, ತಾನೆ ಪೋಲಿಸರನ್ನು ನೇಮಿಸಿ, ಕಾಯ್ದೆ ಕಾನೂನುಗಳನ್ನು ಅನುಕೂಲದಂತೆ ಬಳಸಿ ಜನರನ್ನು ಸದಾ ಹಿಡಿತದಲ್ಲಿಟ್ಟುಕೊಳ್ಳುತ್ತಿದ್ದರು. ಹಳ್ಳಿಗರು ಕಂದಾಯ ಕೊಡದಿದ್ದರೆ ತಲೆಯ ಮೇಲೆ ಕಲ್ಲು ಹೇರಿಸಿ ನಿಲ್ಲಿಸುತ್ತಿದ್ದರು. ಹೀಗಾಗಿ ಎಷ್ಟೋ ರೈತರು ಹೊಲಗಳನ್ನು ಬಿಟ್ಟು ಓಡಿ ಹೋಗುತ್ತಿದ್ದರು.

ಜಹಗೀರ ಪದ್ಧತಿಯಲ್ಲಿ ಸರ್ಫ್-ಇ-ಖಾಸ್ ಗ್ರಾಮಗಳಲ್ಲಿ ಪಟೇಲರು, ಮಾಲಿಪಾಟೀಲರ, ಶಾನುಭೋಗರು (ಕುಲಕರ್ಣಿ) ತಾತ್ಕಾಲಿಕ ಅಧಿಕಾರ ನಡೆಸುತ್ತಿದ್ದರೂ ಸಹ ನವಾಬ ಪಟೇಲರ ಹೇಳಿಕೆಯಂತೆ ನಡೆಯುತ್ತಿದ್ದರು. ಹೀಗಾಗಿ ಪಟೇಲರು ಹಾಗೂ ಶಾನುಭೋಗರಿಗೆ ಇಲ್ಲಿ ಬಹಳ ಗೌರವವಿತ್ತು. ಈ ಆಡಳಿತ ಕ್ರಮಗಳಿಂದ ಸುಧಾರಣೆಗಳು ಆಗದಿದ್ದರೂ ಕ್ರಮದ ಜಾರಿ ಬಿಗಿಯಾಗಿತ್ತು. ನಿಜಾಮನ ಪೋಲಿಸ ಪದ್ಧತಿಯ ಪರಿಣಾಮಕಾರಿಯಾಗಿತ್ತು. ಸಬ್ ಇನ್ಸಪೆಕ್ಟರನನ್ನೂ ಆಗ ಆಮೀನ್‌ಸಾಬ ಎಂದು ಕರೆಯುತ್ತಿದ್ದರು. ಈ ರೂಢಿ ಇಲ್ಲಿ ಇನ್ನು ಇದೆ. 1948ರ ಪೋಲಿಸ್ ಕಾರ್ಯಾಚರಣೆಯ ನಂತರ ಈ ಜಹಗೀರ ಪದ್ಧತಿಯನ್ನು ಉರುಳಿಸಿ ಈ ಪ್ರದೇಶವನ್ನು ಮುಕ್ತಗೊಳಿಸಲಾಯಿತು. ಅಂದಿನಿಂದ ಹುಮನಾಬಾದ ಬೀದರ ಜಿಲ್ಲೆಯ ಒಂದು ತಾಲ್ಲೂಕು ಸ್ಥಳವಾಯಿತು. ಕೆಲವು ವರ್ಷಗಳವರೆಗೆ ಬಸವಕಲ್ಯಾಣವು ಈ ತಾಲ್ಲೂಕಿನಲ್ಲಿತ್ತು. (1965 ರವರೆಗೆ).

ಈಗ ಹುಮನಾಬಾದ ತಾಲ್ಲೂಕಿನಲ್ಲಿ 33 ಗ್ರಾಮ ಪಂಚಾಯತಿಗಳು ಎರಡು ನಗರ ಸಭೆಗಳು ಇವೆ. ತಹಸೀಲ್ದಾರ್, ತಾಲೂಕು ಪಂಚಾಯತ ಕಛೇರಿಗಳು ಇವೆ. ಕಂದಾಯ ನಿರೀಕ್ಷಣಾಧಿಕಾರಿಗಳು, ಗ್ರಾಮ ಲೆಕ್ಕಿಗರು, ಗ್ರಾಮ ಸೇವಕರು ಕೆಲಸ ಮಾಡುತ್ತಾರೆ. ತಾಲ್ಲುಕ ಪಂಚಾಯತ್ ವತಿಯಿಂದ ತಾಲ್ಲೂಕಿನ ಅಭಿವೃದ್ಧಿ ಕಾರ್ಯಗಳು ನಡೆಸಲಾಗುತ್ತದೆ. ತಾಲ್ಲೂಕ ಪಂಚಾಯತ್ ಅಧ್ಯಕ್ಷರ ಆದೇಶದಂತೆ ಪ್ರತಿಯೊಂದು ಹಳ್ಳಿಗಳಿಗೆ ಅಧ್ಯತೆಯ ಮೇರೆಗೆ ಸೌಲಭ್ಯಗಳು ಒದಗಿಸಲಾಗುವುದು. ಹಳ್ಳಿಗಳಲ್ಲಿ ಗ್ರಾಮ ಪಂಚಾಯತ್‌ಗಳು ಕಾರ್ಯ ನಿರ್ವಹಿಸುತ್ತವೆ. ಕಂದಾಯ ವಿಭಾಗದ ಕೆಲವು ಭಾಗ ಹಳ್ಳಿಗಳ ಅಭಿವೃದ್ಧಿಗಾಗಿ ವಿನಿಯೋಗಿಸಲಾಗುವುದು.

***ರಾಜಕೀಯ:–***

ಹುಮನಾಬಾದ ತಾಲ್ಲೂಕಿನಲ್ಲಿ ಈ ವರೆಗೆ ಶ್ರೀನಿವಾಸ ಎಖೆಳ್ಳಿಕರ್, ಶಂಕರದೇವ, ಮುರಳಿಧರ ಕಾಮತಿಕರ, ಗೋಪಾಲರಾವ ಮುಡಬಿ, ವಿ.ಎನ್.ಪಾಟೀಲ (2 ಅವಧಿ), ಬಸವರಾಜ ಪಾಟೀಲ ಹುಮನಾಬಾದ (4 ಅವಧಿ) ಮೀರಾಜುದ್ದಿನ್ ಪಟೇಲ್, ಸುಭಾಷ್ ಕಲ್ಲೂರ ಮುಂತಾದವರು ಶಾಸಕರಾಗಿ ಸೇವೆ ಸಲ್ಲಿಸಿದ್ದಾರೆ.

ಬಸವರಾಜ ಪಾಟೀಲ, ಮಿರಾಜುದ್ದೀನ ಪಟೇಲರು ಸಚಿವರಾಗಿ ತಾಲ್ಲೂಕಿನ ಅಭಿವೃದ್ಧಿಗೆ ದುಡಿದಿದ್ದಾರೆ.

***ಕಾನೂನು:–***

ಈ ತಾಲ್ಲೂಕಿನಲ್ಲಿ ಒಂದು ಮುನ್ಸಿಪ್ ನ್ಯಾಯಾಲಯವಿದ್ದು: ಅದು ಹುಮನಾಬಾದನಲ್ಲಿದೆ. ಭೂನ್ಯಾಯ ಮಂಡಳಿ ಭೂವಿವಾದಗಳನ್ನು, ಕಾರ್ಮಿಕ ನ್ಯಾಯಾಲಯವು, ಕಾರ್ಮಿಕರ ಸಮಸ್ಯೆಗಳನ್ನು ಬಗೆಹರಿಸುತ್ತಿವೆ. ಈ ಕೋರ್ಟಿನ ಬಲಭಾಗದಲ್ಲಿ ಒಂದು ಉಪ–ಕಾರಾಗೃಹವಿದೆ. ಈ ಕಾರಾಗೃಹದ ಸಿಬ್ಬಂದಿ ಹಾಗೂ ಪೋಲಿಸ ಸಿಬ್ಬಂದಿಗೆ ಪ್ರತ್ಯೇಕ ಗೃಹಗಳನ್ನು ನಿರ್ಮಿಸಿಕೊಡಲಾಗಿದೆ. ಇಲ್ಲಿ ಇಂದು ಡಿ.ವೈ.ಎಸ್ಪಿ. ಕಛೇರಿಯೂ ಎರಡು ಸರ್ಕಲ್ ವಲಯಗಳು ಇದ್ದು ಐದು ಪೋಲಿಸ ಠಾಣೆಗಳಿವೆ ಕಾನೂನು ನೆರವು ಸಮಿತಿ ಇದೆ. ವಕೀಲರ ಸಂಘವೊಂದು ಇದ್ದು ಅದು ನ್ಯಾಯಕ್ಕಾಗಿ ಸದಾ ಹೆಣಗುತ್ತದೆ.

***ಪುರಸಭೆ:–***

ಹುಮನಾಬಾದ ತಾಲ್ಲುಕಿನಲ್ಲಿ ಹುಮನಾಬಾದ ಮತ್ತು ಚಿಟಗುಪ್ಪಾ ಎರಡು ಪಟ್ಟಣಗಳಿವೆ. ಇಲ್ಲಿ ಪುರಸಭೆಗಳಿವೆ. ಈ ಪುರಸಭೆಗಳ ಸದಸ್ಯರು ಜನರಿಂದ ನೇರವಾಗಿ ಚುನಾಯಿತರಾಗುವರು. ಹದಿನೆಂಟು ವರ್ಷ ಮೇಲ್ಪಟ್ಟ ಸ್ತ್ರಿ–ಪುರುಷರು ಮತ ಚಲಾಯಿಸುವರು. ಹೀಗೆ ಆರಿಸಲ್ಪಟ್ಟ ಸದಸ್ಯರ ಸಂಖ್ಯೆ ಪ್ರತಿ ಪುರಸಭೆಯಲ್ಲಿ ಇರುವುದು. ಇದರಲ್ಲಿ ಬಹುಮತ ಪಕ್ಷದ ಸದಸ್ಯರಲ್ಲಿ ಒಬ್ಬರು ಪುರಸಭಾಧ್ಯಕ್ಷರು ಹಾಗೂ ಒಬ್ಬರು ಉಪಾಧ್ಯಕ್ಷರಾಗುವವರು. ಆದರೆ ಇತ್ತಿಚಿಗೆ ಸರಕಾರ ಅಧ್ಯಕ್ಷ–ಉಪಾಧ್ಯಕ್ಷ ಸ್ಥಾನಗಳಿಗೆ ಮೀಸಲಾತಿ ನಿಗದಿ ಪಡಿಸುತ್ತಿದೆ. ಅವಧಿಯಲ್ಲಿ ಅರ್ಧ ಮುಗಿದ ನಂತರ ಅಧ್ಯಕ್ಷ ಹಾಗೂ ಉಪಾಧ್ಯಕ್ಷರು ಬದಲಾಗುತ್ತಾರೆ. ಪುರಸಭೆಗೆ ಸಂಬಂಧಿಸಿದ ಯಾವುದೇ ಸಭೆಯಲ್ಲಿ ಅಧ್ಯಕ್ಷರು ಹಾಜರಿರುವರು. ಪ್ರತಿ ಸಭೆಯಲ್ಲಿ ಎಲ್ಲಾ

ಸದಸ್ಯರ ಬಹುಮತ ಪಡೆದು ಅಭಿವೃದ್ಧಿ ಕಾರ್ಯಗಳು ಮಾಡಬೇಕಗುತ್ತದೆ. ಪಟ್ಟಣದ ಸ್ವಚ್ಛತೆ, ನಲ್ಲಿ ನೀರಿನ ಪೂರೈಕೆ, ಒಳ ಚರಂಡಿ ಯೋಜನೆಗಳು, ಪಟ್ಟಣದಲ್ಲಿಯ ರಸ್ತೆಗಳ ದುರಸ್ತಿ, ಸಾರ್ವಜನಿಕ ಕಕ್ಕಸ್ಸು ಮೂತ್ರಿಗಳ ನಿರ್ಮಾಣ, ರಸ್ತೆ ದೀಪಗಳ ವ್ಯವಸ್ಥೆ, ಗ್ರಂಥಾಲಯ, ಉದ್ಯಾನವನ ಮುಂತಾದ ಕಾರ್ಯಗಳನ್ನು ಕೈಕೊಂಡು ಸದಾ ನಾನಾ ಮುಖದ ಅಭಿವೃದ್ಧಿಯೊಂದಿಗೆ, ಆರೋಗ್ಯ ಪೂರ್ಣ ಪರಿಸರ ಸ್ಥಿತಿಯನ್ನು ಕಾಯ್ದುಕೊಂಡು ಹೋಗುವುದು ಪುರಸಭೆಯ ಮುಖ್ಯ ಕೆಲಸ. ಪುರಸಭಾ ಸಮಿತಿಯೊಂದಿಗೆ ಸರ್ಕಾರದ ಮುಖ್ಯ ಅಧಿಕಾರಿಯೂ ಹಾಗೂ ಹಲವು ಬಗೆಯ ಸರಕಾರಿ ನೌಕರರೂ ಇರುವರು. ಪಟ್ಟಣದ ರಥ ಮೈದಾನದಲ್ಲಿ ಹುಮನಾಬಾದ ಪುರಸಭೆಯ ಎರಡಂತಸ್ತಿನ ಕಟ್ಟಡವು ನಿರ್ಮಾಣವಾಗಿ ನಿಂತಿದೆ. ಉದ್ಘಾಟನೆಗಾಗಿ ಕಾಯುತ್ತಿದೆ.

***ಅಭಿವೃದ್ಧಿ ಕಾರ್ಯಗಳು:-***

ತಾಲ್ಲೂಕು ಪಂಚಾಯತ ಹಾಗೂ ಪುರಸಭೆಯ ವತಿಯಿಂದ ಇಲ್ಲಿಯವರೆಗೆ ಸುಮಾರು 11,000 ನಿವೇಶನಗಳನ್ನು ವಿತರಿಸಲಾಗಿದೆ. ಅಲ್ಲದೆ ಕುಡಿಯುವ ನೀರಿನ ಪೂರೈಕೆಗಾಗಿ 1000 ಕೊಳವೆ ಬಾವಿಗಳು ತೋಡಿಸಲಾಗಿದ್ದು, 500ಕ್ಕೂ ಹೆಚ್ಚು ಗೋಬರ ಅನಿಲಯಂತ್ರಗಳ ಸ್ಥಾಪನೆ ಮಾಡಲಾಗಿದೆ. ಹೀಗೆ ಗ್ರಾಮಗಳ ಸರ್ವತೋಮುಖ ಅಭಿವೃದ್ದಿಗಾಗಿ ಮುನ್ನಡೆ ಸಾಧಿಸಲಾಗುತ್ತಿದೆ.

ರೆವಿನ್ಯೂ ಇಲಾಖೆಯು ಈ ತಾಲ್ಲೂಕಿನಲ್ಲಿ 2606 ಅಂಗವಿಕಲರನ್ನು ಗುರುತಿಸಿ ನೆರವು ನೀಡಿದೆ. 4740 ಜನರಿಗೆ ವೃದ್ಧಾಪ್ಯ ವೇತನವನ್ನು, 3903 ವಿಧವೆಯರಿಗೆ ಮಾಶಾಸನವನ್ನು ಮಂಜೂರು ಮಾಡಲಾಗಿದೆ. ಇದಲ್ಲದೆ ತಾಲ್ಲೂಕು ಪಂಚಾಯತ್ ಸರಕಾರದ ಯೋಜನೆಯ ಪ್ರಕಾರ ತಾಲ್ಲೂಕಿನ ಬೇರೆ ಬೇರೆ ಊರುಗಳಲ್ಲಿ 310 ಅಸ್ತ್ರ ಒಲೆಗಳನ್ನು ಪ್ರಯೋಗಾತ್ಮಕವಾಗಿ ಬಳಸಿ ಯಶಸ್ವಿಗೊಳಿಸಿದ್ದಲ್ಲದೆ. ಸುಮಾರು 478 ಜನ ಬಾಣಂತಿಯರಿಗೆ ಹೆರಿಗೆ ಭತ್ಯ ಮಂಜೂರು ಮಾಡಿದೆ. ಅನೇಕ ಹಳ್ಳಿಗಳಲ್ಲಿ ಸಮುದಾಯ ಭವನಗಳು, ಅಂಗನವಾಡಿ ಶಾಲೆಗಳನ್ನು, ವಿದ್ಯಾರ್ಥಿ ನಿಲಯಗಳನ್ನು ನಿರ್ಮಿಸಿ ಹಲವಾರು ಸೌಕರ್ಯಗಳನ್ನು ಒದಗಿಸಿದೆ. ಬಡಜನರಿಗೆ ಮನೆಕಟ್ಟಿಕೊಳ್ಳಲು ತಗಡು, ಬಾಗಿಲು, ಕಿಟಕಿ ಹಾಗೂ ಕಟ್ಟಿಗೆಗಳು ಒದಗಿಸಿವೆ. ಈ ತಾಲ್ಲೂಕಿನ ಎಲ್ಲಾ ಹಳ್ಳಿಗಳಿಗೆ ವಿದ್ಯುತ್ ಶಕ್ತಿ ಸೌಕರ್ಯ ಒದಗಿಸಲಾಗಿದೆ.

**ಸಹಕಾರ:**

ಸಹಕಾರ ಆಂದೋಲನ ಈ ತಾಲ್ಲೂಕಿನಲ್ಲಿ ಚೆನ್ನಾಗಿ ನಡೆದಿದೆ. ಎಲ್ಲ ವಿಧವಾದ ಸಹಕಾರ ಸಂಘಗಳು ಒಟ್ಟು 170 ಇವೆ. ಅವುಗಳಲ್ಲಿ 88 ಸಂಘಗಳು ಕೃಷಿ ಸಾಲ ನೀಡಿಕೆಯಲ್ಲಿ ತೊಡಗಿದರೆ 82 ಇತರ ಸಹಕಾರ ಸಂಘಗಳಿವೆ. ಕೃಷಿ ಸಾಲ ನೀಡಿಕೆ ಸಹಕಾರ ಸಂಘಗಳು 1999ರಲ್ಲಿ ರೈತರಿಗೆ ಕೊಟ್ಟ ಅಲ್ಪಾವಧಿ ಸಾಲ 1362 ಲಕ್ಷಗಳು, ಹಾಗೂ ಮಧ್ಯಾವಧಿ ಸಾಲ 257 ಲಕ್ಷಗಳಿಗೂ ಮೀರಿದೆ. 1999ರಲ್ಲಿ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು 44 ಫಲಾನುಭವಿಗಳಿಗೆ 29 ಲಕ್ಷ ರೂ.ಗಳು ಸಾಲ ಮಂಜೂರು ಮಾಡಿ ಸಹಕರಿಸಿವೆ. ಇದಲ್ಲದೆ ಕೃಷಿ ಅಭಿವೃದ್ಧಿಗಾಗಿ ರಾಷ್ಟ್ರಕೃತ ಬ್ಯಾಂಕುಗಳು ಸಹಕಾರ ನೀಡುತ್ತಿವೆ. ಹೈನುಗಾರಿಕೆಗಾಗಿ ಎಮ್ಮೆಗಳು, ಮಾಂಸಕ್ಕಾಗಿ ಕುರಿಗಳು, ಆಡುಗಳು ಖರೀದಿಸಲು ಬ್ಯಾಂಕು ಸಾಲದ ರೂಪದಲ್ಲಿ ರೈತರಿಗೆ ಹಾಗೂ ಮಧ್ಯಮ

ವರ್ಗದವರಿಗೆ ಸಹಕಾರ ನೀಡುತ್ತಿದೆ. ಈ ತಾಲ್ಲೂಕಿನಲ್ಲಿ ಚಿಟಗುಪ್ಪಾ, ದುಬಲಗುಂಡಿ, ಹಳ್ಳಿಖೇಡ (ಬಿ) ಗಳಲ್ಲಿ ನೇಕಾರ ಸಹಕಾರ ಸಂಘಗಳು ನೇಕಾರರಿಗೆ, ಅವರ ಕಾಯಕ ಅಭಿವೃದ್ಧಿಗೊಳ್ಳಲು ಸಾಕಷ್ಟು ಶ್ರಮಿಸುತ್ತಿವೆ.

***ಮೀನುಗಾರಿಕೆ:***

ಈ ತಾಲ್ಲೂಕಿನ ಹಳ್ಳಿಖೇಡ(ಕೆ), ಕಟ್ಟಳ್ಳಿ, ಶೆಡೋಳ, ಜಲಸಂಗಿ, ಸಿಂಧನಕೇರಾ, ಹುಣಸಗೇರಾ, ಘೋಡವಾಡಿ, ಹಂದಿಕೇರಾ, ಚೀನಕೇರಾಗಳಲ್ಲಿ ಕೆರೆಗಳು ಇದ್ದರೂ ಕೂಡಾ ಅವು ಬೇಸಿಗೆಯಲ್ಲಿ ಬತ್ತಿ ಹೋಗುವುದರಿಂದ ಮೀನು ಸಾಕಾಣಿಕೆಗೆ ಸಹಕಾರಿಯಾಗಿಲ್ಲ. ಅಲ್ಲದೆ ಇಲ್ಲಿ ಸಣ್ಣ ಪುಟ್ಟ ಹಳ್ಳಗಳು ಕೇವಲ ಮಳೆಗಾಲದಲ್ಲಿ ಮಾತ್ರ ನೀರಿನಿಂದ ಕೂಡಿರುತ್ತವೆ. ಅವು ದನ-ಕರುಗಳಿಗೆ ಮಾತ್ರ ಉಪಯೋಗವಾಗಿರುವವು. ಹೀಗಾಗಿ ಈ ತಾಲ್ಲೂಕಿನಲ್ಲಿ ಮೀನುಗಾರಿಕೆಯ ಉಪಕಸಬು ಇಲ್ಲ. ಮತ್ತು ಮೀನುಗಾರರ ಕುಟುಂಬಗಳೂ ಇಲ್ಲ. ಮಳೆಯ ಪ್ರಮಾಣ ಹೆಚ್ಚಾಗಿ 12 ತಿಂಗಳು ಕೆರೆಗಳಲ್ಲಿ ನೀರುಳಿದರೆ ಮಾತ್ರ ಮೀನಿನ ಹಲವಾರು ತಳಿಗಳನ್ನು ಬೆಳೆಸಬಹುದು.

**ಮುನ್ನೋಟ:-**

ಒಟ್ಟಿನಲ್ಲಿ ಈ ನಾಡು ಶರಣ ಸಂಸ್ಕೃತಿಯ ಪ್ರಭಾವ ಹೊತ್ತು, ಸಕಲ ಮತ, ಪಂಥದ ಏಕತೆಯ ನಡಿಗೆಯಲ್ಲಿ ಪ್ರಗತಿ ಪಥದಲ್ಲಿ ಮುಂದುವರೆಯುತ್ತಿದೆ. ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುವ ಈ ತಾಲ್ಲೂಕು ಐತಿಹಾಸಿಕ ಹಾಗೂ ಧಾರ್ಮಿಕ ಕ್ಷೇತ್ರವೆನಿಸಿದೆ. ಇಲ್ಲಿ ಕೈಗಾರಿಕೆಗಳು ಪ್ರಾರಂಭವಾಗಿವೆ. ಆರ್ಥಿಕ ಅಭಿವೃದ್ಧಿಯತ್ತ ತಾಲ್ಲುಕು ಹೆಜ್ಜೆ ಹಾಕುತ್ತಿದೆ. ಬೀದರ ಗುಲಬರ್ಗಾ ರೈಲು ಮಾರ್ಗ ಈ ತಾಲ್ಲೂಕಿನ ಮುಖಾಂತರವಾಗಿ ಹಾದು ಹೋಗುವುದರಿಂದ ಆರ್ಥಿಕ ಅಭಿವೃದ್ಧಿಗೆ ಇನ್ನಷ್ಟು ಕುಮ್ಮಕ್ಕು ದೊರೆಯಲಿದೆ.

# ಹುಮನಾಬಾದ ತಾಲ್ಲೂಕಾ ಸಾಹಿತಿಗಳು

1. ಅರ್ಜುನ ಹೆಚ್
2. ಈರಣ್ಣಾ ಚನ್ನಗೀರಿ
3. ಈಶ್ವರರಾವ ಕರುಣಾಸಾಗರ
4. ಕಾಶಿನಾಥ ರೆಡ್ಡಿ ಎಚ್
5. ನರೇಶ ಹಮಿಲಪೂರಕರ (ದರ್ದ)
6. ಬಂಡೆಪ್ಪಾ ಖೂಬಾ (ಸರಸ್ವತಿತನಯಜಿಮ್ಮ)
7. ಬಸ್ಸಪ್ಪ ಜಿ ಬಾವಗೆ
8. ಶಿವಕುಮಾರ ಎಂ. ಲಕ್ಕಾ
9. ಶಿವಸ್ವಾಮಿ
10. ಸಿದ್ಧಯ್ಯಾ (ಆಧುನಿಕ ಒಡೆಯರ)
11. ವೈಜಿನಾಥ ಪಾಟೀಲ
12. ವೆಂಕಟರೆಡ್ಡಿ ಕೊಪ್ಪಗೀರ

ಹುಮನಾಬಾದ ತಾಲ್ಲೂಕಿನ ಪಂಚಾಯತಗಳು ಮತ್ತು ಅವುಗಳಲ್ಲಿ ಬರುವ ಗ್ರಾಮಗಳು

| ಕ್ರ.ಸಂ. | ಪಂಚಾಯತ ಹೆಸರು | ಗ್ರಾಮಗಳ ಹೆಸರು |
|---|---|---|
| 1 | ಬೇಮಳಖೇಡಾ | ಬೇಮಳ ಖೇಡಾ |
| 2 | ಉಡಮನಳ್ಳೀ | ಉಡಮನಲ್ಲಿ, ಕಾರಕಪಳ್ಳಿ, ಕರಕನಳ್ಳಿ, ಸೈದಾಪೂರ |
| 3 | ಚಾಂಗ್ಲೇರ | ಚಾಂಗ್ಲೇರ, ಪೋಲಕಳ್ಳಿ, ದೇವಗೀರ, ಅಲ್ಲಿಪುರ |
| 4 | ಮೀನಕೇರಾ | ಮೀನಕೇರಾ, ಬೋರಾಳ, ಬಶೀರಾಪುರ |
| 5 | ಮನ್ನಾಏಖ್ಖೇಳಿ | ಮನ್ನಾಏಖ್ಖೇಳಿ, |
| 6 | ನಿರ್ಣಾ | ನಿರ್ಣಾ |
| 7 | ಮುತ್ತಂಗಿ | ಮುತ್ತಂಗಿ, ಭಾದ್ರಾಪುರ, ಮದರಗಿ |
| 8 | ಮುಸ್ತಾರಿ | ಮುಸ್ತಾರಿ |
| 9 | ಉಡಬಾಳ | ಉಡಬಾಳ |
| 10 | ಬೆಳಕೇರಾ | ಬೆಳಕೇರಾ, ಶಾಮತಾಬಾದ, ಮಾಡಗೂಳ, ಬನ್ನಹಳ್ಳಿ |
| 11 | ಮಂಗಲಗಿ | ಮಂಗಲಗಿ, ನಾಗನಕೇರಾ |
| 12 | ತಾಳಮಡಗಿ | ತಾಳಮಡಗಿ, ಕಂದಗೂಳ |
| 13 | ಸೀತಾಳಗೇರಾ | ಸೀತಾಳಗೇರಾ, ನಿಂಬೂರ, ಮಿರಖಲ್ ಶಕ್ಕರಗಂಜ, ಬೋತಗಿ |
| 14 | ಡಾಕುಳಗಿ | ಡಾಕುಳಗಿ, ಹಿಲಾಲಪುರ, ಅಮಿರಾಬಾದ, ಸಿಂದಬಂದಗಿ, ಅತಿವಾಳ |
| 15 | ಹಳ್ಳಿಖೇಡ(ಬಿ) | ಹಳ್ಳಿಖೇಡ(ಬಿ), |
| 16 | ಬೇನಚಿಂಚೋಳಿ | ಬೇನಚಿಂಚೋಳಿ, ಕಬಿರಾಬಾದ, ನಾಮದಾಪೂರ |
| 17 | ಮದರಗಾಂವ | ಮದರಗಾಂವ, ಮಲ್ಕಾಪುರ, ವಡ್ಡನಕೇರಾ, ಅಲ್ಲುರ, ಹಿಪ್ಪರಗಾ |

| | | |
|---|---|---|
| 18 | ನಂದಗಾಂವ | ನಂದಗಾಂವ, ಕಪ್ಪರಗಾಂವ |
| 19 | ಹುಡುಗಿ | ಹುಡುಗಿ |
| 20 | ದುಬಲಗುಂಡಿ | ದುಬಲಗುಂಡಿ |
| 21 | ಸುಲ್ತಾನಬಾದ | ಸುಲ್ತಾನಬಾದ, ಕುಮಾರಚಿಂಚೋಳಿ, ಮುಗನೂರ |
| 22 | ಘೋಡವಾಡಿ | ಘೋಡವಾಡಿ, ಹಂದಿಕೇರಾ, ಹುಣಸನಾಳ |
| 23 | ಘಾಟಬೋರಾಳ | ಘಾಟಬೋರಾಳ |
| 24 | ಚೆಂದನಹಳ್ಳಿ | ಚೆಂದನಹಳ್ಳಿ, ಓತಗಿ, ಸೋನಕೇರಾ |
| 25 | ಸೇಡೋಳ | ಸೇಡೋಳ,ಚೀನಕೇರಾ, ಜಲಸಂಗಿ, ವರವಟ್ಟಿ(ಕೆ) |
| 26 | ಕನಕಟ್ಟಾ | ಕನಕಟ್ಟಾ, ಹುಣಸಗೇರಾ |
| 27 | ಧುಮ್ಮನಸೂರ | ಧುಮ್ಮನಸೂರ |
| 28 | ಮಾಣಿಕನಗರ | ಮಾಣಿಕನಗರ, ಗಡವಂತಿ, ಮೋಳಕೇರಾ |
| 29 | ಸಿಂಧನಕೇರಾ | ಸಿಂಧನಕೇರಾ, ಹಣಕುಣಿ |
| 30 | ಇಟಗಾ | ಇಟಗಾ, ರಾಮಪೂರ, ಮುದನಾಳ, ವಳಖಂಡಿ |
| 31 | ಕೊಡಂಬಲ | ಕೊಡಂಬಲ |
| 32 | ಕಲ್ಲೂರ | ಕಲ್ಲೂರ, ಕಟ್ಟಳ್ಳಿ, ಬೋರಂಪಳ್ಳಿ |
| 33 | ಹಳ್ಳಿಖೇಡ(ಕೆ) | ಹಳ್ಳಿಖೇಡ(ಕೆ), ಚಿತ್ತಕೋಟ, ಮುಸ್ತಾಪೂರ |

# ಹುಮನಾಬಾದ ತಾಲ್ಲೂಕಿನ ಪಕ್ಷಿ ನೋಟ

| | | |
|---|---|---|
| 1 | ವಿಸ್ತೀರ್ಣ | 985.23 ಚ.ಕಿ.ಮಿ. |
| 2 | ಜನಸಂಖ್ಯೆ | 2,94,413 |
| 3 | ಗಂಡಸರು | 1,50,914 |
| 4 | ಹೆಂಗಸರು | 1,43,499 |
| 5 | ವಾರ್ಷಿಕ ಸರಾಸರಿ ಮಳೆ | 582.4 ಮಿಮಿ. |
| 6 | ಹೋಬಳಿಗಳು | 6 |
| 7 | ಜನವಸತಿ ಇರುವ ಗ್ರಾಮಗಳು | 82 |
| 8 | ಜನವಸತಿ ಇಲ್ಲದ ಗ್ರಾಮಗಳು | 3 |
| 9 | ಗ್ರಾಮ ಪಂಚಾಯತಿಗಳು | 33 |
| 10 | ಪುರಸಭೆಗಳು | 2 |
| 11 | ಅರಣ್ಯ ಪ್ರದೇಶ | 9321 ಹೆಕ್ಟೆರಗಳು |
| 12 | ಶಿಶು ವಿಹಾರ | 11 |
| 13 | ಅಂಗನಾವಾಡಿ | 211 |
| 14 | ಕಿರಿಯ ಪ್ರಾಥಮಿಕ ಶಾಲೆಗಳು | 33 |
| 15 | ಹಿರಿಯ ಪ್ರಾಥಮಿಕ ಶಾಲೆಗಳು | 152 |
| 16 | ಪ್ರೌಢ ಶಾಲೆಗಳು | 31 |
| 17 | ಕಿರಿಯ ಕಾಲೇಜುಗಳು | 11 |
| 18 | ಹಿರಿಯ ಕಾಲೇಜುಗಳು | 2 |
| 19 | ವೃತ್ತಿ ಶಿಕ್ಷಣ ಶಾಲೆಗಳು | 2 |

| | | |
|---|---|---|
| 20 | ಡೆಂಟಲ ಕಾಲೇಜುಗಳು | 1 |
| 21 | ಫಾರ್ಮಸಿ ಕಾಲೇಜುಗಳು | 1 |
| 22 | ಎಲ್ಲಾ ವಿಧದ ಸಹಕಾರ ಸಂಘಗಳು | 170 |
| 23 | ನೊಂದಣಿಯಾದ ಕಾರ್ಖಾನೆಗಳು | 20 |
| 24 | ಅಂಚೆ ಕಛೇರಿಗಳು | 56 |
| 25 | ತಂತಿ ಕಛೇರಿಗಳು | 17 |
| 26 | ಚಲನಚಿತ್ರ ಮಂದಿರಗಳು | 3 |
| 27 | ಪೋಲಿಸ್ ಠಾಣೆಗಳು | 5 |
| 28 | ವಾಣಿಜ್ಯ ಬ್ಯಾಂಕುಗಳು | 10 |
| 29 | ಸಹಕಾರಿ ಬ್ಯಾಂಕುಗಳು | 10 |
| 30 | ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್ | 1 |
| 31 | ನ್ಯಾಯಾಲಯ | 1 |

## ೫) ಔರಾದ ತಾಲ್ಲೂಕು ಪರಿಚಯ

ಪ್ರೋ ಬಾಬುರಾವ ವಡ್ಡೆರವರು ಔರಾದ ತಾಲ್ಲೂಕು ಪರಿಚಯ ಹಾಗೂ ಔರಾದ ತಾಲ್ಲುಕು ಶೈಕ್ಷಣಿಕ ಪರಂಪರೆ ಕುರಿತು ಬರೆದಿದ್ದಾರೆ. 1986ರಲ್ಲಿ ಬಾಬುರಾವ ವಡ್ಡೆ ಅವರು ಔರಾದ ತಾಲ್ಲುಕು ದರ್ಶನ ಪುಸ್ತಕ ಸಲುವಾಗಿ ಸಂಗ್ರಹಿಸಿದ ಮಾಹಿತಿ ಪ್ರಕಾರ ಔರಾದ ತಾಲ್ಲುಕು ಗೋದಾವರಿಯಿಂದ ಕಾವೇರಿವರೆಗೆ ಕನ್ನಡ ನಾಡು ಪಸರಿಸಿದ್ದ ಕಾಲದಲ್ಲಿ ಕಲ್ಯಾಣ (ಬಸವಕಲ್ಯಾಣ) ನಾಡಿನ ಕೇಂದ್ರ ಸ್ಥಾನದಲ್ಲಿತ್ತು. ಆದರೆ ಈಗ ಗಡಿ ಸ್ಥಾನದಲ್ಲಿದೆ 12ನೇ ಶತಮಾನದಲ್ಲಿ ವಚನಗಳನ್ನು ರಚಿಸುವದರ ಮೂಲಕ ಕನ್ನಡ ಸಾಹಿತ್ಯವನ್ನು ವಿಶ್ವ ಸಾಹಿತ್ಯಮಟ್ಟದಲ್ಲಿ ಎದ್ದು ಕಾಣುವಂತೆ ಮಾಡಿದವರು ಇಲ್ಲಿಯ ಬಸವಾದಿ ಶರಣರು ಅಂದು ಮತ್ತು ನಂತರದ ಹಲವಾರು ದಶಕಗಳ ಕಾಲ ಇಲ್ಲಿ ಕನ್ನಡ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಜಾತಿ ಮತ ಪಂಥಗಳನ್ನು ಮೀರಿ ಮುಕ್ತ ವಾತಾವರಣದಲ್ಲಿ ನಿತ್ಯ ಸಾಹಿತ್ಯದ ಗೋಷ್ಠಿಗಳು ಇಲ್ಲಿ ನಡೆದು ಸಾಹಿತ್ಯದ ತವರು ಮನೆ ಎಂಬ ಖ್ಯಾತಿ ಈ ಪಟ್ಟಣದ್ದಾಗಿತ್ತು. ಆದರೆ ಈಗ ಇಲ್ಲಿ ಸಾಹಿತ್ಯಕೆ ಬರ ಬಂದಂತಾಗಿದೆ. ಗಡಿ ಭಾಗದಲ್ಲಿಯ ಬೇರೆ ಬೇರೆ ಭಾಷೆಗಳ ಪ್ರಭಾವದಿಂದಾಗಿ ಇಲ್ಲಿಯ ಕನ್ನಡದ ಸ್ಥಿತಿ ಶೋಚನೀಯವಾಗಿದೆ.

ಕೇವಲ ಕಾಟಾಚಾರಾದ ಕೆಲವು ಸರ್ಕಾರಿ, ಕನ್ನಡ ಸಾಹಿತ್ಯ ಪರಿಷತ್ತಿನ ಹಾಗೂ ಧಾರ್ಮಿಕ ಕಾರ್ಯಕ್ರಮಗಳು ಇಲ್ಲಿ ನಡೆಯುತ್ತಿರುವುದು ಬಿಟ್ಟರೆ ಬೇರೆ ಚಟುವಟಿಕೆಗಳು ನಗಣ್ಯವೆಂದು ಹೇಳಬೇಕು. ಈ ಪರಿಸ್ಥಿತಿಯನ್ನು ನೋಡಿಯೇ ತಾಲ್ಲೂಕು ಕಸಾಪ ಪಧಾಧಿಕಾರಿಗಳು ಸೇರಿ ಜಿಲ್ಲಾ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಇಲ್ಲಿ ನಡೆಸಿ ಕಲ್ಯಾಣದ ಪ್ರಣತೆಯಲ್ಲಿ ಕನ್ನಡದ ಜ್ಯೋತಿ ಮನದಾಳದಿಂದ ಹುಟ್ಟಿತ್ತೆಂದರೆ ತಪ್ಪಾಗಲಿಕಿಲ್ಲ.

ಔರಾದ ತಾಲ್ಲೂಕು ಸರ್ವಾಂಗೀಣ ಬೆಳವಣಿಗೆಯಲ್ಲಿ ಇದೀಗ ಪ್ರಾಯವಾದ ಬೀದರ ಜಿಲ್ಲೆಯ ಕಿರೀಟದಲ್ಲಿ ಜಡೆದ ವಜ್ರದಂತೆ ಇದೆ ಕನ್ನಡ ಮಾತೆಯ ಮುಖ್ಯ ಅಂಗವಾಗಿದೆ. ಇಲ್ಲಿ ಭೂಮಿಯ ಗುಣದಂತೆ ಜನಾಂಗವು ಹಳೆ ಬೇರು ಹೊಸ ಚೀಗುರಿನಂತಹ ವೈವಿಧ್ಯಮಯವಾಗಿದೆ ರಾಜಧಾನಿಯಿಂದ ಈ ತಾಲ್ಲುಕು ಅತ್ಯಂತ ದೂರದ ಸ್ಥಳವಾಗಿದೆ. ಬೀದರ ಮುಖ್ಯ ಪಟ್ಟಣದಿಂದ ಔರಾದ ತಾಲ್ಲೂಕು ಉತ್ತರಕ್ಕೆ ಸುಮಾರು 42 ಕಿ.ಮಿ. ದೂರದಲ್ಲಿದೆ ಈ ತಾಲ್ಲುಕಿನ ಆಕೃತಿಯ (ನಕ್ಷೆ) ಪಶ್ಚಿಮಕ್ಕೆ ಓಡುತ್ತಿರುವ ಮೊಲದ ಆಕೃತಿಯಾಗಿದೆ. ಈ ರಚನೆ ಪ್ರಗತಿ ದ್ಯೋತಕವಾಗಿದೆ. ಎನ್ನಲು ಅಡ್ಡಿ ಇಲ್ಲ.

ಭಾಷಾವಾರು ಪ್ರಾಂತಗಳಾದ ನಂತರ ಇಲ್ಲಿಯ ಕನ್ನಡ ಚೈತನ್ಯ ಪುಟಿದೆದ್ದು ಔರಾದ ತಾಲ್ಲೂಕು ಮುಖ್ಯ ಕೇಂದ್ರ ಸ್ಥಳವಾಗಿ ತನ್ನತನವನ್ನು ಕಾಪಾಡಿಕೊಂಡಿದೆ. ಈ ತಾಲ್ಲೂಕು ಉತ್ತರ, ಪಶ್ಚಿಮಕ್ಕೆ ಮಹಾರಾಷ್ಟ್ರದ ಮೇರೆ ಪಡೆದಿದೆ. ಪೂರ್ವಕ್ಕೆ ಆಂದ್ರಪ್ರದೇಶವಿದ್ದು, ದಕ್ಷಿಣಕ್ಕೆ ಭಾಲ್ಕಿ ಮತ್ತು ಬೀದರ ತಾಲ್ಲೂಕುಗಳು ಮಾಂಜರಾ ನದಿಯ ದಂಡೆಯಿಂದ ಬೇರ್ಪಟ್ಟು ರಚನೆಯಾಗಿದೆ. ಈ ತಾಲ್ಲೂಕು ಸಮುದ್ರ ಮಟ್ಟದಿಂದ 674 ಮೀಟರ ಎತ್ತರದಲ್ಲಿದೆ. ಪೂರ್ವಕ್ಕೆ ಸ್ವಲ್ಪ ಇಳಿಜಾರಾಗಿದೆ. ಇದು ಪೂರ್ವ ರೇಖಾಂಶ 77.2 ರಿಂದ 77.7ರ ವರೆಗೆ ಪಸರಿಸಿದೆ ಹಾಗೂ ಉತ್ತರ ಅಕ್ಷಾಂಶ 18 ರಿಂದ 18.5 ರವರೆಗೆ ಇರುತ್ತದೆ. ಇಲ್ಲಿಯ ಹಾವಾಗುಣ ಬೀದರ ಜಿಲ್ಲೆಯ ಉತ್ತಮ ಹಾವಾಗುಣಕ್ಕೆ ಸಮನಾಗಿದೆ. ಇಲ್ಲಿ ಹರಿದ ಮುಖ್ಯ ನದಿಗಳು ಮಾಂಜರಾ, ದೇವಣಿ. ಚಿಕ್ಕ ಹಳ್ಳಗಳೆಂದರೆ ಹೆಬ್ಬಾಳ, ಬಾದಲಗಾಂವ ನಾಲೆ ಮುಂತಾದವುಗಳು. ಇಲ್ಲಿ ಕಪ್ಪು

ಎರೆ ಭೂಮಿ ಹೆಚ್ಚಾಗಿದೆ ಮುಂಗಾರು ಹಿಂಗಾರು ಬೆಳೆಗಳನ್ನು ಬೆಳೆಸಲು ಉತ್ತಮವಾಗಿದೆ. ಅರ್ಧದಷ್ಟು ಭೂಮಿಯು ಮುಂಗಾರು ಬೆಳೆ ಬೆಳೆಯಲು ಉತ್ತಮವಾಗಿದೆ. ಇತ್ತಿತ್ತಲಾಗಿ ನಮ್ಮ ಸರಕಾರ ನಿರ್ಮಿಸಿದ ಕೆರೆಗಳು ಸಂಖ್ಯೆಯಲ್ಲಿ 20ಕ್ಕೆ ಮೇಲ್ಪಟ್ಟಿರುತ್ತದೆ. ಇದರಿಂದ ಹಾಗೂ ನದಿ ದಂಡೆಗಳಿಂದ ಸ್ವಲ್ಪ ಭೂ ಭಾಗವನ್ನು ನೀರಾವರಿ ಮಾಡಿಕೊಂಡು ತಾಲ್ಲೂಕಿನ ಹಸಿರನ್ನು ಹೆಚ್ಚಾಗಿಸಿದೆ.

ತಾಲ್ಲುಕಿನ ವ್ಯವಸಾಯ ಪ್ರದೇಶದಲ್ಲಿ ಎಲ್ಲಾ ಪ್ರಕಾರದ ಧಾನ್ಯಗಳನ್ನು ಚೆನ್ನಾಗಿ ಬಿತ್ತಿ ಬೆಳೆ ತೆಗೆದು ಕೊಳ್ಳಲು ಬರುತ್ತದೆ. ಇಲ್ಲಿ ಜೋಳ, ಹತ್ತಿ, ನೆಲಗಡಲೆ ಎಣ್ಣೆ ಕಾಳುಗಳು, ಬೇಳೆಕಾಳುಗಳು ಹೇರಳವಾಗಿ ಬೆಳೆಯುತ್ತದೆ, ಇಲ್ಲಿ ಜಿಲ್ಲಾ ಪ್ರಮಾಣದಲ್ಲಿ ಮಳೆಯ ಪ್ರಮಾಣವು ಸಮಸಮವಾಗಿ ಅಂದರೆ 200 ಮಿಲಿ ಮೀಟರಿನಿಂದ ಹಿಡಿದು 350 ಮಿಲಿ ಮೀಟರ ವರೆಗೆ ವರ್ಷಿಸುತ್ತದೆ. ಎಕರೆಗೆ ಮೂರು ವರ್ಷಕ್ಕೊಮ್ಮೆ ಇಲ್ಲಿ ಒಕ್ಕಲಿಗ ಉತ್ತಮವಾದ ಫಸಲನ್ನು ಬೆಳೆದುಕೊಳ್ಳುತ್ತಾನೆ ಒಂದು ವರ್ಷ ಅತೀ ವೃಷ್ಟಿಯಿಂದ ಇನ್ನೊಂದು ವರ್ಷ ಅನಾವೃಷ್ಟಿಯಿಂದ ಬವಣೆ ಪಡಬೇಕಾಗುತ್ತದೆ. ಈ ವಿಷಯ ದೂರ ಮಾಡಲು ನಮ್ಮ ಸರಕಾರ ಈ ತಾಲ್ಲೂಕಿನ ನೀರಾವರಿ ಯೋಜನೆಗಾಗಿ ಪ್ರಥಮ ಪ್ರಾಶಸ್ತ್ಯ ಕೊಟ್ಟರೆ ಒಳ್ಳೆಯ ಧರ್ಮಕಾರ್ಯವಾಗುತ್ತದೆ. ಇದರಿಂದ ಇಲ್ಲಿಯ ಮೂಲ ಉದ್ಯೋಗವಾದ ವ್ಯವಸಾಯದ ಆಧಾರದಿಂದ ಬೇರೆ ಗೃಹ ಕೈಗಾರಿಕೆಗಳು ಉರ್ಜಿತಗೊಂಡಂತೆ ನಾಡಿಗೆ ಉತ್ತಮ ಎಂದು ತೋರಿಸಿ ಕೊಡಬಲ್ಲರು. ಭೌಗೋಳಿಕವಾಗಿ ಇನ್ನೊಂದು ವಿಷಯ ಇದು ಕರಿಕಲ್ಲಿನ ನೆಲವಾಗಿದ್ದು ತಪ್ಪಲು ಪ್ರದೇಶದ ಸನ್ನಿವೇಶ ಪಡೆದಿದೆ. ಇಲ್ಲಿ ಕೆಲವು ಕಡೆ ಸಾಧಾರಣ ಅರಣ್ಯ ಪ್ರದೇಶವಿದೆ ಇಲ್ಲಿ ಚಿಕ್ಕ ಪುಟ್ಟ ಕಾಡು ಪ್ರಾಣಿಗಳು, ಹುಣಸೆ ಮಾವು, ಬೇವು, ಅಪ್ಪಿ ತುಂಬು ಮರಗಳು ಬೆಳೆಯುತ್ತವೆ. ಅಲ್ಲದೇ ಈಗಿನ ಅರಣ್ಯ ಇಲಾಖೆಯವರು ನೀಲಗಿರಿ ಅಶೋಕ, ಸುಬಾಬುಲ, ಮರಗಳನ್ನು ಪಾಳು ಭೂಮಿ ಮೊರಡಿ ಪ್ರದೇಶದಲ್ಲಿ ನೆಟ್ಟಿದ್ದಾರೆ, ಆದ್ದರಿಂದ ಪಾಳು ಬಿದ್ದ ಪ್ರದೇಶಗಳು ಹಸುರುಡಿಗೆ ತೊಟ್ಟಂತೆ ಭೂತಾಯಿ ಕಾಣುತ್ತಿದ್ದಾಳೆ.

ಇಲ್ಲಿಯ ಹವಾಗುಣ ದಕ್ಷಿಣ ಭಾರತದ ಹವಾಗುಣವಾದ ಉಷ್ಣದಿಂದ ಕೂಡಿದೆ. ಜೂನ ತಿಂಗಳಲ್ಲಿ ಮಾನ್ಸೂನ್ ಗಾಳಿಯಿಂದ ಮುಂಗಾರು ಬಿತ್ತನೆ ಪ್ರಾರಂಭವಾಗುತ್ತದೆ ಅಕ್ಟೋಬರ್ ಮಧ್ಯದಲ್ಲಿ ಮಳೆ ಬೀಳುತ್ತದೆ. ಅಕ್ಟೋಬರ್ ಮದ್ಯದಿಂದ ಜನೇವರಿ ಮುಗಿಯುವರೆಗೆ ಚಳಿಗಾಲ ಇರುತ್ತದೆ. ಡಿಸೆಂಬರನಲ್ಲಿ ಸ್ವಲ್ಪ ಚಳಿ ಹೆಚ್ಚಾಗಿ, ಬೇಸಿಗೆ ಮಾರ್ಚದಿಂದ ಮೇ ವರೆಗೆ ಇದ್ದು, ಸೆಕೆ ಇರುತ್ತದೆ. ಸುಮಾರು 40 ರಿಂದ 45 ಸೆಲ್ಸಿಯಸ್ ವರೆಗೂ ಉಷ್ಣತೆ ಕಾಣುತ್ತದೆ.

ತಾಲ್ಲುಕಿನ ವಿಸ್ತೀರ್ಣ 1220.06 ಚ.ಕಿ.ಮೀ. ಇದ್ದು 1981ರ ಜಣಗಣತಿ ಪ್ರಕಾರ ಸಂಖ್ಯೆ 1,73,789 ಇರುತ್ತದೆ. ಪ್ರತಿ ಚ.ಕಿ.ಮೀ.ಗೆ ಜನಸಾಂಧ್ರತೆ 142 ಇರುತ್ತದೆ. ಇವರು ವ್ಯವಸಾಯ ದೊಂದಿಗೆ ಪಶು ಸಂಗೋಪನವನ್ನು ಮುಖ್ಯವಾಗಿಟ್ಟುಕೊಂಡಿದ್ದಾರೆ. ಇಲ್ಲಿಯ ಪಶುಗಳು ದೇವಣಿ ತಳಿಗಳೆಂದು ಪ್ರಸಿದ್ದವಾಗಿವೆ. ಅಲ್ಲದೆ ಮೈಮುರಿದು ದುಡಿಯುವ ಕಾಯಕದಲ್ಲೆ ಕೈಲಾಸ ಕಾಣುವ ಒಕ್ಕಲಿಗನ ಮೈಕಟ್ಟು ಮಸ್ತಾಗಿರುತ್ತದೆ. ಸದಾ ನಕ್ಕು ನಲಿಯುವ ಆದ ರಾತಿಥ್ಯಕ್ಕೆ ಆದ್ಯತೆ ಕೊಡುವವನಾಗಿದ್ದಾನೆ.

*ಚರಿತ್ರೆ:-*

ಇತಿಹಾಸದ ಪೂರ್ವದ ಯಾವ ಅವಶೇಷಗಳು ಇಲ್ಲಿ ಸಿಕ್ಕುವುದಿಲ್ಲವೆನ್ನಬಹುದು ಆದರೆ ಇತಿಹಾಸ ಪೂರ್ವದ ಕಾಲದಲ್ಲಿ ಈ ಪ್ರದೇಶದಲ್ಲಿ ಮೂಲ ನಿವಾಸಿಗಳೆನಿಸಿಕೊಂಡ ಗೊಲ್ಲರು, ಬಿಲ್ಲರು, ಸಂತಾಳರು, ಬೇಡರು, ದ್ರಾವಿಡರು ಇದ್ದರೆನ್ನುವುದಕ್ಕೆ ಮಾಸಿ ಹೋಗದ ಸಂಸ್ಕೃತಿಯಿಂದ ಮನದಟ್ಟಾಗುತ್ತದೆ. ಈ ತಾಲ್ಲೂಕಿನ ಇತಿಹಾಸ ಪಡೆಯಲು ಬೀದರ ಜಿಲ್ಲೆಯ ಇತಿಹಾಸದ ನೆರಳು ಬೇಕು ಎನ್ನಲು ಅಡ್ಡಿ ಇಲ್ಲ. ಇಲ್ಲಿ ಅನೇಕ ರಾಜ್ಯ ಮಹಾರಾಜರುಗಳು ಸಾಮಂತರು ಆಗಿ ಹೋಗಿರುವುದಕ್ಕೆ ಊರೂರಿಗೆ ಕೋಟೆಗಳ ಅವಶೇಷ ಸಾಕ್ಷಿಯಾಗಿವೆ.

ಸಾಮ್ರಾಟ ಭಾರತದ ಕಿರ್ತಿವಂತನಾದ ಅಶೋಕನ ಸಾಮ್ರಾಜ್ಯದಲ್ಲಿ ನಮ್ಮ ತಾಲ್ಲೂಕು ಇತ್ತೆನ್ನಲು ಹೆಮ್ಮೆ ಎನಿಸುತ್ತದೆ. ನಂತರ ಕ್ರಿ.ಶ. 2ನೇ ಶತಮಾನದಿಂದೀಚೆಗೆ ಚಾಲುಕ್ಯರ ನಂತರ ಕಲಚೂರಿ ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಇದಕ್ಕೂ ಮುಂಚೆ ಇಲ್ಲಿ ಜೈನ ಧರ್ಮದ ಪ್ರಭಾವ ಪ್ರಚಾರ ಇತ್ತೆನ್ನಲು ಆಧಾರಗಳಿವೆ 14ನೇಯ ಶತಮಾನದಿಂದೀಚಿಗೆ ಅಂದರೆ ಹೈದ್ರಾಬಾದ ನಿಜಾಮನ ಕಾಲದವರೆಗೂ ಮುಸ್ಲಿಂರ ಆಳ್ವಿಕೆಯಲ್ಲಿ ಸಾಗಿದೆ. ಈ ಮೂವರು ಆಳಿದರೂ ಇಲ್ಲಿಯದು ಗಟ್ಟಿ ಸಂಸ್ಕೃತಿ. ಸತ್ಯವಾದುದನ್ನು ಒಳ್ಳೆಯದಾದುದನ್ನು ಹೀರುವ ಜನಾಂಗ ಭಾರತದಲ್ಲಿ ಕರ್ನಾಟಕ ಸರ್ವವಿಧದಿಂದ ರಕ್ಷಿತ ಭದ್ರ ಪ್ರದೇಶವಾಗಿದೆ. ಅದರಲ್ಲೂ ಬೀದರ ಪಟ್ಟಣ ಸುಭದ್ರವಾಗಿದೆ. ಇಲ್ಲಿ ಎರಿಳಿತಗಳು ಹೊಡೆದಾಟ ಬಡಿದಾಟಗಳು ನಡೆದಿರಬಹುದು. ಆದರೆ ಇತಿಹಾಸ ಗರ್ಭದಲ್ಲಿ ಇಲ್ಲಿಯ ಅಂದರೆ ನಮ್ಮ ತಾಲ್ಲೂಕಿನ ಜನಾಂಗ ಹೆಚ್ಚಿನ ನಷ್ಟ ಅನುಭವಿಸಿಲ್ಲವೆನ್ನಬಹುದು ಇಲ್ಲಿ ನೈಸರ್ಗಿಕವಾಗಿ ಬಿರುಗಾಳಿಯಂಥ ವಾತಾವರಣವು ಇಲ್ಲ ಐತಿಹಾಸಿಕವಾಗಿ ರಜಾಕಾರರನ್ನು ಬಿಟ್ಟರೆ ರಕ್ತ ಪಾತವಾಗಿಸಿದ ನಾಡು ಇದಲ್ಲವೆನ್ನಬಹುದು ಔರಾದ ತಾಲ್ಲೂಕು ಒಟ್ಟಿನಲ್ಲಿ ಭಾವ ನಿರ್ಭಾವ ನಿಂತ ಸಣ್ಣ ಮಗುವಿನಂತೆ ನಿಷ್ಪಾಪವಾಗಿದೆ. ಕನ್ನಡ ಮಾತೆಯ ಜೀವಕೋಶದಂತಿದೆ. ಈ ತಾಲ್ಲೂಕಿನ ಇತಿಹಾಸ ಆ ರಕ್ತ ಆ ಭಾಷೆ ಆ ಉಸಿರು ಮೈಯಲ್ಲಿ ತುಂಬಿ ನಿಂತಿದೆ. ನಿಜವಾಗಿ ಹೇಳಬೇಕೆಂದರೆ ಇಲ್ಲಿಯ ಇತ್ತೀಚಿನ ನಾಯಕರು, ಯೋಗಿಗಳು ಪರಿಶ್ರಮಿಸದಿದ್ದರೆ ಕನ್ನಡಿಗರಾಗಿ ಉಳಿಯುತ್ತಿರಲಿಲ್ಲ. ನಮ್ಮ ಉದಾರ ಕರ್ತವ್ಯ ನಮ್ಮನ್ನು ಹಾಳು ಮಾಡಿದೆ. ನಮ್ಮಲ್ಲಿ ಸ್ವಾಭಿಮಾನದ ಗುಣ ಇದ್ದರೂ ಮಹತ್ವಾಕಾಂಕ್ಷೆ ಜಾಗೃತಿಯಲ್ಲಿಲ್ಲದ ಕಾರಣವೊ ಗೋದಾವರಿ ವರಮಿರ್ದನಾಡು ನಮ್ಮ ತಾಲ್ಲೂಕಿನ ಸಿಮೆಯೇ ಕೊನೆಯದ್ದಾಗಿದೆ. ಇದನ್ನು ಚರಿತ್ರೆಯನ್ನಾಗಿಸಲು ಸಾಹಿತ್ಯಿಕ ಸಾಂಸ್ಕೃತಿಕ ಉದಾರ ಕಾರ್ಯಗಳು ಸರಕಾರ ನಡೆಯುವಂತೆ ಎಚ್ಚರ ವಹಿಸಬೇಕಾಗುತ್ತದೆ. ಇಲ್ಲಿ ಕನ್ನಡದ ನಂತರ ಮರಾಠಿ, ಹಿಂದಿ, ಉರ್ದು, ತೆಲುಗು, ಲಂಬಾಣಿ ಭಾಷೆಗಳನ್ನಾಡುವ ಜನಾಂಗವಿದೆ. ಭಾಷೆ ಭಾವನೆಯನ್ನು ವ್ಯಕ್ತ ಮಾಡಲಿಕ್ಕೆ ಮಾತ್ರ ಭೇದಕ್ಕಲ್ಲವೆಂಬುದು ತಿಳಿದಿದ್ದಾರೆ.

ಸೌಹಾರ್ದತೆಯಿಂದ ಇಲ್ಲಿ ಬಾಳುವುದಕ್ಕಾಗಿ ವಿಶಾಲ ಹೃದಯ ಸಾಕ್ಷಿಯಾಗಿದೆ ಔರಾದ ಪಟ್ಟಣದ ಸುತ್ತಲೂ ಕೆಲವು ಮಹಾವೀರನ ಪ್ರಸನ್ನ ಮೂರ್ತಿಗಳು ಸಿಕ್ಕಿವೆ. ನಂತರ ಜೈನ ಧರ್ಮ ವೀರಶೈವ ಧರ್ಮ ಊರ್ಜಿತಗೊಂಡದ್ದು ಉಲ್ಲೇಖ, ಬೀದರ ಜಿಲ್ಲೆಯ ಕರ್ನಾಟಕದ ಇತಿಹಾಸವೇ ಔರಾದ ತಾಲ್ಲುಕು ಪ್ರತಿಬಿಂಬಿಸುತ್ತದೆ. ಎಂದೆನ್ನಬಹುದು ಇತಿಹಾಸ ಮಸುಕಾಗಿದ್ದರೂ ಇಲ್ಲಿ ಪಂಡಿತರು ವೀರರೂ ಮಹಾಯೋಗಿಗಳು ನಿಪುಣ ಕಲೆಗಾರರೂ ಆಗಿದ್ದರೆನ್ನುವುದುಕ್ಕೆ ಈಗಿನ ರಕ್ತಗತವಾಗಿ ಬಂದ ಉದ್ಯೋಗ

ಮುನ್ನಡೆಸಿಕೊಂಡು ಬಂದ ಆಚಾರ ಸಂಸ್ಕೃತಿ ಕಾರ್ಯಗಳು ಸಾಕ್ಷಿಯಾಗಿವೆ ಇಲ್ಲಿ ಬಸವಣ್ಣನವರ ಕಾಲದಿಂದ ವೀರಶೈವ ಧರ್ಮವು ತುಂಬಿ ಬೆಳೆದಿದೆ ಅದರಂತೆ ಮಹಾರಾಷ್ಟ್ರದ ಸಂತ ತುಕಾರಾಮ, ಜ್ಞಾನೇಶ್ವರ, ಬೌದ್ಧರು, ಇಲ್ಲಿ ಇದ್ದಾರೆ. ಇದು ಶರಣರ ನಾಡಾದುದರಿಂದ ದಯವೇ ಧರ್ಮ, ದೇವನೊಬ್ಬ ಎಂಬ ಮಾರ್ಗದತ್ತ ಒಯ್ಯಲು ಆದರ್ಶವಾದಿಗಳಿಗೆ ದಾರಿ ದೀಪವಾಗುವುದು ಕಂಡು ಬರುತ್ತದೆ. ಇಲ್ಲಿಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗವಾದ ಹರಿಜನ ಗಿರಿಜನರು ತಮ್ಮ ನಾಯಕ ಸ್ವೀಕರಿಸಿದ ಬೌದ್ಧ ಧರ್ಮವನ್ನೆ ಸ್ವೀಕರಿಸಿದ್ದಾರೆ. ಅಲ್ಲದೆ ಇಲ್ಲಿ ಬ್ರಿಟಿಷರ ಕಾಲದಿಂದ ನಾಟಿಯಾದ ಕ್ರಿಶ್ಚನ್ ಧರ್ಮವೂ ತನ್ನ ಧಾರ್ಮಿಕ ಚಟುವಟಿಕೆ ನಡೆಸುತ್ತಿರುತ್ತದೆ. ಇಲ್ಲಿ ದೇಶದಲ್ಲಿಯ ಸರಾಸರಿಯಂತೆ ಮುಸ್ಲಿಂರ ಸಂಖ್ಯೆಯೂ ಇದೆ..

ಜಾತ್ಯತೀತ ರಾಷ್ಟ್ರದ ಅನುಷ್ಠಾನ ತಾಲ್ಲೂಕಿನಲ್ಲಿ ಇದೆ. ಈಗ ಸ್ವಲ್ಪ ಹಿಂದೆ ಅಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ಔರಾದ ತಾಲ್ಲುಕು ನಿಜಾಮನ ಆಳ್ವಿಕೆಯಲ್ಲಿ ಆಡಳಿತ ವ್ಯವಸ್ಥೆ ಪಡೆದಿತ್ತು. ನಿಜಾಮನು ಇಲ್ಲಿಯ ಕಾರ್ಯಗಳನ್ನು ಆಸಕ್ತಿಯಿಂದ ಮಾಡಿದ್ದಾನೆ. ಆತ ಈಗಿರುವ ಬೀದರ ತಾಲ್ಲೂಕಿನ ಜನವಾಡಕ್ಕೆ ಸರಫ್‌ಖಾನ್ ಕಚೇರಿ(ತಾಲ್ಲೂಕು) ಇಟ್ಟದ್ದ. ಅದರ ಕೆಳಗೆ ಔರಾದ ಕಸಬಾ (ಸರ್ಕಲ–ಹೋಬಳಿ) ಆಗಿತ್ತು. ಈ ಕಸಬಾದ ಮೂಲಕ ಪೋಲಿಸ ಖಾತೆ ಅಂಚೆ ಕಛೇರಿ ಕಾರ್ಯ ನಡೆಸುತ್ತಿತ್ತು. ಔರಾದದ ಕೆಳಗೆ 80 ಹಳ್ಳಿಗಳು ಇದ್ದವು ಇದರ ಕಾರ್ಯ ಕಲಾಪಗಳು ನಿಜಾಮನ ಆದೇಶದಂತೆ ನಡೆಯುತ್ತಿದ್ದವು. ಇದೇ ರೀತಿ ಈಗಿನ ಠಾಣಾ ಕುಶನೂರ, ಉದಗೀರ (ಈಗ ಮಹಾರಾಷ್ಟ್ರದಲ್ಲಿದೆ) ದಿವಾನಿ ಖಾತೆಯ ಕಸಬಾ ಆಗಿತ್ತು. ಉದಗೀರ ದಿವಾನಿ ಖಾತೆಯಿಂದ ಸಾಮಾಜಿಕ ಆರ್ಥಿಕ ಸುಧಾರಣೆಗಾಗಿ ಹಣ ಖರ್ಚು ಮಾಡಲಾಗುತ್ತಿತ್ತು. ಜನವಾಡಾ ಸರಫಖಾನದಿಂದ ಬಂದ ಕರವನ್ನು ನಿಜಾಮ ಸರಕಾರಕ್ಕೆ ಹೋಗುತ್ತಿತ್ತು. ಈ ರೀತಿ ಇಲ್ಲಿಯ ಆಡಳಿತ ವ್ಯವಸ್ಥೆ ಸುಗಮವಾಗಿತ್ತು. ಎಂಬುದು ಹಿರಿಯರಿಂದ ತಿಳಿದು ಬರುತ್ತದೆ.

ಕಮಲನಗರ ತಾಲ್ಲೂಕಿನ ಪಶ್ಚಿಮ ಭಾಗಕ್ಕಿದ್ದು, ಅಲ್ಲಿ ಕ್ರಿ.ಶ. 1790ರಲ್ಲಿ ನಿರ್ಮಿತವಾದ ಡಾಕ್ ಬಾಂಗ್ಲಾ ಇದೆ ಈಗ ಅದು ಸರಕಾರದ ಅಧೀನದ ಪ್ರವಾಸಿ ಮಂದಿರವಾಗಿದೆ. ಇದು ನಿಜಾಮರ ಆಳ್ವಿಕೆಯಲ್ಲಿಯೇ ನಿರ್ಮಾಣವಾಗಿದ್ದಾಗಿದೆ. ಅಲ್ಲದೆ ನಿಜಾಮ ಕ್ರಿ.ಶ. 1955ರಲ್ಲಿ ಹೈದ್ರಾಬಾದ ದಿಂದ ಪರಳಿ ವೈಜಿನಾಥದವರೆಗೆ ರೈಲ್ವೆ ಮಾರ್ಗ ನಿರ್ಮಿಸಿದ ಆ ಮಾರ್ಗದಲ್ಲಿ ಇಂದು ವ್ಯಾಪಾರ ಕೇಂದ್ರವಾದ ಕಮಲನಗರ ರೈಲು ನೀಲ್ದಾಣ ಗೋಚರಿಸುತ್ತದೆ. ಇದೊಂದು ತಾಲ್ಲೂಕಿನ ರೈಲು ಮಾರ್ಗ ಹಾಯ್ದ ಪ್ರದೇಶವಾಗಿದೆ. ಈ ರೈಲಿನ ವ್ಯವಸ್ಥೆ ಬಿಟ್ಟರೆ ತಾಲ್ಲೂಕಿನ ಕಾಲ್ದಾರಿಗಳು ಇಲ್ಲವೆ ಎತ್ತಿನ ಬಂಡಿ ಹೋಗುವ ಕಚ್ಚಾ ಮಾರ್ಗಗಳು ಮಾತ್ರ ಇದ್ದವು ಅದಕ್ಕೆ ಹಣಾದಿ ಎಂದು ಕರೆಯುತ್ತಾರೆ. ಉಳಿದ ಸಂಚಾರ ಸಂಪರ್ಕವೆಲ್ಲ ಒಂಟೆ, ಕುದುರೆ, ಎತ್ತು, ಕತ್ತೆ ಇತ್ಯಾದಿಗಳಿಂದ ನಡೆಯುತ್ತಿತ್ತು. ಆಗಿನ ಹಳ್ಳಿಗಳು ದಟ್ಟ ಗಿಡಮರಗಳಿಂದ ದಟ್ಟ ಕ್ಯಾದಗೆ ಚಲಾರಿ ಜಾಲಿಗಳಿಂದ ಪಾಪಸಕಳ್ಳಿಗಳಿಂದ ಸುತ್ತುವರಿದ ಊರು ಅತಿ ಸಮೀಪ ಬರುವವರೆಗೆ ಕಣ್ಣಿಗೆ ಗೋಚರಿಸುತ್ತಿರಲಿಲ್ಲ. ಅಂಥ ಕಾಡು ಈಗ ಇಲ್ಲಿಲ್ಲ. ಈಗ ಎಲ್ಲೆಡೆಗೂ ಬಯಲು ಆಗಿದ್ದು ಕಂಡು ಬರುತ್ತದೆ. ಅಲ್ಲದೆ ಈಗ ಮೊದಲಿದ್ದ ಕಾಡು ಪ್ರಾಣಿಗಳ ಭಯ ಇಲ್ಲವಾಗಿದೆ. ಎತ್ತೆತ್ತಲು ರಸ್ತೆಗಳು ನಿರ್ಮಾಣವಾಗಿ ತಾಲ್ಲೂಕು ಸಮೃದ್ಧಿಯತ್ತ ಸಾಗಿದೆ ಎನ್ನಬಹುದು.

ಸ್ವಾತಂತ್ರ್ಯ ನಂತರ ಔರಾದ ತಾಲ್ಲುಕು ರಜಾಕಾರರ ಹಾವಳಿಯಿಂದ ಕ್ರಿ. ಶ. 1948 ರಲ್ಲಿ ಹಾಹಾಕಾರವೆದ್ದು ಎಲ್ಲೆಡೆ ರಕ್ತ ಪಾತವಾಗಿದ್ದು, ರಕ್ತದ ಓಕಳಿ ಹರಿಸಿದರು. ಅದರಲ್ಲೂ ಸಾವಿರಾರು ನಿರಪರಾಧಿ

ಹಿಂದು, ಮುಸ್ಲಿಂ ಬಾಂಧವರು ಮೃತಪಟ್ಟರು. ಸರದಾರ ವಲ್ಲಬಾಯಿ ಪಟೇಲ ಭಾರತದ ಗೃಹ ಮಂತ್ರಿಗಳಾಗಿದ್ದು ಹೈದ್ರಾಬಾದದ ನಿಜಾಮನಿಗೆ ಭಾರತ ಒಕ್ಕೂಟದಲ್ಲಿ ಸೇರದಿದ್ದರೆ ಸರ್ವನಾಶವಾದೀತು ಎಂದು ಪೋಲಿಸ್ ಆಕ್ಷನ್ ಪ್ರಾರಂಭಿಸಿದರು. ಪ್ರಾಣ, ಮಾನ, ಧನ ಹಾನಿಯನ್ನು ಕಂಡು ನಿಜಾಮ ಭಾರತದಲ್ಲಿ ವಿಲೀನವಾಗಲು ಒಪ್ಪಿದ. ಆ ನಂತರ ಔರಾದ ತಾಲ್ಲೂಕು ಬೇರೆ ಪ್ರದೇಶದಂತೆ ಶಾಂತಿಯ ಬಾಂಧವ್ಯದ ಬೀಡಾಯಿತು ಕಷ್ಟಗಳೆಲ್ಲ ಪರಿಹಾರವಾಗಿ ಪ್ರಜಾತಂತ್ರ ಭಾರತದ ದಂಡ ಸಂಹಿತೆಯ ಪ್ರಕಾರ ಇಲ್ಲಿಯ ಅನೇಕ ಬದಲಾವಣೆಗಳು ಅಭಿವೃದ್ಧಿ ಕಾರ್ಯಗಳು ನಡೆಯುತ್ತ ಇವೆ. ಕ್ರಿ.ಶ. 1956 ನವೆಂಬರ 1 ರಂದು ಮೈಸೂರು ರಾಜ್ಯ ನಿರ್ಮಾಣವಾದಾಗ ಔರಾದ ತಾಲ್ಲುಕು ಗಂಡ ಹೆಂಡಿರ ಜಗಳದಲ್ಲಿ ಕೂಸು ಬಡವಾದಂತೆ ಆಯಿತು. ಏಕೆಂದರೆ ಇಲ್ಲಿ ಸಂಕುಚಿತ ವಿಚಾರದ ಕೆಲವರು ಮರಾಠರ ಮುಂಗೋಪಿತನದಿಂದ ಕೆಲವು ಕಡೆ ಘರ್ಷಣೆಗಳು ನಡೆದವು ಆದರೆ ಬಹುಮತ ಕನ್ನಡ ಕುಲ ಕೋಟಿ ಪಡೆದಿದ್ದರಿಂದ ಭಾಷಾಭೇದ ಮಾಯವಾಗಿ ತಾಲ್ಲೂಕಿನ ಮತ್ತು ಜೀವನ ಪ್ರಗತಿಗಾಗಿ ಎಲ್ಲರೂ ಹೋರಾಡುವಂತಾಯಿತು.

***<u>ಸಂಸ್ಕೃತಿ:-</u>***

ಭಾರತದ ಉಚ್ಚ ಸಂಸ್ಕೃತಿಯ ಬೇರು ನೆಲದ ಮೇಲೆ ಸಿಗುವುದು ಕಷ್ಟ ಆ ಸಂಸ್ಕೃತಿ ಅಂದರೆ ತನ್ನ ತನದ ಅರಿವು ಆಭಿಮಾನ ಪರಮತದ ಸಹಿಷ್ಣತೆ ಹಾಸುಹೊಕ್ಕಾಗಿದೆ. ಔರಾದ ತಾಲ್ಲೂಕಿನಲ್ಲಿ 149 ಹಳ್ಳಿಗಳು ಇದ್ದು, ಪ್ರತಿ ಊರಿಗೆ ಒಂದು ಹಣಮಂತನ ದೇವಾಲಯ ಇದ್ದೇ ಇದೆ. ದೊಡ್ಡ ಊರುಗಳಲ್ಲಿ ಎರಡು ಮೂರು ಹನುಮಪ್ಪನ ಮಂದಿರಗಳು ಇವೆ. ಇಲ್ಲಿ ಶಿಲಾಶಾಸನಗಳು ಇಲ್ಲದಿದ್ದರೂ ಅತೀ ಹಳೆಯದೆನ್ನಲಾದ ಔರಾದದ ಅಮರೇಶ್ವರ, ಸಂಗಮದ ಸಂಗಮೇಶ್ವರ ದೇವಾಸ್ಥಾನ, ಕಮಲನಗರದ ಕಲ್ಲೇಶ್ವರ, ರಂಡ್ಯಾಳ ಗ್ರಾಮದ ಚನ್ನಮಲ್ಲಪ್ಪನ ಮಠ ಹಾಗೂ ದೇವಾಲಯ, ಮುಧೋಳದ ಮಠ ಹಾಗೂ ಮಹಾದೇವ ಮಂದಿರ, ಕರಕ್ಯಾಳದ ಮಹಾದೇವನ ಮಂದಿರ, ಯನಗುಂದಿಯಯ ಬಸವಣ್ಣ, ಎಕಂಬಾದ ಹಣಮಂತನ ಹಳೆಯ ಗುಡಿಯ ಹಜಾರ, ದಾಬ್ಕಾದ ಭವಾನಿ ಮಂದಿರ, ಬಿಜ್ಜಲಗಾಂವ ಭವಾನಿ ಮಂದಿರ, ಹೋಳಸಮುದ್ರದ ಹರನಾತ ಬಾಬಾ ಗುಡಿ, ಡೋಣಗಾಂವ ಹಾವಗಿಸ್ವಾಮಿ ಮಠ, ಭಕ್ತಮುಡಿ ದೇವಾಲಯ ಹೆಡಗಾಪೂರ ಮಠ ಮತ್ತು ಮಹಾದೇವನ ಮಂದಿರ, ಬಸವಣ್ಣನ ಖೋರಿ (ಕಣವೆಕೊಳ) ಡಿಗ್ಗಿಯ ಮಡಿವಾಳೇಶ್ವರ ದೇವಾಲಯ ಪ್ರತಿ ಊರ ಹೊರಗೆ ಹನುಮಪ್ಪ ಇದ್ದಂತೆ ಊರ ಮದ್ಯದಲ್ಲಿ ಲಕ್ಷ್ಮಿ ಮಂದಿರಗಳು ಇವೆ. ನೂರಾರು ಸಣ್ಣ ಪುಟ್ಟ ದೇವರುಗಳ ಸಂಖ್ಯೆ ಹೇಳಲಾರದಷ್ಟು ಇವೆ. ಇದನ್ನು ಸಂಸ್ಕೃತಿಯ ಹಿನ್ನಲೆಯಲ್ಲಿ ಮೂಢ ನಂಬಿಕೆಗಳ ಅಂದಾನುಕರಣೆಯ ದಾರಿಯಲ್ಲಿ ಹೋದಂತೆ ಕಂಡು ಬರುತ್ತದೆ. ಈಗಿನ ಹಿಂದೂ ಧರ್ಮ ಲಿಂಗಾಯತ ಇಸ್ಲಾಂ ಕ್ರಿಶ್ಚನ್ ಬೌದ್ಧ, ವೈಷ್ಣವ, ಜೈನ ಇತ್ಯಾದಿ ಧರ್ಮಗಳ ಅನುಯಾಯಿಗಳು, ಭೋಧಕರು, ಗುರುಗಳು, ವೈಜ್ಞಾನಿಕ ತಥ್ಯಕ್ಕೆ ಮಾರು ಹೋಗಿ ಅಂಧಾನು ಕರಣಿಗಳು ಡಂಭಾಚಾರಗಳು, ಕುರಿಕೊಣ, ಕೊಯುವುದು, ಬಾಲಕರ ಬಲಿ ಕೊಡುವುದು ಮುಂತಾದವು ಸಂಪೂರ್ಣ ಇಲ್ಲವಾಗಿದೆ. ಇದು ಶುಭ ಸೂಚಕ ಲಕ್ಷಣಗಳು.

ಈ ದೇವಸ್ಥಾನಗಳ, ಮಠ ಮಾನ್ಯಗಳ, ದರ್ಗಾಗಳ, ಕ್ರಿಶ್ಚನ ಮಿಷನರಿಗಳ ಮುಖಾಂತರ ಅವರವರ ಧಾರ್ಮಿಕ ವೈಚಾರಿಕ, ಸಾಂಸ್ಕೃತಿಕ, ಶೈಕ್ಷಣಿಕ ಕಲೆಯ ಪರಮಾವಧಿಯ ಫಲಪುಷ್ಪಗಳು ಬಿಡುತ್ತವೆ. ಈ ಫಲ ಪುಷ್ಪಗಳು ಅನೇಕವಾದರೂ, ಫಲಪುಷ್ಪಗಳೇ ನವಿಲುಗರಿಯ ಬಣ್ಣ ಹಲವಾದರೂ ನವಿಲು ಒಂದೇ ಕಾಮನ

ಬಿಲ್ಲಿನಲ್ಲಿ ಬಣ್ಣಗಳು ಏಳಾದರೂ ಕಾಮನ ಬಿಲ್ಲು ಒಂದೇ ಹಾಗೇಯೇ ದೇವರ ನಾಮಗಳು ಹಲವಾದರೂ ದೇವರು ಪೂಜೆಗೊಂಬುದು ಹಳೆ ಪದ್ಧತಿಯಾದರೂ ದೇವರು ನ್ಯಾಯ, ಸತ್ಯ ಒಂದೇ ಇಲ್ಲಿಯ ಜನತೆ ಆದರ್ಶ ಪ್ರೀಯರು ಇಲ್ಲಿಯವರ ಭಾವನೆ ಹೆಗೆ ಇಂಗ್ಲೀಷನಲ್ಲಿ ಹೇಳುತ್ತಾರಲ್ಲಾ "East or West home is the Best" ಅನ್ನುವಂತೆ ಸುಖಪುರುಷರು ಕಷ್ಟದಲ್ಲಿ ಸುಖವನ್ನು ಕಂಡವರು ಇಲ್ಲಿಯವರು.

ಇಲ್ಲಿಯ ಹವಾಗುಣ ಅತೀ ಉತ್ತಮವಾದದ್ದರಿಂದ ಬಡತನ ಇದ್ದರೂ ಹಬ್ಬ ಹರಿ ದಿನಗಳಲ್ಲಿ ಜಾತ್ರೆ ಉತ್ಸವಗಳಲ್ಲಿ ಆಟ ಪಂದ್ಯಾಟಗಳಲ್ಲಿ, ನಕ್ಕುನಲಿದು ಪರಮಾನಂದ ಪಡೆಯುತ್ತಾರೆ. ಒಕ್ಕೊರಲಿನ ಏಕತೆ ಇಲ್ಲಿ ಕಂಡು ಬರುತ್ತದೆ. ಜನಪದರು ಹೇಳಿದಂತೆ 'ನನರಾಮ ನನಗೆ ಬಡವೇನ ಎಂಬಂತೆ'ಈ ತಾಲ್ಲೂಕಿನ ಬಾಬತ್ತಿನಲ್ಲಿ ಯಾವ ಒಳ್ಳೆಯ ಕಾಯಕಕ್ಕೂ ಎಲ್ಲರ ಸಹಕಾರ ಸ್ನೇಹ ಇರುತ್ತದೆ. ಅತ್ಯಂತ ಸುಖ ಇಲ್ಲಿ ಪ್ರತಿ ಧರ್ಮದವರು ಕಂಡು ಕೊಂಡಿದ್ದಾರೆ. ಅದೇ ಸತ್ಯ ನ್ಯಾಯ ದಯಾಪರರಂತೆ ಅನುಕರಣೆ ಭಾರತ ಸ್ವಾತಂತ್ರ್ಯ ವಿಚಾರವಾಗಿ ಬಸವಣ್ಣನವರ ಪ್ರಕಾರ ಬೆಳಕಿನಲ್ಲಿ ಈ ತಾಲ್ಲೂಕು ಆಜ್ಞಾನವೆಂಬ ಅಂಧಕಾರ ಮೂಲೆ ಗುಂಪು ಮಾಡಿದೆ. ಈಗಿನ ಸಂಸ್ಕೃತಿ ಒಂದು ಚೌಕಟ್ಟಿನಲ್ಲಿ ಅರ್ಥ ಪೂರ್ಣವಾಗಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಈ ಸಂಸ್ಕೃತಿಯ ತೊಟ್ಟಿಲುಗಳು ನಮ್ಮ ತಾಲ್ಲೂಕಿನ ಅನೇಕ ಹಳ್ಳಿಗಳಲ್ಲಿ ತೂಗುತ್ತಿರುತ್ತವೆ ಇವುಗಳಲ್ಲಿ ಕೆಲವು ಮುಖ್ಯ ಊರುಗಳು ದೇವಾಲಯ ಸ್ಥಳ ಕಾರ್ಯಚರಣೆಗಳು, ಜಾತ್ರೆಗಳು, ಉತ್ಸವಗಳು, ಸ್ಥೂಲವಾಗಿ ತಿಳಿದುಕೊಳ್ಳುವುದು ಹಿತಕರ.

***ಔರಾದ (ಬಿ) ಪಟ್ಟಣ ಪಂಚಾಯತಿ:-***

ಪಟ್ಟಣದ ಮಧ್ಯಭಾಗದಲ್ಲಿ ಅಮರೇಶ್ವರ ದೇವಸ್ಥಾನ ಇದ್ದು ಬಹಳ ಪ್ರಾಚೀನವಗಿದೆ. ಇಲ್ಲಿ ಹಿಂದಿನಿಂದ ನಡೆದು ಬಂದ ಗೂಳಿ ದನಗಳಿಗಾಗಿ, ಗೋ ಶಾಲೆ, ಪ್ರವಾಸಿಗರಿಗಾಗಿ ಧರ್ಮಶಾಲೆ, ಇದ್ದು ಇದರ ಇತರ ಭಾಗದ ಗೋಡೆಯಲ್ಲಿಯ ಕಲ್ಲಿನಲ್ಲಿ ಮೈನಳಿ ಲಿಪಿಯಲ್ಲಿ ಶಿಲಾಶಾಸನ ಬರೆದಿರುವುದೆಂದು ಕ್ರಿ.ಶ. 1960ರಲ್ಲಿ ಇಲ್ಲಿಗೆ ಆಗಮಿಸಿದ ಶ್ರೀ ತಿರುಮಲೆ ತಾತಾಚಾರ್ಯ ಶರ್ಮಾರವರು ಪ್ರಕಟಿಸಿದುದಾಗಿದೆ. ಈ ಶಾಸನದಲ್ಲಿ ಮಂದಿರದ ದಕ್ಷಿಣಕ್ಕೆ ಕೂಗಳತೆಯ ಮೇಲೆ ಒಂದು ಚಂದನ ಕರೆಯುಂಟು ಅಲ್ಲಿಯ ಸಾಲಿನಿಂದ ಜನರು ವಾಸಿಸುತ್ತಿದ್ದರು. ಅಮರೇಶ್ವರ ದೇವಸ್ಥಾನದ ಕಾರಣ ಅಮರಾವತಿ ಎಂದೇ ಔರಾದಕ್ಕೆ ಕರೆಯುತ್ತಿದ್ದರು. ಮುಂದೆ ಭಿನ್ನಮತಿಯರ ಆಳ್ವಿಕೆಯಲ್ಲಿ ಧರ್ಮವಂತರಿಗೆ ಆತಂಕಗಳು ಧರ್ಮ ಸಂಕಟಗಳು ಬರಲಾರಂಭಿಸಿದವು. ಒಮ್ಮೆ ನಡೆದ ಸಂಗತಿ ಅಂದರೆ, ಅಮರೇಶ್ವರದ ಗೋಶಾಲೆಯಲ್ಲಿ ಇದ್ದ ಘೂಳಿ (ಹೋರಿ) ಗಳ ದಂಡನ್ನು ಅಟ್ಟಿಕೊಂಡು ಭಿನ್ನಮತಿಯರು ಕೊಲ್ಲಲು ನಡೆದರು. ಆದರೆ ಸೊಕ್ಕಿದ ಘೂಳಿ ಎಂದರೆ ಹುಲಿಯ ಶಕ್ತಿ ಚಾಪಲ್ಯ ಪಡೆದಿರುವಂತೆ ಅದನ್ನು ಲೆಕ್ಕಿಸದೆ ಪೂರ್ವದಿಕ್ಕಿಗೆ ಬೆನ್ನು ಹತ್ತಿದಾಗ ಈಗಿನ ಎನಗುಂದಿ ಗ್ರಾಮದಲ್ಲಿ ಹನುಮಂತನ ಮಂದಿರ ಕಡೆಗೆ ನಡೆಯಿತು. ಅಲ್ಲಿ ಮಂದಿರವನ್ನು ಕಂಡ ಭಿನ್ನಮತಿಯರು ಮೂರ್ತಿಯನ್ನು ಒಡೆದು ಪುಡಿ ಮಾಡಲು ಹವಣಿಸಿದಾಗ ಈ ಘೂಳಿ ಆತನನ್ನು ತುಳಿದು ಕೊಂದೆ ಬಿಟ್ಟಿತು. ಆಗ ಊರ ಜನ ದಂಗು ಬಡಿದು ನಡೆದುದನ್ನು ನೋಡಿ ಅದೇ ಮಂದಿರದಲ್ಲಿ ನಂದಿಯ ಮೂರ್ತಿಯನ್ನು ಕಟ್ಟಿದ್ದರು. ಅದು ಪ್ರತ್ಯಕ್ಷ ದೊಡ್ಡ ತಳಿ ಹೋರಿಗಿಂತಲೂ ದೊಡ್ಡದಾಗಿದೆ. ಅಲ್ಲಿಗೆ ತಾಲ್ಲೂಕಿನ ದೂರದ ಭಕ್ತರು ಬಂದು ನೋಡಿ ಭಯ ಭಕ್ತಿಯಿಂದ ನಮಿಸುತ್ತಾರೆ. ಆದರೆ ಇತ್ತ ಅಮರೇಶ್ವರದ ಗೋಶಾಲೆಯಲ್ಲಿ ಗೋವುಗಳನ್ನು ಲೂಟಿ ಮಾಡಿ ಅವುಗಳ ಪ್ರಾಣ ಹೀರುವ ತವಕದಲ್ಲಿದ್ದ ಭಿನ್ನಮತಿಯರು ಊರ್ಧ್ವಲಿಂಗಕ್ಕೆ ಸುತ್ತಿಗೆ ಹಾರೆಯಿಂದ ದಣಿವಾಗುವವರೆಗೆ ಏಟು ಕೊಟ್ಟಾಗ ಲಿಂಗ ಭಿನ್ನವಾಗಿದೆ. ಅದರಲ್ಲಿ

ಏಳು ರಂಧ್ರಗಳು ಕಾಣಿಸಿಕೊಂಡು ಪ್ರತ್ಯಕ್ಷ ಶಿವನ ರುದ್ರವತಾರ ತಾಳಿ ಭಯಂಕರ ಗುಡುಗಿದ ಧ್ವನಿಯಾಯಿತೆಂದು ಅದರ ಧ್ವನಿಯ ಭೀತಿಯಿಂದ ಆ ಕೇಡಿಗಳು ಅಲ್ಲಿಯೇ ಹೃದಯಘಾತದಿಂದ ಮಡಿದರೆಂಬುದು ಗೊತ್ತಾಗುತ್ತದೆ. ಆದರೆ ಆ ಕಥೆ ಅಲ್ಲಿಗೆ ಮುಗಿಯದೇ ಮುಸಲ್ಮಾನರ ಅಧಿಕಾರದಿಂದಾಗಿ ಅಮರೇಶ್ವರನ ನಾಮವಾದ ಅಮರಾವತಿ ಹೆಸರು ಮಾಯವಾಗಿ ಅವರಾದ ಎಂದು ಬದಲಾಯಿತು. ಇದು ಸೂಫಿ ಭಾಷೆಯ ಶಬ್ದವಾಗಿದೆ. ಇದರ ಭಜನ ಮಂಡಳಿ, ಭಕ್ತ ಮಂಡಳಿ ಎಂಬುದು ಗೊತ್ತಾಗಿದೆ. ಹಿರಿಯರ ಅಭಿಮತದಂತೆ ಅಮರೇಶ್ವರ ನಾಮದಿಂದ ಪಟ್ಟಣಕ್ಕೆ ಅಮರಾವತಿ ಎಂದೂ: ಬರಬರುತ್ತ ಅಮರಾವತಿ ಎಂದು ಮುಂದೆ ಅಮರಾದಿ ಹೀಗೆ ಈಗಿನ ಅವರಾದಿ ಆಗಿದೆ ಎನ್ನುತ್ತಾರೆ. ಈಗ ಎಲ್ಲೆಡೆ ಬೋರ್ಡುಗಳು ಬರೆಸುವಲ್ಲಿ ಹೆಚ್ಚಾಗಿ ಔರಾದ ಎಂದು ಬರೆಸುತ್ತಾರೆ.

ಈ ಅಮರೇಶ್ವರ ದೇವರ ಔಚಿತ್ಯವನ್ನು ಕೆಲವರು ಮಾಡಿ ಆನಂದ ಪಟ್ಟಿದ್ದಾರೆ. ಹೀಗೆ ಇಲ್ಲಿ ಪ್ರತಿ ವರ್ಷ ಅತಿ ವೈಭವದಿಂದ ಜಾತ್ರೆ ಉತ್ಸವಗಳು ನಡೆಯುತ್ತವೆ. ಈ ಜಾತ್ರೆ ಮೊಟ್ಟ ಮೊದಲು ವಿಜೃಂಭಣೆಯಿಂದ ತುಂಬುವಂತೆ ನೇತೃತ್ವವಹಿಸಿದವರು ಶ್ರೀ ಶಂಕರರಾವ ದೇಶಮುಖ ಎಂಬುವರು. ಇದು 1950 ರಿಂದ ಪ್ರಾರಂಭಗೊಂಡಿತು. ಈ ಉತ್ಸವ ಪ್ರತಿ ವರ್ಷ ಮಹಾ ಶಿವರಾತ್ರಿಯ ಐದು ದಿನಗಳವರೆಗೆ ನಡೆಯುತ್ತದೆ. ತೇರು ಎಳೆಯುತ್ತಾರೆ. ನೂರಾರು ಹೊಸ ಅಂಗಡಿಗಳು ನೂರಾರು ಕಲೆಗಾರರು ಬಂದು ಸೇರುತ್ತಾರೆ. ಅನೇಕ ವೃತಿ ನಾಟಕ ಸಂಘ ಕಂಪನಿಗಳು ಹರ್ಷೋಲ್ಲಾಸ ತಂದು ಕೊಡುತ್ತವೆ. ಆವಾಗ ಹಸಿರುಟ್ಟ ಪ್ರಕೃತಿಯ ಹಿಂಗಾರಿ ಬೆಳೆಯ ಲವಲವಿಕೆಯಲ್ಲಿ ಈ ಹಬ್ಬ ಮತ್ತಷ್ಟು ಶೋಭೆ ತಂದು ಕೊಡುತ್ತದೆ. ಅಲ್ಲದೆ ದನಗಳ ಜಾತ್ರೆ, ವಸ್ತು, ಪ್ರದರ್ಶನ ತೋಟದ ಗದ್ದೆಗಳಲ್ಲಿ ಬೆಳೆದ ವಿಚಿತ್ರ, ಆಕಾರದ ತರಕಾರಿ ಹಣ್ಣುಗಳು ರೈತರು ವಸ್ತು ಪ್ರದರ್ಶನಕ್ಕಾಗಿ ಇಡುತ್ತಾರೆ. ಕುಸ್ತಿ ಆಟಗಳು ಜರುಗುತ್ತವೆ. ಗೆದ್ದವರಿಗೆ ಬಹುಮಾನ ಕೊಟ್ಟು ಪ್ರೋತ್ಸಾಹಿಸುತ್ತಾರೆ. ಮದ್ದಿನ ಕುಳ್ಳಿ ಘಟಾಕಡಿ ಹಾರಿಸಿ ಮಕ್ಕಳು, ಯುವಕರು, ಮುದಕರು ಹರ್ಷೋಲ್ಲಾಸದಲ್ಲಿ ಆನಂದಿತರಾಗುತ್ತಾರೆ.

ಇದು ಆಂಧ್ರ ಮತ್ತು ಮಹಾರಾಷ್ಟ್ರದ ಗಡಿ ಪ್ರದೇಶದಲ್ಲಿ ಇದ್ದುದರಿಂದ ಹೊರಗಿನ ರಾಜ್ಯದವರು ಸಾವಿರಾರು ಸಂಖ್ಯೆಯಲ್ಲಿ ಬಂದು ತಮ್ಮ ಭಕ್ತಿ ಶಕ್ತಿಯನ್ನು ಮೆರೆಯುತ್ತಾರೆ. ಪಟ್ಟಣದ ಹಿರಿಮೆಯನ್ನು ಎತ್ತಿ ಕೊಂಡಾಡುತ್ತಾರೆ. ಮಿಠಾಯಿ, ಅರಳು ಕಲ್ಲು, ಸಕ್ಕರೆ ಪ್ರಸಾದವೆಂದು ಕೊಂಡು ತಮ್ಮ ವಾಸಕ್ಕೆ ತೆರಳುತ್ತಾರೆ. ಊರ ದೇವತೆಗಳು ಭಕ್ತರಿಂದ ಪೂಜೆಗೊಳ್ಳುತ್ತವೆ ಅವುಗಳಲ್ಲಿ ಇನ್ನೂ ಕೆಲ ದೇವತೆಗಳೆಂದರೆ ಪಾಂಡುರಂಗ ಮಂದಿರ, ಕೇದಾರೇಶ್ವರ ಮಂದಿರ, ವೀರಭದ್ರೇಶ್ವರ ಮಂದಿರ, ಲಕ್ಷ್ಮಿ ಮಂದಿರ, ಮರಗೆಮ್ಮನ ಮಂದಿರ, ಜಾಮಾ ಮಸಿದಿ, ಚರ್ಚ, ಮಸ್ತಾನ ಶಹಾವಲಿ ದರ್ಗಾ, ಮುಂತಾದವುಗಳು ಧಾರ್ಮಿಕ ಚಟುವಟಿಕೆಗಳ ತಾಣಗಳು.

ಪ್ರತಿ ವರ್ಷ ವಾರಕರಿ ಸಂಪ್ರದಾಯದ ಪಾಂಡುರಂಗ ಮಂದಿರದಿಂದ ಪಂಡರಾಪುರಕ್ಕೆ ಪಾದಚಾರಿಯಾಗಿ ಹೋಗುತ್ತದೆ. ಶ್ರಾವಣ ಮಾಸದಲ್ಲಿ ಪ್ರವಚನ ಕೀರ್ತನೆಗಳು ನಡೆಸುತ್ತಾರೆ. ಅಲ್ಲದೆ ಇಲ್ಲಿಯ ಬಸವೇಶ್ವರ ದೇವಾಲಯದಲ್ಲಿ ಪ್ರತಿ ವರ್ಷ ಬಸವ ಜಯಂತಿ ಆಚರಿಸುತ್ತಾರೆ. ಅಲ್ಲದೆ ಸುಪ್ರಭಾತ ಧ್ವನಿವರ್ಧಕದಲ್ಲಿ ನಸುಕಿನಲ್ಲಿ ಬಿತ್ತರಿಸುತ್ತಾರೆ. ಜೈಶಂಕರ ಎಂಬುವರು ಅಮರೇಶ್ವರ ದೇವಾಲಯದ ಶರಣ ಸೇವಕರಾಗಿದ್ದಾರೆ. ಔರಾದ ಒಂದು ಕುಟುಂಬದಂತೆ ಸುಖವಾಗಿ ಬೆಳೆಯಲು ಪುಜ್ಯ ಶ್ರೀ ಕೇದಾರೆ

ಗಣಂಗಳಪ್ಪವರು ಕಾರಣಕರ್ತರು ಇವರು ದಯಾಪರರು ತ್ರೀಕಾಲ ಪೂಜೆ ನಿಷ್ಠರು, ದಾಸೋಹ ಇಟ್ಟವರು ಅಲ್ಲದೇ ಸಂಸಾರದಲ್ಲಿ ಇದ್ದು, ಮಕ್ಕಳ ತಂದೆಯಾಗಿದ್ದು, ಪಾರಮಾರ್ಥ ಗೆದ್ದವರೆಂದರೆ ಯಾರಿಗೂ ಆಶ್ಚರ್ಯವಾಗಬಹುದು. ಆದರೆ ಇದು ಸತ್ಯ ಸಂಗತಿ ಅವರ ನಡೆ ನುಡಿ ಇಂದು ನಮ್ಮ ಸಂಸ್ಕೃತಿಗೆ ಬಣ್ಣವಿದೆ ಎನ್ನಲೂ ಯಾವ ಸಂಶಯವು ಇಲ್ಲ. ಇದರಿಂದ ಔರಾದವು ಧನ್ಯವೆಂದು ಹೇಳಬಹುದು. ಇಲ್ಲಿಯ ಬಸವದಳದವರು, ಬಸವಸಮಿತಿಯವರು, ಸಾಮಾಜಿಕ ಆಧ್ಯಾತ್ಮಿಕ ಸಾಂಸ್ಕೃತಿಕ ಚಟುವಟಿಕೆಗಳನ್ನು ರಚನಾತ್ಮಕವಾಗಿ ಹಮ್ಮಿಕೊಂಡು ಆಧುನಿಕತೆಯ ವಾತಾವರಣ ಬೆಳೆಸುವಲ್ಲಿ ನೈಜ ಜೀವನದ ಅರ್ಥಕೊಡುವಂತೆ ಇರುತ್ತಾರೆ. ಭಕ್ತಿಯ ಕಾರ್ಯಗಳು, ಭಜನಾದಿಗಳನ್ನು ಮಾಡುತ್ತಾರೆ. ಇದಕ್ಕೆ ಸಮೀಪ ತೋರ್ಣಾ, ಮುಗನಾಳ, ಭಂಡಾರ ಕಮ್ಮಟ ಇತ್ಯಾದಿ ಗ್ರಾಮಗಳಲ್ಲಿ ಪ್ರತಿ ವರ್ಷ ಶಕ್ತಿ ಕಾರ್ಯಕ್ರಮ ಇಡುತ್ತಾರೆ. ಈ ಶಕ್ತಿಯಂದರೆ ರಾಮಾಯಣದ ಕಥೆ, ಹನುಮಂತನ ಭಕ್ತಿಯ ಶ್ರೇಷ್ಠತೆಯ ಬಗ್ಗೆ ನಡೆಯುವ ಪುರಾಣ ತಿಂಗಳುಗಟ್ಟಲೆ ಮುಗಿಸಿ ಕೊನೆಗೆ ಜಾತ್ರೆ, ಖಾಂಡು ಮಾಡುತ್ತಾರೆ. ಖಾಂಡು ಎಂದರೆ ಹುಗ್ಗಿ, ಅನ್ನ, ಊರಿಗಲ್ಲದೆ ಸುತ್ತಲಿನ ಭಕ್ತರಿಗೆ ಅನ್ನ ಸಂತರ್ಪಣೆ ಪ್ರಸಾದ ರೂಪದಲ್ಲಿ ಮಾಡುತ್ತಾರೆ.

***ಕಲೆ, ಸಾಹಿತ್ಯ, ಸಂಗೀತ, ಶಿಕ್ಷಣ:-***

ಕುಸ್ತಿ:- ಈ ಕಲೆಯು ಬಹಳ ಪ್ರಾಚೀನವಾಗಿದ್ದು, ಅದು ಔರಾದ ತಾಲ್ಲೂಕಿನಲ್ಲಿ ಜೀವಂತವಾಗಿ ಉಳಿಸಿಕೊಂಡು ಜನ ಬಂದಿದ್ದಾರೆ ಇದನ್ನು ಜಾತ್ರಾ ಸಂಧರ್ಬದಲ್ಲಿ ಮಾತ್ರ ಬಳಸುತ್ತಾರೆ. ಸರಕಾರ ಈ ಕಲೆ ಅಭಿವೃದ್ಧಿಗೆ ಶ್ರುಮಿಸಿದ್ದರೆ ರಾಜ್ಯ ಮತ್ತು ರಾಷ್ಟ್ರಮಟ್ಟದ ಕ್ರೀಡಾ ಪಟುಗಳು ಬೆಳೆಸಬಹುದು.

ಕಲೆ:- ಗೃಹ ಕೈಗಾರಿಕೆಯು ಒಂದು ಉತ್ತಮ ಕಲೆ ಎಂದು ಹೇಳಲಡ್ಡಿ ಇಲ್ಲ ಈ ಎಲ್ಲ ಕಲೆಗಳು ಅರಳಿದ ಕಲೆಗಳು ಇಲ್ಲಿಲ್ಲದಿದ್ದರೂ ಅಲ್ಲಲ್ಲಿ ಮುಗುಳುಗಳಂತೆ ಕಾಣುವ ಕಲೆ ಇಲ್ಲಿದೆ. ಅರಳಿದ ಕಲೆಗೆ ಈ ತಾಲ್ಲುಕಿನ ಒಡೆಯರುಗಳು ಹೆಚ್ಚು ಹಚ್ಚಿಕೊಳ್ಳದಿದ್ದರೂ ರಸವನ್ನು ತೆಗೆಯುವರಾಗಿದ್ದಾರೆ. ಇಲ್ಲಿ ಕೆಲವು ಕಡೆ ಹಳೆ ಮಂದಿರಗಳು ಇದ್ದು, ಖಚಿತ ಇತಿಹಾಸ ಇರದಿದ್ದರೂ ನೋಡಲು ವಿಹಂಗಮಯವಾಗಿದೆ. ಉದಾಹರಣೆಗಾಗಿ ಔರಾದ ಕೆರೆ ಅಗೆಯುವಾಗ ಸಿಕ್ಕ ಸುಂದರವಾದ ಆಳೆತ್ತರದ ಮಹಾವೀರ ಪ್ರಸನ್ನ ವದನನಾಗಿ ಕುಳಿತ ಮೂರ್ತಿಯನ್ನು ನೋಡುವಂತಹದ್ದು, ಕಮಲನಗರ ಸೋಮಲಿಂಗೇಶ್ವರ ಕಲ್ಲಿನ ಮಂದಿರದ ಗರ್ಭ ಗುಡಿಯಲ್ಲಿಯ ಸ್ಥಾವರ ಲಿಂಗ ನಾಲ್ಕು ಅಡಿ ಎತ್ತರವಿದ್ದು, ಉಸುರೆಹರಳು ಕಲ್ಲಿನಲ್ಲಿ ನುಣುಪಾಗಿ, ಸುಂದರವಾಗಿ ಕಟೆಯಲ್ಪಟುದ್ದಾಗಿದೆ. ಎನಗುಂದಿಯ ನಂದಿಯ ಮೂರ್ತಿಯು ಕಲೆಯ ಸಾರಸ್ವತಕ್ಕೆ ಒಳ್ಳಯ ಉದಾಹರಣೆಯಾಗಿದೆ.

ಸಂಗಮದ ಸಂಗಮೇಶ್ವರ ಮಂದಿರ: ಮಂದಿರದ ಗೋಪುರ ಕಲೆ ನೋಡುವಂತಹದಾಗಿದೆ. ಇದೆ ಕಲೆ ಡಿಗ್ಗಿಯ ಮಡಿವಾಳೇಶ್ವರ ಶಿಖರಕ್ಕೂ ಇದೆ.

ಔರಾದ ತಾಲ್ಲೂಕಿನಲ್ಲಿ ಹಳ್ಳಿ ಹಳ್ಳಿಗಳಲ್ಲಿ ಹಿಂದಿನಿಂದಲೂ ನಾಟಕಗಳು, ದೊಡ್ಡಾಟಗಳು, ಡಪ್ಪಿ ನಾಟಕಗಳು, ಕೋಲಾಟ ಹಾಡುಗಾರಿಕೆ ಬಹುರೂಪಿಗಳ ನೃತ್ಯ ಮತ್ತು ಸಂಗೀತ ನಡೆದು ಬಂದಿದೆ. ಬಹುರೂಪಿಗಳು, ಉರ್ದು ಖವಾಲಿಯವರು, ಗೊಂದಲಿಗರು, ಬುಡಬುಡಕಿಯರು, ಭಾರುಡೆ ಹೇಳುವವರು. ಒಡಪು ಅನ್ನುವವರು ಸಂಗೀತವನ್ನು ಬಳಸಿಕೊಳ್ಳುತ್ತಾ ಬಂದಿದ್ದಾರೆ. ಕೆಲವು ಕಲೆಗಳು ಹಿಂದಿನಿಂದಲೂ

ಪ್ರೋತ್ಸಾಹದಿಂದ ಹೆಚ್ಚಿನ ವೈವಿಧ್ಯ ಪಡೆದಿದೆ ಕೆಲವು ಕಲೆಗಳು ಸಾಮಾಜಿಕ ಪ್ರೋತ್ಸಾಹ ಸಿಗದಂತಾದ್ದರಿಂದ ನಶಿಸುತ್ತಿವೆ.

ಸಂಗೀತ:- ತಾಲ್ಲೂಕಿನಲ್ಲಿ ಹಾರ್ಮೋನಿಯಂ ವಾದಕರು, ತಬಲಾವಾದಕರು, ವೀಣಾ ವಾದಕರು, ಮೃದಂಗ ಭಾರಿಸುವ ಕಲೆಗಾರರು ಆಗಿ ಹೋಗಿದ್ದಾರೆ ಅವರಲ್ಲಿ ಶ್ರೀ ಅಡಿವೆಪ್ಪಾ ಸ್ವಾಮಿ ವಡ್ಡೆ ಕರಕ್ಯಾಳ, ತಬಲಾ ಹಾಗು ಹಾರ್ಮೋನಿಯಂ ವಾದದಲ್ಲಿ ಮೇಲುಗೈ ಸಾದಿಸಿದ್ದರು. ಕಮಲನಗರದ ಶ್ರೀಮತಿ ಶ್ರೀದೇವಿ ಸೋಲಾಪುರೆಯವರು ಹಾರ್ಮೋನಿಯಂ ವಾದನದೊಂದಿಗೆ ವಚನ ಗಾಯನದಲ್ಲಿ ಪಾರಂಗತರಾಗಿದ್ದರು. ಸದ್ಯಕ್ಕೆ ಬೀದರ ಜಿಲ್ಲೆಯಲ್ಲೆ ಪ್ರಸಿದ್ಧವಾದ ಹಾರ್ಮೋನಿಯಂ ವಾದಕ ಮತ್ತು ಅದಕ್ಕೂ ಉತ್ತಮವಾಗಿ ತಬಲಾ ವಾದನದಲ್ಲಿ ಹೆಸರಾದವರೆಂದರೆ ಕೂಡಲ ಸಂಗಮದ ಶ್ರೀ ಭೀಮರಾವ ಮಾಸ್ತರರು ಮತ್ತು ಶ್ರೀ ಬಸವಣ್ಣಾ ಮಾಸ್ತರರು. ಶ್ರೀ ಭೀಮರಾವ ಮಾಸ್ತರರು 1984ರಲ್ಲಿ ರಾಷ್ಟ್ರೀಯ ಸಂಗೀತ ಸಮ್ಮೇಳನ ಕಲ್ಕತ್ತಾದಲ್ಲಿ ಒಬ್ಬ ವೀಣಾವಾದಕರಿಗೆ ತಬಲಾ ಸಾಥ ನೀಡಿದ್ದಾರೆ. ಅದು ದೇಶದ ಎಲ್ಲಾ ಬಾನುಲಿ ಕೇಂದ್ರಗಳಿಂದ ಬಿತ್ತರಗೊಂಡಿದೆ.

ಕಮಲನಗರದ ಶ್ರೀ ಫತ್ತುಮಿಯ್ಯಾ ಎಂಬುವವರು ಸುಶ್ರಾವ್ಯ ಕಂಠ ಹಾಗೂ ನುರಿತ ಹಾರ್ಮೋನಿಯಾ ವಾದಕರು ಇವರ ಕಲೆ ಎಂಥ ವ್ಯಗ್ರರೂಪಿಗಳಿಗೂ ಮುಗ್ಧ ಮೌನರನ್ನಾಗಿ ಮಾಡುತ್ತದೆ. ಇವರು ಭೀಮರಾವ ಮಾಸ್ತರರೊಂದಿಗೆ ಕೂಡಿ ಜಿಲ್ಲೆಯ ನೂರಾರು ಹಳ್ಳಿಗಳಲ್ಲಿ ನಾಟಕ, ನೃತ್ಯ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ವಚನ ಜಾನಪದ ಇತ್ಯಾದಿ ಹಾಡುಗಳನ್ನು ಕಲಿಸಿ ರಸದೌತಣ ನೀಡಿದ್ದಾರೆ. ಶ್ರೀ ಬಸವಣಪ್ಪಾ ಮಾಸ್ತರರು ಶಿಷ್ಯ ಮಕ್ಕಳು ಸಂತಪೂರದವರಿದ್ದರೂ, ಮಾಣಿಕನಗರದಲ್ಲಿ ಮುಂದಿನ ವ್ಯಾಸಂಗದೊಂದಿಗೆ ತಬಲಾ ಹಾಗು ಹಾರ್ಮೋನಿಯಂನಲ್ಲಿ ದಂಗು ಬಡಿಸುವ ತರಬೇತಿಯನ್ನು ಪಡೆದಿದ್ದಾರೆ. ಇದು ತಾಲ್ಲುಕಿಗೆ ಹೆಮ್ಮೆಯ ವಿಷಯ.

ನಮ್ಮ ತಾಲ್ಲುಕಿನ ಗೃಹ ಕೈಗಾರಿಕೆಗಳು ಕಲಾತ್ಮಕವಾಗಿಯೆ ಇವೆ ಯಾವುದೊಂದು ಬುಟ್ಟಿ ಹೆಣೆಯುವುದು ಚಪ್ಪಲಿ ಮಾಡುವುದು, ಎತ್ತಿನ ಬಂಡಿ ಮಾಡುವುದು ಮುಂತಾದವುಗಳಲ್ಲಿ ಕಲೆಯನ್ನು ಮೆಚ್ಚುಗೆ ಬರುವಂತೆ ಆಕರ್ಷಕ ನಮೂನೆಯಲ್ಲಿ ಮಾಡಿ ತಮ್ಮ ವ್ಯಾಪಾರ ಬೆಳೆಸಿಕೊಳ್ಳುತ್ತಾರೆ. ಈ ಕಲೆ ಜೀವನ ಕಲೆಯೇ ಸರಿ.

**ಸಾಹಿತ್ಯ:-**

ಈ ತಾಲ್ಲೂಕಿನಲ್ಲಿ ಸಾಹಿತ್ಯ ಬೆಳೆದು ಬಂದಿಲ್ಲವೆಂದೇ ಹೇಳಬೇಕಾಗುತ್ತದೆ. ಆಧಾರ ಸಹಿತ ಪುರಾವೆಗಳು ಸಿಗದಿದ್ದರೂ ನೃಪತುಂಗ ಕವಿ ಹೇಳಿದಂತೆ ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಿ ಮತಿಗಳು ಆಗಿದ್ದಾರೆ. ಅಲ್ಲಲ್ಲಿ ಎಲೆಯ ಮರೆಯ ಕಾಯಿಯಂತೆ ಮಠದ ಗುರುಗಳು ಹಿರಿಯ ಅಧ್ಯಾತ್ಮ ಜೀವಿಗಳು ತ್ರಿಪದಿ, ದ್ವಿಪದಿಗಳಲ್ಲಿ ಭೂಲಾಯಿ ಹಾಡು, ಲಾವಣಿ ಪದ, ಗೀಗಿ ಪದ, ಬಾಯಿಯಿಂದ ಉಚ್ಚರಿಸಿ ಬೇರೆಯವರಿಗೆ ಕಲಿಸಿ ಕೊಡುತ್ತಾರೆ. ಶೃತಿರೂಪ ಮಾತ್ರ ಹೆಚ್ಚಿನ ಹೆಂಗಳಯರಲ್ಲಿ ಒಕ್ಕಲು ಮಕ್ಕಳಲ್ಲಿ ಸಂಗ್ರಹವಾಗಿದ್ದು ಅವರು ಆನಂದ ಪರವಶತೆಯಲ್ಲಿ ಹಾಡುವಾಗ ಕೇಳಿ ಆಶ್ಚರ್ಯವಾಗುತ್ತದೆ.

ಏಕೆಂದರೆ ಆ ಹಾಡುಗಳಲ್ಲಿ ಹೃದಯದವಂತಿಕೆ ಇದೆ. ಕೊರಳು ಕತ್ತರಿಸುವ ಪದಗಳು, ಅತ್ತೆ–ಸೊಸೆ, ತಾಯಿ–ಮಗ, ಗಂಡ–ಹೆಂಡತಿ, ಮಲತಾಯಿ–ಮಲಮಕ್ಕಳು, ಬಣ–ಬಣಗಳ ಜಾತಿ, ಭೇದ, ಕ್ಷುಲಕ ವಿಷಯ ಎಂದು ತಿಳಿಯದೆ ಉಚ್ಚಮಟ್ಟದ ಜ್ಞಾನ ಕೊಡುವ ಗೀತೆಗಳು ಪ್ರಚಾದಲ್ಲಿ ಇವೆ. ಇದು ಜನಪದ ಸಾಹಿತ್ಯವೆನಿಸಿದರೂ. ಒಬ್ಬರೂ ಬರೆದು ದೊಡ್ಡಸ್ಥಿಕೆ ಮರೆಯದೆ ಆ ಪರಮಾತ್ಮನಿಕೆ ಅರ್ಪಣೆ ಮಾಡಿದ್ದಾರೆ ಎನ್ನಬಹುದು.

ಈ ಜನಪದ ಎನಿಸುವ ಸಾಹಿತ್ಯವನ್ನು ಇಚ್ಛುಕ ಉದಯೋನ್ಮುಖ ಕವಿಗಳು ಸಂಶೋಧನೆ ಮಾಡಬೇಕಾಗಿದೆ. ಆ ಕಾರ್ಯವು ಸ್ವಲ್ಪಮಟ್ಟಿಗೆ ಆಗುವ ಸಾಧ್ಯತೆಗಳಿವೆ. ಇಲ್ಲಿ ತರುಣ ಕವಿಗಳು ಭಾಲ್ಕಿ ಕಾಲೇಜಿನ ಅನುಭವಿ ಪ್ರಾಧ್ಯಪಕರಾದ ಶ್ರೀ ಜಿ.ಬಿ.ವಿಸಾಜಿಯವರು ಸತತ ಪ್ರಯತ್ನದಿಂದ ಬೆಳೆಯಲೆಂದು ಸ್ವತಂತ್ರ್ಯ ವಿಚಾರಕ್ಕೆ ಆಸ್ಪದ ಕೊಟ್ಟು ತಯಾರಾಗುವಂತೆ ಪ್ರಯತ್ನಿಸಿದರು.

ವಿಮರ್ಶೆ ಮಾಡಿ ಕುಂದುಕೊರತೆಗಳನ್ನು ಹೇಳುತ್ತಿರುತ್ತಾರೆ. ಅಲ್ಲದೆ ಅವರ ಸಂಪಾದಕತ್ವದಲ್ಲಿ ಚೆಂಬೆಳಕು ವಿನಯ ಭಂಡಾರಿ ಶಾಂತಿ ಕಿರಣಗಳಲ್ಲಿ ಸಂಧಿಯನ್ನು ಕೊಟ್ಟು ಉದಯನ್ಮುಖ ಕಲೆಗಳಿಗೆ ಲೇಖಕರಿಗೆ ಉತ್ತೇಜಿಸಿದರು. ಉತ್ತೇಜಿಸುತ್ತಿದ್ದಾರೆ. ಬಿ.ಎಂ. ಶ್ರೀ ಕಂಠಯ್ಯಾನವರು ಸಾಹಿತ್ಯ ರಚಿಸುತ್ತ ಸಾಹಿತಿಗಳನ್ನು ತಯಾರು ಮಾಡಿದಂತೆ ತಯ್ಯಾರು ಮಾಡಿದ್ದಾರೆ.

ಅಲ್ಲದೆ ಕಮಲನಗರದಲ್ಲಿ ಮಡಿವಾಳಪ್ಪಾ ಹಾಗೂ ಅವರ ಧರ್ಮ ಪತ್ನಿ & ಧನಶೆಟ್ಟಿಯವರು ಸುಶ್ರಾವ್ಯವಾಗಿ ಹಾಡುತ್ತಾ ಊರಿನ ವಾತಾವರಣ ಸಂಗೀತಮಯ ಗೊಳಿಸಿದ್ದಾರೆ. ಫತ್ರುಮಿಯ್ಯ, ಭೀಮರಾವ, ಬಸವಣಪ್ಪ ಮುಂತಾದ ಕಲಾಕಾರರು ಅನೇಕ ಕಡೆ ಸಂಗೀತ ಕಛೇರಿ ನಡೆಸಿಕೊಟ್ಟು ಸಮಾಜದಿಂದ ಮನ್ನಣೆ ಪಡೆದಿದ್ದಾರೆ 70 ರ ದಶಕಗದಲ್ಲಿ ಔರಾದ ತಾಲ್ಲೂಕಿನ ಮುಖ್ಯ ಊರುಗಳ ಚೌರಸ್ತೆಗಳಲ್ಲಿ ಅನೇಕ ಮಹಾ ಪುರುಷರ ಪ್ರತಿಮೆಗಳನ್ನು ಸ್ಥಾಪಿಸಿದ್ದಾರೆ. ಅವು ಊರಿನ ಶೋಭೆಯನ್ನು ಹೆಚ್ಚಿಸುತ್ತವೆ. ಆಯಾ ಮೂರ್ತಿಗಳ ಸ್ಥಾಪನೆಯಿಂದ ಆ ಓಣಿಯ ಬಸವೇಶ್ವರ ಚೌಕ, ಅಕ್ಕಮಹಾದೇವಿ ಚೌಕ, ಆಯಾ ಬೀದಿ, ಶಿವಾಜಿ ಬೀದಿ, ಹರಳಯ್ಯನ ಬೀದಿ, ಅಂಬೇಡ್ಕರ ಬೀದಿ, ಅಶೋಕನಗರ ಎಂದು ಹೆಸರು ಪಡೆದು ನಿಂತಿವೆ. ಈ ಶಿಲ್ಪಗಳು ಮಾಡುವಲ್ಲಿ ಈ ತಾಲ್ಲೂಕಿನ ಸೋನಾಳ ಗ್ರಾಮದ ಶ್ರೀಕಾಂತ ಸ್ವಾಮಿ ಮತ್ತು ಔರಾದದ ಶ್ರೀ ವೈಜಿನಾಥಪ್ಪಾ ಪಟ್ನೆ, ಶ್ರೀ ಶಿವರುದ್ರಪ್ಪಾ ಭಾಮಣೆ ಸಂತಪೂರ ಮುಂತಾದವರು ಅನೇಕ ವ್ಯಕ್ತಿಗಳ ಪ್ರಾಣಿಗಳ ಮೂರ್ತಿಗಳನ್ನು ರಚಿಸಿ ಸಮಾಜಕ್ಕೆ ನೀಡಿದ್ದಾರೆ. ಇದು ಅವರ ಕೈಗಾರಿಕೆ ಮೂಲಾಗಿದೆ.

ಈ ತಾಲ್ಲೂಕಿನಲ್ಲಿ ಉದಯನ್ಮೋಖ ಚಿತ್ರಕಾರರು ಮುಂದೆ ಕೀರ್ತಿ ತರುವ ಸಂಭವನಿಯಲ್ಲಿದ್ದಾರೆ. ಅವರೆಂದರೆ ಕಮಲನಗರದ ಮನೋಹರ ಪಾಟೀಲ, ಚಿತ್ರಕಲೆಯಲ್ಲಿ ಪುಣೆಯಲ್ಲಿ ಉಚ್ಚ ವ್ಯಾಸಂಗ ಮಾಡಿದ್ದಾರೆ. ಅವರಿಗೆ ಫಿಲ್ಮ ಇಂಡಸ್ಟ್ರಿ ಬಾಂಬೆಯಲ್ಲಿ ಕೆಲಸ ಮಾಡುವ ಅವಕಾಶ ಇದೆ. ಔರಾದದಲ್ಲಿ ಬ್ರಹ್ಮಚಾರಿ ಎಂಬುವರು ಚಿತ್ರ ಬಿಡಿಸುವವಲ್ಲಿ ನಿಪುಣರಾಗಿದ್ದಾರೆ. ಇದರಿಂದ ಗೊತ್ತಾಗುವದೇನೆಂದರೆ ಕಲಾಕಾರರು ಹುಟ್ಟಿ ಬರುತ್ತಾರೆ. ತಯ್ಯಾರು ಮಾಡಬೇಕೆಂದರೆ ಆಗಲು ಸಾಧ್ಯವಿಲ್ಲ. ಶ್ರೀ ಸಂಗಪ್ಪಾ ದ್ಯಾಡೆ ಎಂಬುವರು ಮನ್ಮಥಪ್ಪಾ ಶೆಟಕಾರ ಹಾಗೂ ಗಡಿಕುಶನೂರಿನ ಅಡಿವೆಪ್ಪ ಪಟ್ನೆ ಇವರೆಲ್ಲ ನಾಮಫಲಕವನ್ನು ರಂಜಕವಾಗಿ ಬಿಡಿಸುತ್ತಾರೆ.

ಈ ತಾಲ್ಲೂಕಿನ ಕೆಲವೆಡೆ ಪ್ರಸಿದ್ಧ ಬಹುರೂಪಿಗಳ ಮಂಡಳಿ ಇದ್ದು ಇವರು ತಮ್ಮ ಜಾನಪದ ಗೀತೆಗಳು, ಸಂಸ್ಕೃತಿ, ಸಾರುವ ಗೀತೆಗಳು, ತತ್ವಪದಗಳು, ನೃತ್ಯ ಅಭಿನಯದೊಂದಿಗೆ ಕಥೆ ದೃಷ್ಟಾಂತ, ಪುರಾಣಗಳನ್ನು ಹೃದಯಂಗಮವಾಗಿ ಮಾಡಿ ತೋರಿಸುತ್ತಾರೆ. ಭಸ್ಮಾಸುರವಧೆ, ಬಸವೇಶ್ವರರ ಕಲ್ಯಾಣ ಕ್ರಾಂತಿ ಕೀಚಕನವಧೆ, ಕೃಷ್ಣನಲೀಲೆ ಮುಂತಾದವನ್ನು ಲಯಬದ್ಧವಾಗಿ ಹಾಡಿ ಅಭಿನಯಿಸಿ ಹಳ್ಳಿಗರ ಮನ ಸೆಳೆಯುತ್ತಾರೆ. ಇತ್ತಿತ್ತಲಾಗಿ ಶ್ರೀ ಮಹೇಶ ಪಾಟಿಲ, ಅಬ್ರಾಹಿಂ ಇಸ್ಮಾಯಿಲ್, ಕಾಶಿನಾಥ ಶೆಡಗಾಪೂರ ರಾಜ್ಯ ಮಟ್ಟದ ಕಲಾವಿಧರಾಗಿ ತಾಲ್ಲೂಕಿನ ಕೀರ್ತಿ ಹೆಚ್ಚುಸುತ್ತಿದ್ದಾರೆ.

ಉದಯೋನ್ಮುಖ ಲೇಖಕರಲ್ಲಿ ಕವಿಗಳಲ್ಲಿ ಶರಣರಾದ ಶ್ರೀ ಸಿದ್ಧರಾಮ ಬೆಲ್ದಾಳ ಕೌಠಾ (ಬಿ), ಡಾ: ವೈಜಿನಾಥ ಭಂಡೆ, ಡಾ: ರಾಜೇಂದ್ರ ಯರನಾಳೆ, ಶಿವಕುಮಾರ ಕಟ್ಟೆ, ಎಸ್.ಎಸ್.ದಾಸೆ. ಡಾ: ಶಾಲಿವಾನ ಸುಂದಾಳ, ಡಾ: ಮನ್ಮಥ ಢೋಳೆ, ಡಾ: ವಿಜಯಾಶ್ರೀ ಪಾಟೀಲ (ಸಬರದ), ರಮೇಶ ಬಿರಾದಾರ, ಪ್ರೋ: ಸಿದ್ರಾಮಪ್ಪಾ ಮಾಸಿಮಾಡೆ, ಪ್ರೋ: ಬಸವರಾಜ ಸ್ವಾಮಿ, ಶ್ರೀಮತಿ ಮಲ್ಲಮ್ಮಾ ವಾಗ್ದಾಳೆ, ಶ್ರೀ ಶರಣಪ್ಪಾ ಭೈರೆ, ಸಂಜುಕುಮಾರ ಜುಮ್ಮಾ, ಪ್ರಭುಶೆಟ್ಟಿ ಸೈನಿಕಾರ, ಶ್ರೀ ಶಿವರಾಜ ಕಾಡೋದೆ ಔರಾದ, ಶ್ರೀಕಾಂತ ಪಾಟಿಲ, ಶ್ರೀ ಎಸ್.ಎಸ್.ಭೈರೆ, ಶ್ರೀ ಬಸವರಾಜ ಸಂಗಮದ, ಶ್ರೀ ಬಿ.ಜಿ.ಹಿರೇಮಠ, ಶ್ರೀ ರಾಮಕೃಷ್ಣ ಸಾಳೆ, ಬಸವಣಪ್ಪ ಸಿದಬಟ್ಟೆ, ಶ್ರೀಮತಿ ಯಶೋಧಮ್ಮಾ ಸಿದ್ದಬಟ್ಟೆ, ಶ್ರೀ ಸೋಮನಾಥ ಮುದ್ದಾ, ಶ್ರೀ ಪರಶುರಾಮ ಬಿರಾದಾರ, ಶ್ರೀ ಶಂಕರ ಸಿಂಧೆ, ಬಾ.ಆ.ವಡ್ಡೆ, ಮುರ್ಕಿಯ ಶ್ರೀಮತಿ ಸುಲೋಚನಾ ಹಾಲ ಮಂಡಗಿ, ಕಮಲನಗರದ ಬಿ.ಎನ್. ಸೋಲಾಪೂರೆ, ಶ್ರೀ ಎಸ್.ಬಿ.ಜಾಂತೆ, ಕು.ನಿರ್ಮಲಾ ಶಿವಶಂಕರ, ನೀಲಕಂಠ ಕದಮ ಹೋಳಸಮುದ್ರ, ಶೆಂಬೆಳ್ಳಿಯ ಶ್ರೀ ರಾಮಶೇಟ್ಟಿ ಮಾಸ್ತರರು ಮುಂತಾದವರು ಸಾಹಿತ್ಯಕವಾಗಿ ಮುಂದೆ ಬಂದವರಾಗಿದ್ದಾರೆ. ಶ್ರೀ ಬಸಯ್ಯಾ ಸ್ವಾಮಿ ಯನಗುಂದಾ ಇವರು ಉತ್ತಮ ಜೋತ್ಯಿಷ್ಯ ಪಾರಂಗತರು ಆದರೆ ಇವರಿಗೆ ಪತ್ರಿಕೆ ಪ್ರಸಾರ ಸಿಗಬೇಕಾಗಿದೆ. ಮುಖ್ಯವಾಗಿ ಈ ದಿಶೆಯಲ್ಲಿ ಸರಕಾರ ಗಮನ ಹರಿಸುವ ಪರಿಸ್ಥಿತಿ ಇದೆ ಅಂದರೆ ಗಡಿನಾಡಿನ ಬೀದರ ಜಿಲ್ಲೆ ಅದು ತುತ್ತ ತುದಿಗಿದ್ದ ಔರಾದ ತಾಲ್ಲೂಕಿನಲ್ಲಿ ರಿಯಾಯಿತಿ ದರದಲ್ಲಿ ಪುಸ್ತಕಗಳು ಹೊರಡಿಸುವಲ್ಲಿ ದಿನಪತ್ರಿಕೆಗಳು ಪೊರೈಕೆಯಾಗುವಲ್ಲಿ ಸಂಪಾದಕರಿಗೆ ಅನುವುದ ಮಾಡಿಕೊಡಬೇಕು ಈ ಮಾಧ್ಯಮದಿಂದ ತನ್ನತನವನ್ನು ಕಾಪಾಡಿಕೊಂಡು ಕನ್ನಡವನ್ನು ಬೆಳೆಸಿ ಉಳಿಸಲು ಸಾಧ್ಯವಿದೆ.

ಶ್ರೀ ಬಸವರಾಜ ಸಂಗಮದ ಅವರ ಸಂಪಾದಕತ್ವದಲ್ಲಿ ಚೆಂಬೆಳಕು ಪೂಜ್ಯ ಚೆನ್ನಬಸವ ಪಟ್ಟದೇವರು ಕುರಿತು ಕವನ ಸಂಕಲನ ಹೊರ ಬಂದಿದೆ ಹೆಚ್.ಸಿ.ಖಡ್ಕೆ, ಬಿ.ಎನ್.ಸೋಲಾಪೂರೆ, ವಿ.ಬಿ.ಬಿರಾದಾರ, ಬಾ.ಆ.ವಡ್ಡೆ, ವಿ.ಎನ್.ಗಂದಿಗೂಡೆ, ನವನಾಥ ಜೇರೋಬೆ ಮುಂತಾದವರ ಪರಿಶ್ರಮದ ಫಲ ಚೆಂಬೆಳಕು ಈ ತಾಲ್ಲೂಕಿನ ಹಳೆಯ ಕೃತಿ ಕವನ ಸಂಕಲನ ಹೊರ ಬಂದಿದೆ.

***ಶಿಕ್ಷಣ:-***

ಪಟ್ಟಣ ರಚನೆ ಹಾಗೂ ಸಂಪನ್ಮೂಲಗಳು ಸಾವಿರ ವರ್ಷಗಳಿಂದ ಯಾರ ತುಳಿತಕ್ಕೇ ಸಿಕ್ಕಿತ್ತೊ ಉರ್ದು, ಮರಾಠಿ, ಹಿಂದಿ ಭಾಷೆಗಳ ಪ್ರಭಾವದಿಂದ ಕನ್ನಡ ದಬ್ಬಿತ್ತೋ ಗೊತ್ತಿಲ್ಲ. ಆದರೆ ಚಪ್ಪಡಿಯ ಕೆಳಗೆ ಮಾವಿನ ಸಸಿ ಬೆಳೆದು ಹೆಮ್ಮರವಾಗಿ ಚಪ್ಪಡಿಯನ್ನೇ ಒಡೆದು ಹಾಕಿದ ಪರಿಯಂತೆ (ಜಿ.ಎಸ್.ಶಿವರುದ್ರಪ್ಪಾ)

ಎಲ್ಲವನ್ನು ತುಳಿದು ಕನ್ನಡ ಮೇಲೆದ್ದು ಫಲ ಪುಷ್ಪಗಳು ಬಿಡುತ್ತಿವೆ. ಇದು ಅತ್ಯಂತ ಹೆಮ್ಮೆಯ ವಿಷಯ ಇಲ್ಲಿ ಮಹತ್ತರವಾದ ಆಶಿರ್ವಾದ ತಪ್ಪಸ್ಸು ಅಡಗಿದೆ ಇದನ್ನು ಶಿಕ್ಷಣ ರಂಗದ ಬಗ್ಗೆ ಪದರುಗಳನ್ನು ಬಿಡಿಸಿದಾಗ ಮನದಟ್ಟವಾಗುತ್ತದೆ. ರೋಮಾಂಚನವಾಗುತ್ತದೆ. ಔರಾದ ತಾಲ್ಲೂಕು ಶಿಕ್ಷಣ ಕ್ಷೇತ್ರದಲ್ಲಿ ಹಿಂದುಳಿದಿದೆ ಎಂಬುದು ನಿಜ ಆದರೆ ಬೇರೆ ಕ್ಷೇತ್ರದಂತೆ ಇದು ಕೂಡ ಚೇತರಿಸಿ ಸ್ವಪರಿ ಶ್ರಮದಿಂದ ಮುಂದೆ ಸಾಗಿದೆ ಎಂಬುದು ಅಷ್ಟೆ ನಿಜ. ಸುಮಾರು 55 ವರ್ಷಗಳ ಹಿಂದೆ ಭಾಲ್ಕಿ ಪಟ್ಟಾಧ್ಯಕ್ಷರು ಆವಾಗ ನಿಜಾಮನ ಆಡಳಿತದಲ್ಲಿ ಈಗ ಆಂಧ್ರದಲ್ಲಿ ಸೇರಿ ಹೋದ ಮೊರಗಿ ಎಂಬಲ್ಲಿ ಪ್ರಾಥಮಿಕ ಶಾಲೆ ಎಂಬ ಸಸಿಯನ್ನು ಬೆಳೆಸಿ ಹೊರಗೆ ಉರ್ದು ಬೊರ್ಡ ಹಾಕಿ ಒಳಗೆ ಕನ್ನಡ ಮಗುವಿಗೆ ಹಾಲುಣಿಸುವ ಕೆಲಸ ಮಾಡಿದರು. ಮುಂದೆ ರಜಾಕಾರ ಹಾವಳಿಯಲ್ಲಿ ಶಾಲೆಯನ್ನು ಸೋಲಾಪುರಕ್ಕೆ ಒಯ್ಯಲಾಯಿತು. ಅಪ್ಪಗಳವರ ಶಾಲೆಯ ಮಕ್ಕಳಿಗೆ ಊಟ, ವಸತಿ ನೀಡಿದ್ದು, ಬಾಬಾ ಸಾಹೇಬ ವಾರದವರು ಹಾಗೂ ಜಯದೇವಿ ತಾಯಿ ಲಿಗಾಡೆಯವರು ಆ ಸಸಿಯನ್ನು ಲಾತೂರದಲ್ಲಿ ಸ್ವಲ್ಪ ದಿವಸ ಬೆಳೆಸಲಾಯಿತು. ಅದರಲ್ಲಿ ಪ್ರಸಿದ್ದ ಸಾಹಿತಿಗಳಾದ ಶಾಂತರಸ ಕವಿಗಳು ಒಂದು ಸಸಿಯಾಗಿದ್ದರು.

ರಜಾಕಾರ ಮುಗಿದ ನಂತರ ಆ ಸಸಿಯನ್ನು ತಾಲ್ಲೂಕಿನ ಸಂಗಮ ಕ್ಷೇತ್ರದಲ್ಲಿ ನೆಟ್ಟರು. ಅಲ್ಲಿ ಮಳೆಗಾಲದಲ್ಲಿ ನೀರಿನ ಭಯ ಹೆಚ್ಚಾಗಿದ್ದರಿಂದ ಕಮಲನಗರ ಸುರಕ್ಷಿತ ಸ್ಥಳವೆಂದು ಅನೇಕರ ಅಭಿಮತದಂತೆ ಸಸಿಯನ್ನು ಶಾಂತಿವರ್ಧಕ ನಾಮದಿಂದ ನೆಟ್ಟರು ಅದು 1956ರಲ್ಲಿ ಆ ಸಸಿ ಔರಾದ ತಾಲ್ಲೂಕಿನ ಪ್ರಥಮ ಸಸಿಯನ್ನು ಮಾತೆಗೆ ಮಕ್ಕಳಾಗಲು ಅವಕಾಶ ಕೊಟ್ಟಿತ್ತು. ಭಾಷಾವಾರು ಪ್ರಾಂತ ರಚನೆಯಲ್ಲಿ ಉತ್ತರ ಕರ್ನಾಕಟದ ನಶಿಸುತ್ತಿರುವ ಭಾಗವನ್ನು ಕನ್ನಡ ಮಾತೆಯ ಉಡಿ ತುಂಬಿದ ಕೀರ್ತಿ ಭಾಲ್ಕಿ ಅಪ್ಪಗಳವರದ್ದಾಗಿದೆ. ಈಗ ಈ ಸಂಸ್ಥೆ ಕಮಲನಗರದಲ್ಲಿ ಕಿರಿಯ, ಮಹಾವಿದ್ಯಾಲಯ, ಪದವಿ ಕಾಲೇಜು ಅಲ್ಲದೆ ಭಾಲ್ಕಿ, ಬೀದರದಲ್ಲಿ ಪದವಿ ಕಾಲೇಜುಗಳು, ಗ್ರಾಮೀಣ ಇಂಜಿನಿಯರಿಂಗ ಕಾಲೇಜು ಆದಿಗಳನ್ನು ನಡೆಸಿಕೊಂಡು ಹೆಮ್ಮರವಾಗಿದೆ. ಈ ಶಕ್ತಿಗೆ ಲೋಕನಾಯಕ ಭೀಮಣ್ಣಾ ಖಂಡ್ರೆಯವರು ಕಾರ್ಯವಾಹಿನಿ ಸತತವಾಗಿದೆ. ಇಲ್ಲಿ ಕನ್ನಡ ನಗರಕ್ಕೆ ಧಕ್ಕೆ ಭಾರದಂತೆ ಪೂಜ್ಯ ಅಪ್ಪಗಳವರು, ಶ್ರೀ ಖಂಡ್ರೆ, ಪ್ರಭುರಾವ ವಕೀಲರು ಮುಂತಾದವರು ದುಡಿದಿದ್ದಾರೆ.

ಔರಾದ ತಾಲ್ಲೂಕಿಗೆ ಬಹುಭಾಷೆ ನಾಡೆನ್ನಬಹುದು ಇಲ್ಲಿ ಕನ್ನಡ, ಮರಾಠಿ, ಹಿಂದಿ, ತೆಲುಗು, ಲಮಾಣಿ, ಇತ್ಯಾದಿ ಭಾಷೆ ಮಾತಾಡುವರಿದ್ದಾರೆ. ಆದರೂ ಇಂದು ಕನ್ನಡಕ್ಕೆ ಒಂದು ಒಳ್ಳೆಯ ರೂಪ ಬಂದಂತಾಗಿದೆ. ಔರಾದ ಪಟ್ಟಣದಲ್ಲಿ ಹೈಸ್ಕೂಲು 1974ರಲ್ಲಿ, ಪದವಿ ಕಾಲೇಜು 1979ರಲ್ಲಿ ಸ್ಥಾಪನೆಯಾಗಿದೆ.

ಪದವಿ ಹಾಗೂ ಕಿರಿಯ ಕಾಲೇಜುಗಳು ಒಳ್ಳೆಯ ರೀತಿಯಿಂದ ನಡೆದಿದ್ದು ಹೆಮ್ಮೆಯ ವಿಷಯ ಔರಾದದ ಭಾಗ್ಯಶಿಲ್ಪ, ಬಡವರ ಬಂಧು, ಸಮಾಜ ಚಿಂತಕ ಮಹಾವ್ಯಕ್ತಿ ಶ್ರೀ ಕಾಶಿನಾಥರಾವ ಬೆಲೂರೆ ಇವರು ಪದವಿ ಕಾಲೇಜು ಪದವಿ ಪೂರ್ವ ಕಾಲೇಜು ಐ.ಟಿ.ಐ. ಕನ್ಯಾ ಪ್ರೌಢ ಶಾಲೆ ಡೊಣಗಾಂವದಲ್ಲಿ ಪ್ರೌಢ ಶಾಲೆ ಇಂಥ ಅನೇಕ ಸಂಸ್ಥೆಗಳ ಅಧ್ಯಕ್ಷರಾಗಿ ಶಿಕ್ಷಣ ಪ್ರಸಾರಕ್ಕೆ ಆಧ್ಯತೆ ನೀಡಿದ್ದಾರೆ. ಜ್ಞಾನವೆಂಬುದು ಆರನೆಯ ಇಂದ್ರಿಯ ಎಂದು ಬಗೆದಿದ್ದಾರೆ. ಇದೊಂದು ಶಿಕ್ಷಣ ಪ್ರಸಾರದಲ್ಲಿ ಐತಿಹಾಸಿಕ ಘಟನೆಯಾಗಿದೆ. ಏಕೆಂದರೆ ಇಲ್ಲಿಯ ಮಕ್ಕಳು ಗಡಿ ನಾಡಾದ ಮಹಾರಾಷ್ಟ್ರಕ್ಕೆ ಅಭ್ಯಾಸಕ್ಕೆ ಹೋಗಬೇಕಾಗುವುದನ್ನು ತಪ್ಪಿಸಿ ಭಾಷೆಯ ಅಡಚಣೆಯನ್ನು ಹೋಗಲಾಡಿಸಿ ಕನ್ನಡ ಉಸಿರಾಡುವಂತೆ ಮಾಡುವಲ್ಲಿ ಶ್ರಮಿಸುತ್ತಿದ್ದಾರೆ. ಶ್ರೀ ಕಾಶಿನಾಥರಾವ ಬೇಲೂರೆಯವರ ಅನುಪಕ ಸೇವೆ ಯಾರು ಮರೆಯುವಂತಿಲ್ಲ.

ಈ ತಾಲ್ಲೂಕಿನಲ್ಲಿ ಒಟ್ಟು 194 ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳು, 32 ಪ್ರೌಢ ಶಾಲೆಗಳು, 9 ಪದವಿ ಪೂರ್ವ ಕಾಲೇಜುಗಳು, 2 ಪದವಿ ಕಾಲೇಜುಗಳು, 2 ತಾಂತ್ರಿಕ ಶಿಕ್ಷಣಾಲಯಗಳು, 1ಕೃಷಿ ಪಾಠ ಶಾಲೆಯೂ, 100 ಅಂಗನವಾಡಿಗಳು, 100 ಮಹಿಳಾ ವಯಸ್ಕರ ಶಿಕ್ಷಣ ಕೇಂದ್ರಗಳೂ ಇದ್ದು, ತಾಲ್ಲೂಕಿನ ಶೈಕ್ಷಣಿಕ ಏಳ್ಗೆಯಲ್ಲಿ ಸ್ಫೂರ್ತಿಯಾದ ಕಾರ್ಯ ನಿರ್ವಹಿಸುತ್ತಿವೆ. ಇಲ್ಲಿ ಶೇಕಡಾ 5 ಕೂಡ ಶಿಕ್ಷಿತರ ಸಂಖ್ಯೆ 25 ವರ್ಷಗಳ ಹಿಂದೆ ಇದ್ದಿಲ್ಲ, ಆದರೆ ಈಗ ಶೇಕಡಾ 65 ಶಿಕ್ಷಿತರ ಸಂಖ್ಯೆಯಾಗಿದೆ. ಅಕ್ಷರಸ್ಥರ ಸಂಖ್ಯೆ ಶೇಕಡಾ 55 ಕ್ಕೂ ಮೇಲ್ಪಟ್ಟಿದೆ. ಹಿಂದೆ ಇಲ್ಲಿ ಮರಾಠಿ, ಮೋಡಿ, ಉರ್ದು, ಪ್ರಭಾವಕ್ಕೆ ಒಳಗಾದವರು ಮುಂಡಾಸಿಗಳೆನಿಸಿಕೊಳ್ಳುವ ಜನಾಂಗ ಕಡಿಮೆಯಾಗಿ ಅವೆಲ್ಲ ಭಾಷೆಗಳು ಕಳಚಿ ಬಿದ್ದು ಈಗ ಎಲ್ಲೆಡಿಗೂ ಕನ್ನಡ ಪತ್ರಿಕೆಗಳ ಕನ್ನಡ ರಿಕಾರ್ಡುಗಳ ಕನ್ನಡ ನಾಟಕಗಳು, ಕನ್ನಡ ಸಿನಿಮಾಗಳ ಅಭಿರುಚಿ ಮೈ ತುಂಬಿಕೊಂಡಿದೆ. ತನ್ನತನವನ್ನು ಲೋಹ ಚುಂಬಕದಂತೆ ಇಟ್ಟುಕೊಂಡು ಕನ್ನಡ ನಾಡಿನ ವಚನ ಸಾಹಿತ್ಯದ ಮರದಡಿಯಲ್ಲಿಯೇ ಇದ್ದುದರಿಂದ ಮಾನವೀಯತೆ ಅಪಾಯದ ಮೇಲೆ ಇಲ್ಲಿಯ ಶಿಕ್ಷಣ ಸಮಾಜ ಇಂತಿದೆ. ಇಲ್ಲಿ ಶಿಕ್ಷಣ ಸಂಸ್ಥೆಗಳು ಸರಿಯಾಗಿ ಬೆಳೆದಂದಿನಿಂದ ಮುಖ್ಯ ಊರುಗಳಲ್ಲಿ ಪುಸ್ತಕ ಅಂಗಡಿಗಳು ಅನೇಕ ಕನ್ನಡ ಪತ್ರಿಕೆಗಳ ಏಜೆಂಟರು, ಪತ್ರಿಕಾ ಮಾರಾಟಗಾರರು ಹುಟ್ಟುಕೊಂಡಿದ್ದಾರೆ. ಔರಾದದಲ್ಲಿ ಶ್ರೀ ಕಾಶಿನಾಥ ಸಿದಬಟ್ಟೆ ಇವರು 1958 ರಿಂದ ಪುಸ್ತಕದ ಅಂಗಡಿಯನ್ನಿಟ್ಟು, ಸಂಚಾರಿ ಅಂಗಡಿಗಳ ನಡೆಸಿಕೊಂಡು ಸಾವಿರಾರು ಕನ್ನಡ ಎಲ್ಲಾ ರಂಗದ ಪುಸ್ತಕಗಳನ್ನು ಮಾರಾಟ ಮಾಡಿ ಸಮಾಜದಲ್ಲಿ ಓದುವ ಹವ್ಯಾಸ ಹುಟ್ಟಿದ್ದಾರೆ. ಅಲ್ಲದೆ ಇಲ್ಲಿ ದಿನ ಪತ್ರಿಕೆಗಳು ಮೊಟ್ಟ ಮೊದಲು ತರಿಸಿ ಜತೆಗೆ ಅದರ ಮಹತ್ವ ತೋರಿಸಿಕೊಟ್ಟವರು ಶ್ರೀ ಗುರುಸಿದ್ದಪ್ಪಾ ಮಸ್ಕಲ ಎನ್ನುವರು. 1967ರಿಂದ ವಿದ್ಯುತ್ ಇಲಾಖೆಯಲ್ಲಿದ್ದುಕೊಂಡು ಪತ್ರಿಕಾ ಪ್ರಸಾರದಲ್ಲಿ ದೊಡ್ಡ ಜವಾಬ್ದಾರಿಯಂತೆ ಜನಮನ ತೊಳೆಯಲು ದುಡಿದಿದ್ದಾರೆ. ಹೀಗಾಗಿ ಅನೇಕ ಸಾರಸ್ವತ ಲೋಕದ ವಿದ್ಯಾರ್ಥಿಗಳು, ನೌಕರರು, ಒಕ್ಕಲಿಗರು ಪತ್ರಿಕೆಗಳಿಗಾಗಿ ಹಾತೋರೆಯುತ್ತಾರೆ.

ಔರಾದ ತಾಲ್ಲೂಕಿನಲ್ಲಿ ಸದ್ಯ ಸಂಯುಕ್ತ ಕರ್ನಾಟಕ, ಪ್ರಜಾವಾಣಿ ವಿಜಯ ಕರ್ನಾಟಕ, ಲಂಕೇಶ, ತರಂಗ, ಉತ್ತರ ಕರ್ನಾಟಕ, ಸುಧಾ, ಕಸ್ತೂರಿ, ಮಯೂರು, ವಿಕ್ರಮ, ಬೀದರ ರಹಸ್ಯ, ಬೀದರ ಜಂಗ, ಯುವರಂಗ, ಸೀಮಾ ವಾರ್ತಾ, ಅಂತರಂಗ, ಸುದ್ದಿ, ವಚನ ಕ್ರಾಂತಿ, ಪಬ್ಲಿಕ, ಜನಪರ, ಕಾರಂಜ ಎಕ್ಸಪ್ರೆಸ್, ಪರಿಹಾರ ಮುಂತಾದ ಕನ್ನಡ ಪತ್ರಿಕೆಗಳು, ನವ ಭಾರತ ಟೈಮ್ಸ, ಲೋಕಸುತ್ತಾ ಸಂಚಾರ, ಡೆಕ್ಕನ ಹೆರಾಲ್ಡ, ಹಿಂದೂ ಇಂಡಿಯನ್ ಎಕ್ಸಪ್ರೇಸ್, ಶ್ರೀ ಲೋಕಪ್ರಭಾ, ದಮನ, ಮನಸೊಭಾ, ಪೂಜಾ ಚಳುವಳಿ, ಔರಾದ ವಾಣಿ, ಕನ್ನಡ ಪ್ರಭ, ಬೀದರ ಕಿ ಆವಾಜ, ಸಿಮಾಸತ ಮುಂತಾದ ಅನ್ಯ ಭಾಷೆಯ ಪತ್ರಿಕೆಗಳು ದೊರೆಯುತ್ತವೆ. ಓದುವವರು ಜಾತಕ ಪಕ್ಷಿಯಂತೆ ಕಾಯುತ್ತಾ ನಾಡಿನ, ಹೊರನಾಡಿನ ವಿಶ್ವದ ಆಗು ಹೋಗುಗಳ ಚಿಂತನ ಒಂದು ಕುಟುಂಬದ ಚಿಂತನೆಯಂತೆ ಮಾಡುವ ಈ ತಾಲ್ಲೂಕಿನ ಜನತೆ ನಿಜವಾಗಿಯೂ ವಿಶಾಲ ಹೃದಯದವರು.

ಈಗಿನ ಇಲ್ಲಿಯ ಕನ್ನಡ ಕ್ರೀಯಾ ಸಮಿತಿ ಹಾಗೂ ತಾಲ್ಲೂಕು ಮಟ್ಟದ ಕನ್ನಡ ಸಾಹಿತ್ಯ ಪರಿಷತ್ತು ಶಿಕ್ಷಣ ಹಾಗೂ ಭಾಷೆಯ ಬೆಳವಣಿಗೆಯಲ್ಲಿ ಅನೇಕ ಅಶೋತ್ತರಗಳು ಇಟ್ಟುಕೊಂಡು ಬೆಳೆಸುತ್ತಿದೆ. ಅದಕ್ಕಾಗಿ ರಾಜ್ಯದ ಕ.ಸಾ.ಪ. ಉತ್ತರದ ತುಟ್ಟ ತುದಿಗಿರುವ ಔರಾದ ತಾಲ್ಲೂಕು ಶರೀರದ ಮೆದುಳಿನಂತೆ ಎಂದು ಭಾವಿಸಿ ಸೈಕಲ್ ಮೊಟರ ಸವಾರನಿಗೆ ಹೆಲ್ಮೆಟ ಅವಶ್ಯಕತೆ ಇದ್ದಂತೆ ಇಲ್ಲಿ ಸಾಕ್ಷೈದು ಉಚ್ಚ ಮಟ್ಟದ ವಾಚನಾಲಯಗಳು ಸ್ಥಾಪಿಸುವುದು ಅತ್ಯಂತ ಮಹತ್ವದ ವಿಷಯವಾಗಿದೆ.

ಔರಾದದಲ್ಲಿ ಮಾತ್ರ ಕೇಂದ್ರಿಯ ವಾಚನಾಲಯದ ಶಾಖೆ ಕಾರ್ಯ ಮಾಡುತ್ತಿದೆ. ವಾಚನಾಲಯ ಸ್ಥಾಪನೆಗೆ ನಮ್ಮ ಸರಕಾರ ಶಿಕ್ಷಣ ಮಂಡಳಿ ಈ ತಾಲ್ಲೂಕಿಗೆ ತನ್ನ ಪ್ರಾಣವೆಂದು ಬಗೆದು ನಾಲ್ಕಾರು ಹೋಬಳಿಗಳಿಗೊಂದರಂತೆ ಶಾಖಾ ವಾಚನಾಲಯಗಳು ಸ್ವಂತ ಆಸಕ್ತಿಯಿಂದ ಬಂದು ಪ್ರಚೋದಿಸಿ ತಾಯಿ ಮಗುವಿಗೆ ಒತ್ತಿ ಹಾಲು ಕುಡಿಸಿದಂತೆ ಸ್ಥಾಪಿಸಿದರೆ ಕನ್ನಡ ಗಡಿ ತಾಲ್ಲೂಕಿನಲ್ಲಿ ಬೆಳವಣಿಗೆ ಸಹಕಾರಿಯಾಗುತ್ತಿದೆ.

***ಆಡಳಿತ ಮತ್ತು ರಾಜಕೀಯ ಸ್ಥಿತಿ ಗತಿ:-***

ರಾಷ್ಟ್ರದಾದ್ಯಂತ ಪಂಚವಾರ್ಷಿಕ ಯೋಜನೆ ಮತ್ತು ಪಂಚಾಯತಿ ರಾಜ್ಯತಂದ ಶ್ರೇಯಸ್ಸು ನೆಹರೂಜಿಗೆ ಸಲ್ಲುತ್ತದೆ 1952 ರಿಂದ ಆಡಳಿತದ ವ್ಯವಸ್ಥೆ ಸುಗಮ ಹಾಗೂ ಪ್ರಗತಿ ಪಥದಲ್ಲಿ ನಡೆಯಲು ಗ್ರಾಮ ಪಂಚಾಯತ ತಳಪಾಯವಾಗಿದೆ. ಪ್ರತಿ ಊರಿನ ವಾರ್ಡನ ಪ್ರಗತಿಗಾಗಿ ಒಬ್ಬ ಸದಸ್ಯನಿದ್ದು, ಸಭೆ ಗ್ರಾಮ ಪಂಚಾಯಿತಿ, ಅದರಲ್ಲಿ ಅಸ್ಪ್ರಶ್ಯರಿಗೆ, ಹೆಣ್ಣು ಮಕ್ಕಳಿಗೆ ಸಮಾನ ಅವಕಾಶ ಮಾಡಿ ಗ್ರಾಮದ ಸರ್ವಾಂಗೀಣ ಪ್ರಗತಿಗೆ ಅವಕಾಶ ಮಾಡಿ ಕೊಟ್ಟಿದೆ. ಗ್ರಾಮ ಪಂಚಾಯತಿಗೆ ಬರುವ ತಹಶೀಲ ಆದಿ ವರಮಾನ ಶೇಕಡಾ 37 ಬಳಸಿಕೊಳ್ಳಲಾಗಿತ್ತು. ಉಳಿದ ಹಣ ತಹಶೀಲ ಹಾಗೂ ಟಿ.ಡಿ.ಬಿ.ಗೆ ಹೋಗುತ್ತಿತ್ತು. ಈಗ ಗ್ರಾಮ ಪಂಚಾಯತಿಯಿಂದ ಬರುವ ಆದಾಯದ ಬಹುಭಾಗವು ಊರಿನ ರಸ್ತೆ ಚರಂಡಿ, ನೈರ್ಮಲ್ಯ ವಿದ್ಯುತ್ ದೀಪ, ನೀರಿನ ಸರಬರಾಜಿಗಾಗಿ ವಾಚನಾಲಯದ ಸ್ಥಾಪನೆಗಾಗಿ ಈ ಬಜೆಟನ್ನು ಬಳಸಿಕೊಳ್ಳಲು ಹಕ್ಕು ಹಾಗೂ ಕರ್ತವ್ಯ ಪಡೆದಿದೆ. ಈ ಘಟಕದಿಂದ ಮೇಲ್ಪಟ್ಟು ಹೋಬಳಿ ಮಟ್ಟದಲ್ಲಿ ಹಳ್ಳಿಗಾಡಿನ ರಸ್ತೆ ಶಾಲೆ ಆರೋಗ್ಯಕ್ಕಾಗಿ ಟಿ.ಪಿ.ಎಸ್.ಬಿ.ಓ. ಮುಖಾಂತರ ಅನುದಾನಕ್ಕೆ ತನ್ನ ತಾಲ್ಲೂಕಿನ ಬಜೆಟನ್ನು ಸೇರಿಸಿ ಆಯಾ ಖಾತೆಗಳ ಮುಖಾಂತರ ಅಭಿವೃದ್ಧೀಯ ಕಾರ್ಯಗಳನ್ನು ಹಮ್ಮಿಕೊಳ್ಳುತ್ತದೆ.

ಔರಾದ ಪಟ್ಟಣದ ದಕ್ಷಿಣ ಭಾಗಕ್ಕೆ ತಹಸೀಲ ಕಛೇರಿ, ಮುನ್ಸಿಫ್ ಕೋರ್ಟು, ಪೋಲೀಸ್ ಠಾಣೆ, ವಿದ್ಯುತ್ ಹಾಗೆಯೇ ವಿಶೇಷ ಸಣ್ಣ ನೀರಾವರಿ ಯೋಜನೆ ಕಛೇರಿ ಇರುತ್ತದೆ. ಆ ಪಟ್ಟಣದ ಆಗ್ನೇಯ ಭಾಗಕ್ಕೆ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಎಸ್.ಬಿ.ಎಚ್.ಶಾಖೆ ರಸ್ತೆಯ ಬದಿಯಲ್ಲಿ ಮುಂದೆ ಹೋದರೆ ಬಸ್ ಸ್ಟಾಂಡ್ ಹಾಗೂ ಅದರ ಸ್ವಲ್ಪ ಹಿಂದುಗಡೆ ಅಂಚೆ ಕಛೇರಿ ಇರುತ್ತದೆ. ನಗರದ ಪೂರ್ವಕ್ಕೆ ಹೋದಂತೆ ಚಿತ್ರ ಮಂದಿರ ಜನರಲ್ ಹಾಸ್ಟೆಲ್ ಮತ್ತು ಡಾ: ಬಿ.ಆರ್.ಅಂಬೇಡ್ಕರರ ತಾಂತ್ರಿಕ ಶಿಕ್ಷಣಾಲಯ ಇರುತ್ತದೆ. ಅದರ ಮುಂದೆ ಹೋದರೆ ಪ್ರೌಢ ಶಾಲೆ ಹಾಸ್ಟೆಲ್ ಕನ್ಯಾ, ಪ್ರೌಢ ಶಾಲೆ, ಅಮರೇಶ್ವರ ಪದವಿ ಪೂರ್ವ ಕಾಲೇಜು, ಅಮರೇಶ್ವರ ಪದವಿ ಮಹಾವಿದ್ಯಾಲಯಗಳು, ಐ.ಟಿ.ಐ., ಶಿಕ್ಷಣ ತರಬೇತಿ ಕೇಂದ್ರ ಅಲ್ಲದೆ ಒಂದು ಕೃಷಿ ಪಾಠ ಶಾಲೆ ಕಾಣುತ್ತದೆ. ಅದರ ಬಲಗಡೆ ಸಂತಪೂರ ರಸ್ತೆಯಲ್ಲಿ ಹೊಸದಾಗಿ ನಿರ್ಮಾಣವಾದ ಬೃಹದಾಕಾರದ ಸಬ್ ಜೇಲ್ ಇದೆ ದಾರಿಯಲ್ಲಿ ಮತ್ತೆ ಅನೇಕ ಹೊಸ ಕಟ್ಟಡಗಳು ಮೇಲೆಳುತ್ತಿವೆ. ನಗರದ ಪ್ರವೇಶ ಚೌಕಿನಲ್ಲಿ ಬಸವೇಶ್ವರ ಆಶ್ವಾರೊಡ ಪ್ರತಿಮೆ ಇರುತ್ತದೆ. ನಗರದಲ್ಲಿ ಪ್ರವೇಶಿಸಿದರೆ ಅಮರೇಶ್ವರ ಮಂದಿರ ಅದರ ಮುಂದೆ ಸಾಗಿದರೆ ಔರಾದದ ಮುಖ್ಯ ಪೇಟೆ ಸಿಗುತ್ತದೆ. ಅಲ್ಲಿ ಹನುಮಂತನ ಮಂದಿರ ಕೇಂದ್ರ ಭಾಗದಲ್ಲಿದೆ. ಅದರ ಮುಂದೆ ಭವ್ಯವಾದ ಆಗಸೆ (ಮಹಾದ್ವಾರ) ಇದೆ. ಅದರ ಒಳಗಡೆ ರಸ್ತೆಗಳ ಅಕ್ಕಪಕ್ಕಗಳಲ್ಲಿ ಅನೇಕ ಪ್ರಕಾರದ ಅಂಗಡಿಳಿವೆ. ಅದರ ಹಿಂದಿನ ಭಾಗದಲ್ಲಿ ನಿಬಿಡವಾದ ಜನವಸತಿ ಇರುವ ಹೃದಯದಂತಿರುವ ನಗರದ ವಾಸಗಳ ವಸತಿಗಳು ಇವೆ. ಇದರ ಉತ್ತರ ದಿಕ್ಕಿಗೆ ಭವ್ಯವಾದ ಹಳೆಯ ಮಣ್ಣಿನ ಕೋಟೆ ಇದ್ದು, ಅದು ದೇಶ

ಮುಖರ ನಿವಾಸವಾಗಿದೆ. ಅಲ್ಲಿಂದ ಪಶ್ಚಿಮಕ್ಕೆ ನಗರದ ಹೊರಗಡೆ ಬಂದಾಗ ಒಂದು ಹಳೆಯ ಕಾಲದ ಕೆರೆ ಹಾಗೂ ಅದರ ತೂಬಿನ ಮೇಲೆ ಮಹಾವೀರನ ಸಿಕರ ವಿಗ್ರಹ ಸ್ಥಾಪಿಸಿದ್ದಾರೆಂಬುದು ನೋಡಬಹುದು.

ತಾಲ್ಲೂಕಿನಲ್ಲಿ ಮುಖ್ಯವಾಗಿ 6 ಹೋಬಳಿಗಳು (ಸರ್ಕಲ್)ಗಳಿವೆ, ಅವು ಔರಾದ, ಸಂತಪೂರ, ಚಿಂತಾಕಿ, ಕೂಶನೂರ, ಕಮಲನಗರ, ದಾಬಕಾ:

ದಿನಾಂಕ: 16/08/1986 ರಿಂದ ನಬಾರ್ಡ ಯೋಜನೆಯನ್ವಯ ತಾಲ್ಲೂಕಿನ ಎರಡನೆ ದೊಡ್ಡ ಊರು ಕಮಲನಗರ ತಾಲ್ಲೂಕಾ ಕೆಂದ್ರಕ್ಕೆ ದೂರದಲ್ಲಿರವದರಿಂದ ಈ ಭಾಗದವರಿಗೆ ಸುಲಭ ಸೌಲಭ್ಯಕ್ಕಾಗಿ ಉಪ ತಹಶೀಲ್ದಾರ್ ನಾಡ ಕಛೇರಿ ಪ್ರಾರಂಭಿಸಲಾಗಿದೆ. ಈ ನಾಡ ಕಛೇರಿಯ ಅಧೀನದಲ್ಲಿ ಆ ಭಾಗದ 33 ಹಳ್ಳಿಗಳು ಸೌಲಭ್ಯ ಪಡೆಯುತ್ತವೆ. ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಈ ತಾಲ್ಲುಕಿನ ಕಳಸಪ್ರಾಯವಾದ ಹಾಗೂ ಅತೀ ಹಿಂದುಳಿದ ಹಳ್ಳಿಯಾದ ಮಹಾರಾಷ್ಟ್ರದ ಗಡಿ ಸೀಮಿಗೆ ತಗಲಿರುವ ಚೊಂಡಿಮುಖೇಡ ಗ್ರಾಮಕ್ಕೆ 1985ರಲ್ಲಿ ಸೌರವ್ಯೂಹ  ವಿದ್ಯುತ್ ಬೆಳಕು ನೀಡುವ ವೈಜ್ಞಾನಿಕ ಉಪಕರಣದ ಅಳವಡಿಸಿರುವದರಿಂದ ಈ ಕಗ್ಗಾಡಿನಲ್ಲಿಯ ಹಳ್ಳಿಯ ಹೆಸರು ಆ ತಾಲ್ಲೂಕಿನವರಿಗೆ ಪರಿಚಿತವಾಗಿದೆ. ಈ ಸ್ಥಿತಿಯಲ್ಲಿ ಇದ್ದಾಗ ಕರ್ನಾಟಕಕ್ಕೆ ಪರಿಚಿತವಾಗಿಸಿದೆ ಎನ್ನಬಹುದು. ಇದು ಈಗ ಔರಾದ ತಾಲ್ಲೂಕಿನ ಒಂದು ಗ್ರಾಮವಾಗಿದೆ. ರಾಜಕೀಯ–ನಿಜಾಮನ ಆಡಳಿತ ಕಾಲ ಮುಗಿಯುವ ಹೊತ್ತಿಗೆ ರಜಾಕಾರರ ಹಾವಳಿ ಹೆಚ್ಚಾಗಿತ್ತು, ತೋರಣದ ರೋಹಿಲರು, ಪಠಾಣರು, ಹಿಂದುಗಳಿಗೆ ಬಹುವಾಗಿ ತ್ರಾಸ ಒಡ್ಡಿದರು. ಅಲ್ಲದೆ ಅನೇಕ ದುರಂಥ ಕಥೆಗಳಿಗೆ ಕಾರಣರಾದರು ರಕ್ತ ಪಾತಗಳಾದವು, ಮಾನಹಾನಿ, ಧನಹಾನಿ ಹೇರಳವಾಗಿ ಆಯಿತು. ಮುಂದೆ ಹಿಂದುಗಳಲ್ಲಿ ಸ್ವಾತಂತ್ರ್ಯ ಯೋಧರು, ರಜಾಕಾರರ ಹಾವಳಿಯನ್ನು ಹತ್ತಿಕ್ಕಿದರು. ಪೊಲೀಸ್ ಆಕ್ಷನದಿಂದ ಪೂರ್ಣ ಮೂಲೆ ಗುಂಪಾಗಿ ಶಾಂತಿ ನೆಲೆಸಿತ್ತು. ಆವಾಗ ಅನೇಕ ಮಹನೀಯರು ಅಂದರೆ ಬೆಲೂರಿನ ಸದಾಶಿವಜೆ ಮುಂತಾದವರು ಹೋರಾಡಿ ಪ್ರಾಣ ತೆತ್ತರು. ಅವರ ಬಗ್ಗೆ ಒಂದು ಗ್ರಂಥದಲ್ಲಿ ಕೂಡ ಉಲ್ಲೇಖವಾಗಿದೆ. ಇದೇ ಪ್ರಕಾರ 1916ರಲ್ಲಿ ಜನಿಸಿದ ಔರಾದದ ಶ್ರೀ ಮುರಲಿಧರರಾವ ಕಾಮತೀಕರ ಸ್ವಾತಂತ್ರ್ಯ ಹೋರಾಟಗಾರರು ಇವರು ಸ್ವಾತಂತ್ರ್ಯದ ಮುನ್ನ 1938ರಲ್ಲಿ ಸತ್ಯಾಗ್ರಹದಲ್ಲಿ ಧುಮುಕಿ 9 ತಿಂಗಳು ಜೈಲುವಾಸ ಮತ್ತು 300 ರೂ. ದಂಡೆತ್ತೆತ್ತರು. ರಾಷ್ಟ್ರಕ್ಕಾಗಿ ನಡೆದ 1943ರಲ್ಲಿ ಚಲೇಜಾವ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದರು. ಆನಿಮಿತ್ಯ 6 ತಿಂಗಳು ಜೈಲು ಶಿಕ್ಷೆ ಅನುಭವಿಸಿದರು. 1946ರಲ್ಲಿ ರಾಜ್ಯ ಕಾಂಗ್ರೆಸ್ ಪಕ್ಷದ ವತಿಯಿಂದ ಹೈದ್ರಾಬಾದ್ ಚಿಕ್ಕಡಪಲ್ಲಿಯಲ್ಲಿ ಬಹಿರಂಗ ಸಭೆಯಲ್ಲಿ ಭಾಷಣ ಮಾಡಿದರು. ಅದು ನಿಜಾಮನ ಸರಕಾರಕ್ಕೆ ವಿರುದ್ಧವಾಗಿದ್ದರಿಂದ ಇವರಿಗೆ ದೇಶದ್ರೋಹಿ ಎಂದು 15 ತಿಂಗಳು ಜೈಲು ಶಿಕ್ಷೆ ವಿಧಿಸಿದರು. ಇವರು ಆದರ್ಶ ವಕೀಲರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಔರಾದ ನಾಗರಿಕರಿಗೆ ಮಾರ್ಗದರ್ಶಕರಾಗಿದ್ದಾರೆ.

ಹೀಗೆಯೇ ತಾಲ್ಲೂಕಿನ ಪ್ರಮುಖ ಊರಾದ ಮುಧೋಳ(ಬಿ) ಗ್ರಾಮದ ಮಾಧವರಾವ ಬಸನಾಳೆ, ಕಮಲನಗರದ ಮಾಧವರಾವ ಭವರಾ, ಮಾಧವರಾವ ಪಾಟೀಲ, ಮಾಣಿಕರಾವ ರಾಚಪ್ಪಾ ಪಾಟೀಲ, ಡೋಣಗಾಂವದ ವೀರಶೆಟ್ಟೆಪ್ಪಾ ಶೆಗೆದಾರ ಮುಂತಾದವರು ಸ್ವಾತಂತ್ರ್ಯ ಹೋರಾಟಗಾರರಾಗಿ ಕರ್ನಾಟಕ ಏಕೀಕರಣಕ್ಕಾಗಿ ದುಡಿದಿದ್ದಾರೆ.

ಸ್ವತಂತ್ರ್ಯ ನಂತರ ತಾಲ್ಲೂಕಿನಲ್ಲಿ ಅನೇಕ ಸಮಾಜ ಸುಧಾರಕರು ಧುರೀಣರು ಹುಟ್ಟಿ, ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡುತ್ತಿದ್ದಾರೆ. ಅವರಲ್ಲಿ ಮುಖ್ಯರಾದವರೆಂದರೆ, ಶ್ರೀ ಕಾಶಿನಾಥರಾವ ಬೆಲೂರೆ,

ಇವರು ಅಸ್ಪ್ರಶ್ಯೋದ್ಧಾರ, ಶಿಕ್ಷಣ ಪ್ರಸಾರ, ಬಡವರಿಗೆ ಉಚಿತ ನ್ಯಾಯ ಸೌಲಭ್ಯ ಮಾಡಿ ನೀತಿ ನ್ಯಾಯ ನಿಸ್ವಾರ್ಥ ಸೇವೆಯ ಪೂಜ್ಯನೀಯ ವ್ಯಕ್ತಿಯಾಗಿ ವಕೀಲ ವೃತ್ತಿಯಲ್ಲಿ ಮಹತ್ತರ ಸೇವೆ ಸಲ್ಲಿಸುತ್ತಿದ್ದಾರೆ. ಇವರು ವಿಷಮತಾ ಮುಕ್ತಿ ಆಂದೋಲನ, 1953ರಲ್ಲಿ ಭಾಷಾವಾರು ಪ್ರಾಂತ ರಚನೆಯ ಮುನ್ನ ಶ್ರೀ ಮಾಧವರಾವ ಉದ್ಗೀರ ಕ್ಷೇತ್ರದಲ್ಲಿದ್ದು ನಿಜಾಮನ ಆಳ್ವಿಕೆಯಲ್ಲಿ ಎಂ.ಎಲ್.ಎ.ಆಗಿ ದುಡಿದಿದ್ದರು. 1956ರಲ್ಲಿ ಭಾಷಾವಾರು ಪ್ರಾಂತವಾಗಿ ಕರ್ನಾಟಕ ಉದಯವಾದ ನಂತರ 1957ರಲ್ಲಿ ಶ್ರೀ ಪ್ರಭುರಾವ ಜಗದಾಳೆ ಮೀಸಲು ಕ್ಷೇತ್ರದಿಂದ ಎಂ.ಎಲ್.ಎ. ಆಗಿ ಆರಿಸಿ ಬಂದು ಸೇವೆ ಸಲ್ಲಿಸಿದರು. ಶ್ರೀ ಬಳವಂತರಾವ ಖಾನಾಪುರಕರ ಇವರು ಒಳ್ಳೆಯ ವಕೀಲರು 1963ರಲ್ಲಿ ವಿಧಾನ ಸಭೆಗೆ ಮಹಾರಾಷ್ಟ್ರ ಏಕೀಕರಣ ಸಮಿತಿಯಿಂದ ಶಾಸಕರಾಗಿ ಆರಿಸಿ ಬಂದರು. 1967ರಲ್ಲಿ ಶ್ರೀ ಮಾಣಿಕರಾವ ಪಾಟಿಲರು ಕಾಂಗ್ರೇಸ್ ಅಭ್ಯರ್ಥಿಯಾಗಿ ಗೆದ್ದು ಶಾಸಕರಾಗಿ ಸೇವೆ ಸಲ್ಲಿಸಿದರು. ಪುನ: ಶ್ರೀ ವಿರೇಂದ್ರ ಪಾಟೀಲರು ಮುಖ್ಯ ಮಂತ್ರಿಗಳಾಗಿದ್ದಾಗ ಇವರು ಡೆಪ್ಯೂಟಿ ಗೃಹ ಮಂತ್ರಿಗಳಾಗಿ ಉತ್ತಮ ಸೇವೆ ಸಲ್ಲಿಸಿದರು. ನಂತರ 1978ರಲ್ಲಿ ಎರಡನೆ ಬಾರಿ ಶಾಸಕರಾಗಿ ಬಂದು ದೇವರಾಜ ಅರಸರ ವೇಳೆಯಲ್ಲಿ ಆಹಾರ ಮತ್ತು ನಾಗರಿಕ ಪೂರೈಕೆ ಸಚಿವರಾಗಿ ಒಳ್ಳೆಯ ಸೇವೆ ಸಲ್ಲಿಸಿದರು. ಆ ವೇಳೆಗೆ ಅವರ ಕನಸುಗಳಾದ ಹೊರಂಡಿ ಮತ್ತು ಬಳವಂತರಾವ ಖಾನಾಪೂರ ಊರಿನ ಏತ ನೀರಾವರಿ ಯೋಜನೆಗಳು ಮೊನ್ನೆ ಮೊನ್ನೆ ನೂತನ ಸರಕಾರ ನನಸಾಗಿಸಿದೆ. ಇವರು ತಮ್ಮ ಅಧಿಕಾರ ಅವಧಿಯಲ್ಲಿ ಅನೇಕ ಜನಹಿತ ಕಾರ್ಯಗಳಾದ ರಸ್ತೆ ನೀರಿನ ಸರಬರಾಜು ವ್ಯವಸ್ಥೆ ವಿದ್ಯುತ್ ಶಕ್ತಿ ಪೂರೈಕೆಗಾಗಿ ಶ್ರಮಿಸಿದ್ದಾರೆ. ಜನತೆ ವಿಧಾನ ಸಭೆಗೆ ಪುನ: ಆಯ್ಕೆ ಮಾಡಿ ಕಳಿಸಿತ್ತು. ಇವರು ಶಿಕ್ಷಣ ಹಾಗು ಸಾಮಾಜಿಕ ಕ್ಷೇತ್ರದಲ್ಲಿ ಸುಮಾರು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ಅವರ ಪರಿಶ್ರಮದ ಫಲವಾಗಿ ಕುಶನೂರ ಪೂರ್ವ ದಿನ್ನೆಯ ಮೇಲೆ ಜವಾಹರಲಾಲ ನೆಹರೂ ಪಾಲಿಟೆಕ್ನಿಕ್ ಶಿಕ್ಷಣಾಲಯ ಎದ್ದು ನಿಂತಿದೆ.

ಶ್ರೀ ಬಾಪುರಾವ ಪಾಟೀಲ ಎಕಂಬೆಕರ್‌ರು ಒಳ್ಳೆಯ ಸಮಾಜ ಸುಧಾರಕರು ಆದರ್ಶ ಜೀವಿಗಳಾಗಿದ್ದು, ನೈತಿಕ ಬಲದಿಂದ 1973ರಲ್ಲಿ ವಿಧಾನ ಸಭೆಗೆ ಎಮ್.ಈ.ಎಸ್ ಪಕ್ಷದಿಂದ ಆಯ್ಕೆಯಾಗಿ ತಾಲ್ಲೂಕಿನಲ್ಲಿ ಒಳ್ಳೆಯ ಸೇವೆ ಸಲ್ಲಿಸಿದರು. ಇವರು ನಿರಾವರಿ ಹಾಗೂ ಸಾರಿಗೆ ಸೌಲಭ್ಯಕ್ಕಾಗಿ ಹೋರಾಡಿ ಹಿಂದೆ ಬಿದ್ದ ಪ್ರದೇಶದಲ್ಲಿ ದೊಡ್ಡ ಕೆರೆಗಳನ್ನು ಹಳ್ಳಿಗಾಡಿಗೆ ರಸ್ತೆಗಳನ್ನು ಮಾಡಿಸಲು ಪ್ರಯತ್ನ ಪಟ್ಟರು ಅಲ್ಪ ಸಂಖ್ಯಾ ಭಾಷಿಕರ ಪರವಾಗಿ ಒಳ್ಳೆಯ ದೃಷ್ಟಿ ಇಟ್ಟುಕೊಂಡವರು.

ಶ್ರೀ ನರಸಿಂಗರಾವ ಸೂರ್ಯವಂಶಿ ಡೋಣಗಾಂವ (ಎಂ) ಇವರು ಬೀದರದ ಮೀಸಲು ಕ್ಷೇತ್ರದಿಂದ ಲೋಕಸಭಾ ಸದಸ್ಯರಾಗಿ 1980ರಲ್ಲಿ ಮತ್ತು 1985ರಲ್ಲಿ ಪುನರಾಯ್ಕೆಯಾಗಿ ಆರಿಸಿ ಬಂದರು. ಹಿಂದುಳಿದ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟಿನ ಉನ್ನತಿಗಾಗಿ ಬಹಳವಾಗಿ ಶ್ರಮಿಸುತ್ತಿದ್ದಾರೆ ಅವರ ಜೀವನ ಮಟ್ಟ ಎತ್ತರಿಸಲು ಅನೇಕ ವಿಧದಿಂದ ಕಾರ್ಯೋನ್ಮುಖರಾಗಿದ್ದಾರೆ.

ಶ್ರೀ ಕೆ. ಪುಂಡಲಿಕರಾವ ಇವರು ಔರಾದ ತಾಲ್ಲೂಕಿನ ಮತ್ತು ತುದಿಗಿರುವ ಮಹಾರಾಷ್ಟ್ರ ಸೀಮೆಯ ಕೂಡ್ಲಿ ಗ್ರಾಮದವರು ಸರಳ ಜೀವಿಗಳು ಎಂ.ಎಸ್.ಸಿ. ಪದವಿಧರರು ಬಡತನದ ಕಹಿ ಉಂಡವರು ಸಾಮಾಜಿಕ ಬಡವರ್ಗ ಕುರಿತು ಕಳಕಳಿ ಚಿಂತನೆ ಉಳ್ಳವರು ಆಗಿದ್ದಾರೆ. ಇವರು ಶಿಕ್ಷಣ ಸಂಸ್ಥೆ ನಡೆಸುತ್ತಿದ್ದಾರೆ. ಅಲ್ಲದೆ 1983ರಲ್ಲಿ ಎಂ.ಎಲ್.ಸಿ. ಗಳಾಗಿ ಸೇವೆ ಸಲ್ಲಿಸಿದ್ದಾರೆ. ಡಾ: ಬಿ.ಆರ್.ಅಂಬೇಡ್ಕರ ತಾಂತ್ರಿಕ ಶಿಕ್ಷಣಾಲಯ ಔರಾದದಲ್ಲಿ ತೆರೆದಿದ್ದಾರೆ. ಜೊತೆಗೆ ನಾಲಂದಾ ಪ್ರೌಢ ಶಾಲೆ, ಮಾಧ್ಯಮಿಕ ಶಾಲೆ,

ನಾಲಂದಾ ಪ್ರೌಢ ಶಾಲೆ ಸುಂದಾಳ, ಪದವಿ ಪೂರ್ವ ಕಾಲೇಜು ಹುಲಸೂರ, ಕನ್ಯಾ ಪ್ರೌಢ ಶಾಲೆ ಸುಂದಾಳ, ಕನ್ಯಾ ಪ್ರೌಢ ಶಾಲೆ ಹಳ್ಳಿಖೇಡ ಹಾಗೂ ಪದವಿ ಪೂರ್ವ ಮಹಾವಿದ್ಯಾಲಯ ಬಸವಕಲ್ಯಾಣದಲ್ಲಿ ಪ್ರಾರಂಭಿಸಿದ್ದಾರೆ.

ಶ್ರೀ ಗುರುಪಾದಪ್ಪಾ ನಾಗಮಾರಪಳ್ಳಿ ಇವರು 1985ರಲ್ಲಿ ರಾಜ್ಯ ವಿಧಾನಸಭೆಗೆ ಜನತಾ ಪಕ್ಷದ ಅಭ್ಯರ್ಥಿಯಾಗಿ ಪ್ರಥಮ ಸಲ ಆರಿಸಿ ಬಂದಿದ್ದರು. ಒಳ್ಳೆಯ ಹುಮ್ಮಸಿನಿಂದ ತಾಲ್ಲೂಕಿನ ಸರ್ವಾಂಗೀಣ ಉನ್ನತಿಗಾಗಿ ದುಡಿಯುತ್ತಿದ್ದಾರೆ.

ಇವರು ಸಹಕಾರ, ಸಹಬಾಳ್ವೆ ಸಹ ಚಿಂತನಶೀಲರಾದವರು ಜಿಲ್ಲಾ ಕೇಂದ್ರ ಸಹಕಾರ (ಡಿ.ಸಿ.ಸಿ.ಬ್ಯಾಂಕ) ಬ್ಯಾಂಕಿನ ಸುಮಾರು ವರ್ಷಗಳಿಂದ ಸತತವಾಗಿ ಪ್ರಚಂಡ ಬಹುಮತ ಪಡೆದು ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿರುವುದನ್ನು ಜಿಲ್ಲೆಯ ಜನತೆ ಮರೆಯಲಾಗದು. ಇಡೀ ರಾಷ್ಟ್ರಕ್ಕೆ ಪ್ರಥಮ ಶ್ರೇಯ ಪಡೆದುಕೊಂಡು ಪ್ರಶಸ್ತಿ ವಿಜೇತವಾಗಿರುವ ಶ್ರೇಯ ಇವರಿಗೆ ಸಲ್ಲುತ್ತದೆ. ಇನ್ನೊಂದು ಮಹತ್ವದ ಕ್ರಾಂತಿ ಕೈಕೊಂಡಿರುವುದು ನಾರಂಜಾ ಸಹಕಾರ ಸಕ್ಕರೆ ಕಾರ್ಖಾನೆ ಅಧ್ಯಕ್ಷರಾಗಿ ಹಾಳು ಕುಂಪೆಯಾಗಿರುವ ಕಾರ್ಖಾನೆ ಕೇವಲ ಹತ್ತು ತಿಂಗಳಲ್ಲಿ ಕಾರ್ಯ ಪ್ರಾರಂಭಿಸಿರುವುದು ಹ್ಯಾಟ್ರಿಕ ದಾಖಲೆಯೊಂದಿಗೆ ಶ್ರೀ ಯುತರು ಸಹಕಾರ ಸಂಘದ ಸಂಪೂರ್ಣ ಅನುಭವಿಗಳಾಗಿರುವುದನ್ನು ಸಮಾಜ ಸೇವೆ ಗೈದಿರುವುದನ್ನು ಜನತೆ ಮರೆಯಲಾರದು.

ಶ್ರೀ ವೈಜಿನಾಥ ಪಾಟೀಲ ಹಕ್ಯಾಳರವರು ಈ ತಾಲ್ಲುಕಿನವರಾಗಿದ್ದು, ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನಲ್ಲಿ ವಕಾಲತ್ತು ಮಾಡುತ್ತಾರೆ. ಇವರು ಗುಲಬರ್ಗಾ ವಿಭಾಗದ ಶಿಕ್ಷಕರ ಪ್ರತಿನಿಧಿಯಾಗಿ 1984ರ ಚುನಾವಣೆಯಲ್ಲಿ ವಿಧಾನ ಪರಿಷತ್ ಸದಸ್ಯರಾಗಿ ಆರಿಸಿ ಬಂದರು. ಪಶು ಸಂಗೋಪನೆ ಹಾಗೂ ತೋಟಗಾರಿಕೆ ಮಂತ್ರಿಗಳಾಗಿ ಕೆಲಕಾಲ ಸೇವೆ ಸಲ್ಲಿಸಿದರು.

ಶ್ರೀ ಗಣಪತರಾವ ಖೂಬಾ ಇವರು ಔರಾದ ಭಾಗದ ಸಮಾಜ ಸುಧಾರಕರು ಅಲ್ಲದೆ ಶಿಕ್ಷಣ ಪ್ರಸಾರಕ್ಕಾಗಿ ಶ್ರೀ ಮಹತ್ಮಾ ಬಸವೇಶ್ವರ ಶಿಕ್ಷಣ ಸಂಸ್ಥೆಯ ಮುಖಾಂತರ ಶಾಲೆಗಳನ್ನು ನಡೆಸುತ್ತಿದ್ದಾರೆ. ಇವರು ಕರ್ನಾಟಕ ಏಕೀಕರಣದಲ್ಲಿ ಸಕ್ರೀಯ ಭಾಗವಹಿಸಿದ್ದರು. ಜೊತೆಗೆ ಶ್ರೀ ಶಂಕರೆಪ್ಪಾ ಉಚ್ಚೆ, ಗಂಗಪ್ಪಾ ಉಪ್ಪೆ, ಗುರುಲಿಂಪ್ಪಾ ಘೂಳೆ, ಚಂದ್ರಪ್ಪಾ ಪಾಟೀಲ, ಕಾಶೆಪ್ಪಾ ಶೆಟಕಾರ ಮುಂತಾದವರು ದುಡಿದಿದ್ದಾರೆ.

ಶ್ರೀ ಹಾವಗಿರಾವ ನಿಟ್ಟೂರೆ ಶಿಕ್ಷಕರು ಮತ್ತು ಶ್ರೀ ದಾವುದ ಮಲ್ಲಿಕ ದೇಶಮುಖ ಇವರು ತಾಲ್ಲೂಕು ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ ಒಳ್ಳೆಯ ಸೇವೆ ಸಲ್ಲಿಸಿರುವರಲ್ಲದೇ ಈಗ ಜಿ.ಪಂ. ಸದಸ್ಯರಾಗಿದ್ದಾರೆ. ಔರಾದ ನಗರ ಪಾಲಿಕೆಯ ಮಾಜಿ ಅಧ್ಯಕ್ಷರಾದ ಶ್ರೀ ವಿಶ್ವನಾಥ ಸಜ್ಜನ ಶೆಟ್ಟಿಯವರು ಮತ್ತು ಮಾಜಿ ಉಪಾಧ್ಯಕ್ಷರಾದ ಶ್ರೀ ಗಣಪತರಾವ ಉಚ್ಚೆಯವರು ನಗರದ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. ದಿವಂಗತ ಶ್ರೀ ಭಾರತ ಪೋಕಲವಾರ ಅವರು ಕಂಡಿರುವ ಕನಸು ಇವರು ನನಸಾಗಿಸುತ್ತಿದ್ದಾರೆ. ಇದಕ್ಕೆ ಪ್ರೋತ್ಸಾಹಿತರಾಗಿ ತರುಣ ಹೃದಯ ಶ್ರೀ ಎಂ.ಡಿ. ಗೌಸ, ಶ್ರೀ ಅಪ್ಪಾರಾವ ಖೂಬಾ, ಶ್ರೀ ರವೀಂದ್ರ ಮೀಸೆ, ಔರಾದ ತಾಲ್ಲೂಕಿನ ಆಶಾ ಜ್ಯೋತಿಯಾಗಿದ್ದಾರೆ. ಎನ್ನುವಲ್ಲಿ ಉತ್ಪ್ರೇಕ್ಷೆ ಇಲ್ಲ. ದಿವಂಗತ ಶಿವರಾಜ ಖೂಬಾ ಅವರು ಸಹ ಔರಾದ ತಾಲ್ಲೂಕಿನ ಅಭಿವೃದ್ಧಿಗೆ ಶ್ರಮಿಸಿದರಲ್ಲಿ ಒಬ್ಬರಾಗಿದ್ದರು.

ಶ್ರೀ ಬಸವಣ್ಣಪ್ಪ ಅಲಮಾಜಿ ಹಾಗೂ ಶ್ರೀ ಹಣಮಂತರಾವ ಪಾಟೀಲ ಅವರುಗಳು ಉತ್ತಮ ಮಾರ್ಗದರ್ಶಕರಾಗಿದ್ದಾರೆ. ಸಮಾಜ ಸೇವೆ ಕೈಕೊಂಡಿದ್ದಾರೆ. ದೇಶ ಸ್ವತಂತ್ರ್ಯ ಪಡೆಯುವಲ್ಲಿ ಯುವಕರಾಗಿ ರಾಷ್ಟ್ರದ ನೇತರರಾಗಿ ಸುಭಾಷ ಚಂದ್ರ ಭೋಸ್, ಭಗತ್‌ಸಿಂಗ್, ಚಂದ್ರಶೇಖರ ಆಜಾದ, ಅವರು ಯಾವ ಪ್ರಯತ್ನ ಶೀಲರಾಗಿದ್ದರೋ ಹಾಗೆಯೇ ರಾಜ್ಯದ ಅತೀ ಹಿಂದುಳಿದ ಔರಾದ ತಾಲ್ಲೂಕಿನ ಪ್ರಗತಿ ಕುಂಟಿತವಾಗಿರುವುದನ್ನು ತಿಳಿದು ಯುವ ಶಕ್ತಿಯ ಪ್ರೇರಣೆಯ ವ್ಯಕ್ತಿಯೇ ಅನಿಲಕುಮಾರ ಗುಂಡಪ್ಪಾ ಬಿರಾದಾರ ಮಾಜಿ ಶಾಸಕ ಪುತ್ರರಾಗಿದ್ದಾರೆ. ಯುವ ಶಕ್ತಿಯ ಗೆಳೆಯರನ್ನು ಸಂಘಟಿಸಿ ತಾಲ್ಲೂಕು, ಜಿಲ್ಲೆ, ರಾಜ್ಯ ಮತ್ತು ರಾಷ್ಟ್ರದಲ್ಲಿ ನಡೆಯುವ ದೌರ್ಜನ್ಯ, ಶೋಷಣೆ, ದಬ್ಬಾಳಿಕೆಗಳನ್ನು ಹೊಡೆದೊಡಿಸಿ. ಸರಕಾರದಿಂದ ಆಗಲಾರದ ಕೆಲಸ ತಾನುಮಾಡಿ ತೋರಿಸುವಲ್ಲಿ ಸಾಹಸದ ಯುವಕರೆಂದು ಗುರುತಿಸಿಕೊಂಡಿದ್ದಾರೆ.

ಶ್ರೀ ವಿಶ್ವನಾಥರಾವ ಪಾಟೀಲ ಹಕ್ಯಾಳ ಇವರು ವೈಚಾರಿಕತೆಯ ತಳಹದಿಯ ಮೇಲೆ ಧಮನ ಹಿಂದಿ ದೈನಿಕ ಪತ್ರಿಕೆ ನಡೆಸುತ್ತಿದ್ದಾರೆ. ಜೊತೆಗೆ ಸತ್ಯ ನಿಷ್ಠತೆ ಹಾಗೂ ಇದ್ದುದನ್ನು ಇದ್ದಂತೆ ಹೇಳುವ ಎದೆಗಾರಿಕೆ ಪಡೆದಿದ್ದಾರೆ. ಅಲ್ಲದೆ ಸಾಂಸ್ಕೃತಿಕ ಚಟುವಟಿಕೆಗಳ ಉತ್ತೇಜನಕ್ಕಾಗಿ. ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಇದೇ ಮಾರ್ಗದಲ್ಲಿ ಸಹೃದಯರಾದ ಶ್ರೀ ಶಿವರಾಜ ಕಾಡೋದೆ, ವಿಶ್ವನಾಥಗಂದಿಗೋಡೆ ಹಾಗೂ ಮಲ್ಲಿಕಾರ್ಜುನಪ್ಪ ಪಟ್ನೆ, ಕಾಮ್ರೇಡಗಳಾಗಿ ಪತ್ರಿಕಾ ವರದಿಗಾರರಾಗಿ ಸಮುದಾಯ, ಸಾಂಸ್ಕೃತಿಕ ಕಾರ್ಯಕರ್ತರಾಗಿ ತಮ್ಮ ಹುದ್ದೆಯಲ್ಲಿ ಇದ್ದುಕೊಂಡು ಜನಪರ ಸೇವೆ ಸಲ್ಲಿಸುತ್ತಿದ್ದಾರೆ. ಹಾಗೆಯೇ ಶ್ರೀ ಅಭಂಗರಾವ ಗಡದೆ, ಶ್ರೀ ರಾಮಣ್ಣಾ ಒಡೆಯರ ಬಾಬುರಾವ ತಾರೆ, ಹಿಂದುಳಿದ ಜನಾಂಗದ ಹಿತೈಷಿಗಳಾಗಿದ್ದಾರೆ.

ಬಳತದ ಶ್ರೀ ಬಾಬುರಾವ ಫತ್ತೆಪುರೆ ಇವರು ಭಾಲ್ಕಿಯಲ್ಲಿ ಬಿ.ಎಸ್.ಸಿ. ಮುಗಿಸಿ ಬೆಂಗಳೂರಿನಲ್ಲಿ ಎಂ.ಎಸ್.ಸಿ. ಪಡೆದು ಮುಂದೆ ಅಮೇರಿಕೆಯ ಸಂಯುಕ್ತ ಸಂಸ್ಥಾನದ ಸ್ಟೇಟ್ ಯುನಿವರ್ ಸೀಟಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇದು ತಾಲ್ಲೂಕಿಗೆ ಹೆಮ್ಮೆಯ ವಿಷಯವಾಗಿದೆ.

ಶ್ರೀ ವಿಶ್ವನಾಥರಾವ ಜಾಧವ ಗಣೇಶಪೂರ ಇವರು ತಾಲ್ಲೂಕಿನ ಶಿಕ್ಷಣ ಕ್ಷೇತ್ರಕ್ಕೆ ಆದರ್ಶ ಶಿಕ್ಷಕರಾಗಿ ಅನೇಕ ವರ್ಷ ಸೇವೆ ಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ. ಇವರಲ್ಲಿ ಕಲಿತ ಅನೇಕ ಪ್ರತಿಭಾವಂತ ವಿದ್ಯಾರ್ಥಿಗಳಿಸಿಕೊಂಡವರು ದೊಡ್ಡ ಹುದ್ದೆಗಳಿಗೆ ಹೋಗಿದ್ದಾರೆ.

ಶ್ರೀ ಸೋಮನಾಥಪ್ಪಾ ಸೋಲ್ಲಾಪೂರೆ, ಶ್ರೀ ನಾಗನಾಥರಾವ ಮಳಗೆ ಅವರುಗಳು, ಸಹಾಯಕ ಜಿಲ್ಲಾಧಿಕಾರಿಗಳಾಗಿ ತಾಲ್ಲೂಕಿಗೆ ಒಳ್ಳೆಯ ಕೀರ್ತಿ ತಂದು ಕೊಟ್ಟಿದ್ದಾರೆ. ದಕ್ಷ ಆಡಳಿತಗಾರರೆಂದು ಹೆಸರು ವಾಸಿಗಳಾಗಿದ್ದಾರೆ.

ಹಿರೋ ಹೊಂಡಾ ಸಾಮ್ರಾಟನೆಂದು ಬಿರುದು ಪಡೆದಿರುವ ಶ್ರೀ ವಿಜಯಕುಮಾರ ನಾಗಮಾರಪಳ್ಳಿಯವರು ತಾಲ್ಲೂಕಿನ ನಾಗಮಾರಪಳ್ಳಿ ಗ್ರಾಮದವರು ಇವರ ತಂದೆ ಮಾಜಿ ಮಂತ್ರಿಗಳಾದ ಸಹಕಾರ ಸಂಘಗಳ ಪಿತಾಮಹ ಎನ್ನಿಸಿಕೊಂಡಿರುವ ಶ್ರೀ ಗುರುಪಾದಪ್ಪಾ ನಾಗಮಾರಪಳ್ಳಿಯವರು. ದಯಾಪರರಾದ ಶ್ರೀ ವಿಜಯಕುಮಾರ ನಾಗಮಾರಪಳ್ಳಿಯವರು ವ್ಯವಹಾರಿಕವಾಗಿ ಪ್ರಮಾಣಿಕರು ಹೌದು.

ಶಾಂತಿ ಪ್ರಿಯರೆಂದು ಜನರ ಮನಸ್ಸನ್ನೇ ಸೂರೆಗೊಂಡವರು, ಭಾರತ ಮತ್ತು ಇತರ ದೇಶಗಳ ವ್ಯವಹಾರಗಳಲ್ಲಿ ಹಿರೋ ಹೊಂಡಾ ಮಾರಾಟದಲ್ಲಿ ಒಳ್ಳೆಯ ಶ್ರೇಯಸ್ಸು ಉತ್ತಮ ಪ್ರಶಸ್ತಿ ಪಡೆದಿರುವ ಕೀರ್ತಿ ತಾಲ್ಲೂಕಿಗೆ ಮತ್ತು ಜಿಲ್ಲೆಗೆ ಸಲ್ಲುತ್ತದೆ. ಕೌಡಗಾಂವದ ಶಂಕರ ಪಾಟೀಲ ಮುಖ್ಯ ಮಂತ್ರಿಗಳ ಆಪ್ತ ಕಾರ್ಯದರ್ಶಿಗಳಾಗಿ ಕಾಶಿನಾಥ ಗೋಖಲೆ, ಮತ್ತು ಅಮರನಾಥ ತಲವಾಡೆ ಬಳತ (ಬಿ) ಯವರು ಐ.ಎ.ಎಸ್. ಉನ್ನತ ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ರಾಘವೆಂದ್ರ ಔರಾದಕರ, ಅವರು ಐ.ಪಿ.ಎಸ್. ಅಧಿಕಾರಿ ಪೊಲೀಸ್ ಇಲಾಖೆಯಲ್ಲಿ ಅಧಿಕಾರಿಗಳೆಂದು ಹೆಸರುಗಳಿಸಿದ್ದಾರೆ. ಜಿಲ್ಲೆಯ ಪ್ರಥಮ ಪದವಿ ಪಡೆದಿರುವ ಕೀರ್ತಿ ಔರಾದ ತಾಲ್ಲೂಕಿಗೆ ಸಲ್ಲುತ್ತದೆ.

ಶ್ರೀ ರಾಮಚಂದ್ರ ವೀರಪ್ಪನವರು ಒಬ್ಬ ದೇಶ ಭಕ್ತರಾಗಿ ಸ್ವತಂತ್ರ್ಯ ಸೇನಾನಿಯಾಗಿ ಸರಳ ಸಜ್ಜನಿಕೆಯ ವ್ಯಕ್ತಿಯಾಗಿ ಸ್ವತಂತ್ರ ಪೂರ್ವದಿಂದಲೂ ದೇಶ, ಜನತೆ ಮತ್ತು ಬದುಕಿಗಾಗಿ ತಮ್ಮ ಜೀವನವನ್ನೇ ಸವೆಸಿದ್ದಾರೆ ಸ್ವಾಮಿ ರಾಮಾನಂದ ತೀರ್ಥ, ಶ್ಯಾಮ ಸುಂದರ ಹೋರಾಟದಲ್ಲಿ ಇಳಿದವರು. ಮತ್ತು ಜೈಲು ಶಿಕ್ಷೆ ಉಂಡವರಾಗಿದ್ದಾರೆ. ಇಂದಿಗೂ ಸತತವಾಗಿ ಮೂರನೆಯ ಅವಧಿಯಲ್ಲಿ ಲೋಕಸಭೆ ಸದಸ್ಯರಾಗಿ ಪ್ರಚಂಡ ಬಹುಮತ ಪಡೆದು ಧನ್ಯರಾಗಿದ್ದಾರೆ. ಇವರು ತಾಲ್ಲೂಕು, ಜಿಲ್ಲೆ, ರಾಜ್ಯ ಮತ್ತು ರಾಷ್ಟ್ರಕ್ಕೆ ಅಪಾರ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀಯುತ ಪಂಡರಿನಾಥರಾವ ಪಾಟೀಲ ಏಕಂಬಾ ಇವರು ಕಾಂಗ್ರೆಸ ಪಕ್ಷದ ನಿಷ್ಠಾವಂತ ನಾಯಕರಾಗಿ ಗಡಿಭಾಗದಲ್ಲಿ ಸರ್ವಾಂಗೀಣ ಅಭಿವೃದ್ಧೀಗಾಗಿ 1965–70ರ ವರೆಗೆ ಟಿ.ಡಿ.ಬಿ.ದ. ಅಧ್ಯಕ್ಷರಾಗಿ ಮತ್ತು ಶ್ರೀ ಹಾವಗಿರಾವ ನಿಟ್ಟೂರೆ ಚಿಕಲಿಕರ 1971–72 ರಿಂದ ಜೊತೆಗೂಡಿ ತಾಲ್ಲೂಕಿನ ನೀರಾವರಿ, ರಸ್ತೆ ನಿರ್ಮಾಣ, ಶಿಕ್ಷಣ ಅಭಿವೃದ್ಧಿ ಮಾಡುವಲ್ಲಿ ಮುಂದಾಗಿದ್ದರು. ಭೀಕರ ಬರಗಾಲದಲ್ಲಿ ಕೇಂದ್ರ ಸರ್ಕಾರದ ಅನುದಾನದಲ್ಲಿ ಹಲವಾರು ಕಾಮಗಾರಿಗಳು ಕೈಕೊಂಡಿದ್ದರು. ಸ್ಥಳೀಯ ಅಭಿವೃದ್ಧಿಗಾಗಿ ನಗರ ಪಾಲಿಕೆಯ ಅಧ್ಯಕ್ಷರಾಗಿ ಭರತ ಪೋಕಲವಾರ ಹೊಸ ಕ್ರಾಂತಿಯ ಕಾರ್ಯವನ್ನು ದಿ. ಶಿವರಾಜ ಖೂಬಾ ಉಭಯ ನಾಯಕರು ಕೈಗೊಳ್ಳುವಲ್ಲಿ ವಿಧಿವಶರಾದರು. ಅನೀಲ ಕುಲಕರ್ಣಿ ಹೊಳಸಮುದ್ರ ಇವರು ಒಂದು ಸಾಮಾಜಿಕ ಕ್ರಾಂತಿಯನ್ನು ಕರ್ನಾಟಕ – ಮಹಾರಾಷ್ಟ್ರದಲ್ಲಿ ರೈತರ ಸಮಸ್ಯೆ ಪರಿಹರಿಸುವಲ್ಲಿ ಸಂಸ್ಕೃತಿಯನ್ನು ಕಾಪಾಡಲು ಹವಣಿಸಿದವರಾಗಿದ್ದಾರೆ. ರಾಜಶೇಖರ ಮೂರ್ತಿ ಚಾಂದೋರಿ ಅವರು ಒಬ್ಬ ಉತ್ತಮ ಚಲನ ಚಿತ್ರ ನಟರಾಗಿ ಅಭಿನಯಸಿರುವುದು ಸ್ವಾಗತಾರ್ಹ ಇನ್ನು ಮುಂದೆ ಇವರು ತಮ್ಮ ಕಾರ್ಯ ವೈಖರ್ಯ ನಿಲುವು ಪರಿವರ್ತಿಸಿ ತಾಲ್ಲೂಕಿನ ಜನತೆಯಲ್ಲಿ ಜಾಗೃತಿ ಮೂಡಿಸುವ ಸಾಮಾಜಿಕ ಸೇವೆಯಲ್ಲಿ ತೊಡಗಿದ್ದಾರೆ.

ಶ್ರೀಮತಿ ರಾಜ ಶ್ರೀ ಶ್ರೀಕಾಂತ ಸ್ವಾಮಿ ಹೇಡಗಾಪುರ ಅವರು ಜಿ.ಪಂ. ಬೀದರ ಜಿಲ್ಲೆ ಪ್ರಪ್ರಥಮ ಮಹಿಳಾ ಅಧ್ಯಕ್ಷರಾಗಿ ಆಯ್ಕೆಯಾಗಿರುವುದು ಇತಿಹಾಸವಾಗಿದೆ. ರಾಷ್ಟ್ರ ನಾಯಕರಾದ ಶ್ರೀ ರಾಮಕೃಷ್ಣ ಹೆಗಡೆ, ಜೆ.ಎಚ್.ಪಟೆಲ, ಎಂ.ಪಿ.ಪ್ರಕಾಶರವರ ಮಾರ್ಗದರ್ಶನದಲ್ಲಿ ಸಮಸ್ತ ಬೀದರ ಜಿಲ್ಲೆಯ ಜಿಲ್ಲಾ ಪಂಚಾಯತದ ಕಾರ್ಯ ಕಲಾಪಗಳು ಅಭಿವೃದ್ಧಿಯಾಗುವಂತೆ ದುಡಿದಿದ್ದಾರೆ. ಅವರ ಸಹ ಪಾಲಿಯಾಗಿ ಔರಾದ ತಾಲ್ಲುಕಿನವರೇ ಆದ ಶ್ರೀ ರಘುನಾಥರಾವ ಜಾಧವ ಏಕಂಬಾ ಉಪಾಧ್ಯಕ್ಷರಾಗಿ ಕೂಡ ಕೆಲಸ ಮಾಡಿರುತ್ತಾರೆ. ಹಾಗೆಯೇ ಶ್ರೀಯುತ ರಾಜೇಂದ್ರಕುಮಾರ ಹಜಾರಿ ತೋರ್ಣ ಜಿಲ್ಲಾ ಪಂಚಾಯತ ಅಧ್ಯಕ್ಷರಾಗಿ, ಶ್ರೀಮತಿ ಉಷಾಬಾಯಿ ಬನಸೂಡೆ ಉಪಾಧ್ಯಕ್ಷರಾಗಿ ತಾಲ್ಲೂಕಿಗೆ ಎರಡನೆ ಶ್ರೇಯಸ್ಸು ಪಡೆದುಕೊಳ್ಳುವಲ್ಲಿ ಜನಪ್ರೀಯ ನಾಯಕರಾದ ಮಾಜಿ ಸಚಿವರಾದ ಶ್ರೀ ಗುರುಪಾದಪ್ಪಾ ನಾಗಮಾರಪಳ್ಳಿಯವರಿಗೆ ಸಲ್ಲುತ್ತದೆ.

ಯುವ ನಾಯಕ ಚಂದ್ರಶೇಖರ ಮಾಣಿಕರಾವ ಪಾಟೀಲ ಠಾಣಾಕುಶನೂರ ಅವರು ಮಿಂಚಿನ ವೇಗದಲ್ಲಿ ರಾಜ್ಯದಿಂದ ತಾಲ್ಲೂಕಿಗೆ ಕಾಣಿಸಿಕೊಂಡವರು. ಉನ್ನತ ಶಿಕ್ಷಣ ಪಡೆದಿರುವ ಇವರು ತಂದೆಯ ಆಶೀರ್ವಾದದ ಅನುಕಂಪ ಪಡೆದವರಾಗಿದ್ದಾರೆ. ಎ.ಪಿ.ಸಿ.ಸಿ. ಸದಸ್ಯರಾಗಿದ್ದಾರೆ. ರಾಜ್ಯದ ಯುವ ನಾಯಕರಲ್ಲಿ ಒಳ್ಳೆಯ ಹೆಸರು ವಾಸಿಯಾಗಿದ್ದಾರೆ. ಗತಿಸಿ ಹೊದ ವಿಧಾನಸಭೆ ಚುನಾವಣೆಯಲ್ಲಿ ಅಭ್ಯರ್ಥಿಯಾಗಿ ಸೋಲಿನಲ್ಲಿಯೇ ಗೆಲುವು ಕಂಡಿರುತ್ತಾರೆ. ಜನರ ಹೃನ್ಮನದಲ್ಲಿ ಯಾವಾಗಲೂ ಕರುಣಾಮಯಿಯಾಗಿ ಸರಳ ಜೀವಿಯಾಗಿ ಮನಮೋಹಕ ಮನಸ್ಸಿನವರಾಗಿದ್ದಾರೆ. ಜನರ ಸೇವೆಗಾಗಿ ಇನ್ನೂ ಇವರು ದುಡಿಯ ಬೇಕಾಗಿದೆ. ಸೌಲಭ್ಯ ವಂಚಿತ ತಾಲ್ಲೂಕು ಎನ್ನಿಸಿರುವುದು ಸತ್ಯ ಈ ಇತ್ಯರ್ಥಕ್ಕಾಗಿ 1999ರ ಸಾರ್ವಜನಿಕ ವಿಧಾನಸಭಾ ಚುನಾವಣೆಯಲ್ಲಿ ಪ್ರಚಂಡ ಬಹುಮತ ಪಡೆದು ಜಯಭೇರಿ ಮೊಳಗಿಸಿದ್ದ ವ್ಯಕ್ತಿ ಶ್ರೀಯುತ ಗುಂಡಪ್ಪಾ ಬಿರಾದಾರ (ವಕೀಲರು) ಶಾಸಕರೇ ಹೌದು ಎಂದೂ ಕಾಣದ ಮಹತ್ ಕ್ರಾಂತಿಯ ಹೋರಾಟದ ಮುಖಾಂತರ ಗೆಲುವು ಸಾಧಿಸಿರುವುದನ್ನು ಕೆಲವು ಘಟನೆಗಳನ್ನು ನೆನಪಿಸಿಕೊಂಡರೆ ಆಶ್ಚರ್ಯವಾಗಬಹುದು ಭಾರತ ಸ್ವಾತಂತ್ರ್ಯವಾದ ನಂತರ, ಕರ್ನಾಟಕ ಏಕೀಕರಣದ ತದ ನಂತರ ರಾಜ್ಯ & ತಾಲ್ಲೂಕುಗಳಲ್ಲಿ ಆಗಿರುವ, ನಡೆದಿರುವ ಪ್ರಸಂಗಗಳು ಬಹಳ ಜಟಿಲವಾಗಿ ಜಾಡ್ಯವನ್ನೇ ಹಿಡಿದಿದ್ದವು. ಭಾಷೆ, ಜಾತಿ, ಮೇರೆ ಇತ್ಯಾದಿಗಳು ಬಿಡಿಸಲಾರದ ಗಂಟುಗಳಾಗಿದ್ದವು ಈ ಎಲ್ಲವುಗಳನ್ನು ಜನರಿಂದ ಹೊಡೆದೊಡಿಸಲು ಚುನಾವಣೆಯ ಪೂರ್ವ ಸಿದ್ದತೆ ಅಂಗವಾಗಿ ಮೂರು ವರ್ಷಗಳ ಹಿಂದಿನಿಂದಲೂ ಶಿಕ್ಷಿತನಾದ ಯುವನಾಯಕ ಹಾಲಿ ಶಾಸಕ ಶ್ರೀ ಗುಂಡಪ್ಪಾ ಬಿರಾದಾರ ತನ್ನದೆ ಆದ ಕೆಲವು ಧ್ಯೇಯ ಧೋರಣೆಗಳನ್ನು ಜನರ ಮುಂದೆ ತಿಳಿ ಹೇಳುವದನ್ನು ಗ್ರಾಮದಿಂದ ಗ್ರಾಮಕ್ಕೆ ತಾಂಡಾದಿಂದ ವಾಡಿಗಳಿಗೆ ಹಗಲು, ಇರುಳು ಎನ್ನದೆ ಮ್ಯಾಕ್ಸಿಕ್ಯಾಬ ವಾಹನಕ್ಕೆ ಪಕ್ಷದ ಲಾಂಛನವನ್ನು ಲೇಪಿಸಿ ಬಡವರ ದೀನ ದಲಿತರ ಸಮಸ್ಯೆಗಳಿಗೆ ಸ್ಪಂದಿಸುತ್ತಾ ರಾಜಕೀಯದಲ್ಲಿ ಧುಮುಕಿದ ವ್ಯಕ್ತಿಯೇ ಈ ಶಾಸಕ.

ಸ್ವಗ್ರಾಮವಾದ ಜೊನ್ನಿಕೇರಿಯಿಂದಲೇ ತನ್ನ ಕಾರ್ಯಕಲಾಪಗಳು ಪ್ರಾರಂಭ ಮಾಡಿರುವುದು 56 ವರ್ಷಗಳಿಂದ ತಾಲ್ಲೂಕಿನ ಅಭಿವೃದ್ಧಿ ಕುಂಟಿತಗೊಳ್ಳುತ್ತ ಹೋಗಿದೆ. ಅದನ್ನು ಪುನರಾವರ್ತಿತ ಮಾಡುವದೆ ನನ್ನ ಗುರಿಯೆಂದು ತಾಲ್ಲೂಕಿನ ಜನತೆಯ ಆಶಾ ಕಿರಣದ ವ್ಯಕ್ತಿಯಾಗಿ ದುಡಿಯುತ್ತಿದ್ದಾರೆ. ಶಿಕ್ಷಣ, ಆರೋಗ್ಯ, ಆರ್ಥಿಕ ಸುಧಾರಣೆ, ನಿರುದ್ಯೋಗ ನಿವಾರಣೆ, ನೀರು ಸರಬರಾಜು, ಸಾರಿಗೆ ವ್ಯವಸ್ಥೆ, ನೀರಾವರಿ ಸೌಲಭ್ಯ, ರೈತ ಕಾರ್ಮಿಕರಿಗೆ ಆಶ್ರಯ ಮತ್ತು ಸೌಲಭ್ಯಗಳು ಇತ್ಯಾದಿ ಪೊರೈಸಲು ತನ್ನದೆ ಆದ ಯೋಜನೆಯನ್ನ ಹಾಕಿಕೊಂಡಿರುತ್ತಾರೆ. ಬಸ್ ಡೀಪೋ, ಮಿನಿ ವಿಧಾನ ಸೌಧ, ರಾಜ್ಯ ಹೆದ್ದಾರಿ, ರಾಷ್ಟ್ರ ಹೆದ್ದಾರಿ ಬೇಡಿಕೆ, ಕೆರೆಗಳ ನಿರ್ಮಾಣ, ನಗರಾದ್ಯಂತ ವಿಸ್ತಾರವಾದ ರಸ್ತೆಗಳು ದೀಪಾಲಂಕಾರ ಸಸಿ ನೆಡುವಿಕೆ, ಅರಣ್ಯ ಸಂರಕ್ಷಣೆ, ಆಸ್ಪತ್ರೆಗಳು ಹೆಚ್ಚಿಸುವಿಕೆ, ಪಶು ಸಂಗೋಪನೆ ವಿಕಾಸ ಇತ್ಯಾದಿಗಳು ಪ್ರಗತಿ ಕಾಣಲು ಕಾರ್ಯ ತತ್ಪರರಾಗಿದ್ದಾರೆ. ಸರ್ಕಾರದ ಹಣ ಪ್ರತಿ ತಾಲ್ಲುಕಿಗೆ ಬಂದರೂ ಸಂಪೂರ್ಣವಾಗಿ ಇಲಾಖಾವಾರು ಖರ್ಚು ಮಾಡುವುದು ಮತ್ತು ಪರಿಶೀಲಿಸುವುದು ಸ್ವಯಂ ಜಾಗೃತರಾಗಲು ಹಳ್ಳಿ ಹಳ್ಳಿಗಳಿಗೆ, ತಾಂಡಾಗಳಿಗೆ, ವಾಡಿಗಳಿಗೆ ಸ್ವಂತ ಭೇಟ್ಟಿಯಿತ್ತು ಜನರ ಆಗು ಹೋಗುಗಳಿಗೆ ಸ್ಪಂದಿಸುತ್ತಿದ್ದಾರೆ. ಹಿಂದೆ ಆಗಿರುವ ಹಲವಾರು ಲೋಪದೋಷಗಳನ್ನು ಸರಿಪಡಿಸಲು ಮುಂದಾಗಿದ್ದಾರೆ. ಇನ್ನೂ ಇವರ ಸೇವೆ ಹೆಚ್ಚಿನ ರೀತಿಯಲ್ಲಿ ಜನರಿಗೆ ಸಿಗಲಿ ಎಂದು ಆಶಿಸೋಣ ಭಾರತಾಂಬೆ ಇವರಲ್ಲಿ ಆಶಕ್ತಿ ಕೊಡಲೆಂದು ಹಾರೈಸೋಣ. ತಾಲ್ಲೂಕಿನ

ಭವಿಷ್ಯವನ್ನು ಉಜ್ವಲಮಾನವಾಗ ಬೇಕಾದಲ್ಲಿ ಹಲವಾರು ಕುಂದು ಕೊರತೆಯ ಕಾರಣಗಳುಂಟು ಇಲ್ಲಿಯ ಜನಾಂಗ ಯಾವುದೇ ಇದ್ದರೂ ಎಲ್ಲರೂ ಭಾವೈಕ್ಯತೆಯಿಂದ ಬಂಧು ಭಾವದಿಂದ ಇರುತ್ತಾರೆ.

***ಸಮಾಜ ಸುಧಾರಕರು ಮತ್ತು ಸೇವೆ:-***

ಶ್ರೀಮತಿ ಲಕ್ಷ್ಮೀಬಾಯಿ ಭೀಮಣ್ಣಾ ಖಂಡ್ರೆ ಅವರು ತಾಲ್ಲೂಕಿನ ನಾಗೂರ (ಬಿ) ಗ್ರಾಮದಲ್ಲಿ ಜನಿಸಿದರು. ಪರಮ ಪೂಜ್ಯ ಡಾ: ಮ.ಘ.ಚ. ಚನ್ನಬಸವ ಪಟ್ಟದೇವರು ಹಿರೇಮಠ ಭಾಲ್ಕಿ ಅವರ ಪರಮ ಶಿಷ್ಯರು, ಲೋಕನಾಯಕ ಶ್ರೀ ಭೀಮಣ್ಣಾ ಖಂಡ್ರೆ ಭಾಲ್ಕಿ ಇವರ ಧರ್ಮ ಪತ್ನಿ. ಸತಿ ಪತಿಗಳು ಒಂದಾದ ಭಕ್ತಿ ಹಿತ ಒಪ್ಪುವುದು ಶಿವಂಗೆ ಎನ್ನುವ ಪೂಜ್ಯ ಗುರುಗಳಾದ ಡಾ: ಚನ್ನಬಸವ ಪಟ್ಟದೇವರ ಪರಮ ಭಕ್ತರು ಮತ್ತು ಮೊದಲನೇ ಆರಾಧಕರೆಂದು ಜೀವನ ಸಾರ್ಥಕ ಮಾಡಿಕೊಂಡವರು ಆಗಿದ್ದಾರೆ. ಶ್ರೀ ರಾಮಕೃಷ್ಣ ಪರಮ ಹಂಸರ ಶಿಷ್ಯ ಸ್ವಾಮಿ ವಿವೇಕಾನಂದರ ಹಾಗೇ ಡಾ: ಚನ್ನಬಸವ ಪಟ್ಟದೇವರು ದಾಸೋಹ ಜೀವಿ ಶ್ರೀಮತಿ ಲಕ್ಷ್ಮೀಬಾಯಿ ಪೂಜ್ಯ ಗುರುಗಳ ತೀರ್ಥ ಪ್ರಸಾದದೊಂದಿಗೆ ನಿತ್ಯ ಕಾಯಕದಲ್ಲಿ ನಿರತರಾಗಿರುತ್ತಿದ್ದರು. ಇವರು ಸರಳ, ದಯಾಪರವಾಗಿ ನಿತ್ಯ ತಮ್ಮ ಮನೆಯಲ್ಲಿಯೇ ಬಂದ ಜನರನ್ನು ಸಾರ್ವಜನಿಕವಾಗಿ ಊಟ ಉಪಚಾರಗಳನ್ನು ಮಾಡಿಸುತ್ತಿದ್ದರು. ಹೀಗೆ ಮುಂದುವರೆದು ಗುರುಗಳ ಆಶೀರ್ವಾದದಿಂದ ಪತಿ ಎನ್ನಿಸಿಕೊಂಡ ಶ್ರೀ ಭೀಮಣ್ಣಾ ಖಂಡ್ರೆಯವರನ್ನು ರಾಜಕೀಯ ಮತ್ತು ಸಾಮಾಜಿಕ ಬದುಕಿನಲ್ಲಿ ಪ್ರವೇಶಿಸುವುದಕ್ಕೆ ಪ್ರೇರಣಾಶಕ್ತಿಗೆ ಕಾರಣವಾದ ಲಕ್ಷ್ಮೀಬಾಯಿಯವರ ತಂದೆ ಮನೆ ನಾಗೂರ (ಬಿ) ಯಾಗಿದೆ.

ಶ್ರೀ ಉಮಾಕಾಂತ ನಾಗಮಾರಪಳ್ಳಿ, ಶ್ರೀ ಅರವಿಂದ ಪಾಟೀಲ, ಶ್ರೀ ಶೇಖರ ಪಾಟೀಲ ಠಾಣಾಕುಶನೂರ, ಶ್ರೀಮತಿ ರಾಜೇಶ್ರಿ ಶ್ರೀಕಾಂತ ಸ್ವಾಮಿ ಹೆಡಗಾಪೂರ, ಶ್ರೀ ವೈಜಿನಾಥ ಸುಂದಾಳೆ, ಶ್ರೀ ಮುಗದಮ್ ಶೆಂಬೆಳ್ಳಿ, ಶ್ರೀ ಬಸವರಾಜ ಪಾಟೀಲ ಕೊಳ್ಳೂರ, ಶ್ರೀ ಘಾಳೆಪ್ಪ ಮಮದಾಪೂರ, ಶ್ರೀ ಅಶೋಕ ಮಾಳೆ, ಶ್ರೀ ಹಣಮಂತ ಲಾಧಾ, ಶ್ರೀ ರಾಮಣ್ಣಾ ಒಡೆಯರ್. ಶ್ರೀ ಅನೀಲಕುಮಾರ ಚಿಲ್ಲರ್ಗೆ, ರಘುನಾಥ ಜಾಧವ, ಅಭಂಗರಾವ ಗಡದೆ, ರವೀಂದ್ರ ಮೀಸೆ, ರಮೇಶ ದೇವಕತೆ, ಅನೀಲಕುಮಾರ ಗುಂಡಪ್ಪಾ ಬಿರಾದಾರ. ಇವರುಗಳು ರಾಜಕೀಯದಲ್ಲಿ ಯುವ ಮುಖಂಡತ್ವದಲ್ಲಿ ಪ್ರಥಮ ಮುಂಚೂಣಿಯಲ್ಲಿದ್ದಾರೆ ಇವರುಗಳು ತಮ್ಮ ಇತಿಮಿತಿಯಲ್ಲಿ ಶ್ಲಾಘನೀಯ ಕಾರ್ಯ ಮಾಡುತ್ತ ಔರಾದ ತಾಲ್ಲೂಕಿನ ಜನತೆಯ ಜನ ನಾಯಕರುಗಳಾಗಿದ್ದಾರೆ.

***ರಾಜ್ಯ ಪ್ರಶಸ್ತಿ ಪಡೆದವರು:-***

ಪರಮ ಪೂಜ್ಯ ಶ್ರೀ ಡಾ: ಮ.ಘ.ಚ.ಚನ್ನಬಸವ ಪಟ್ಟದೇವರು (ಕಮಲನಗರ) ಹಿರೇಮಠ ಸಂಸ್ಥಾನ ಭಾಲ್ಕಿ ಕರ್ನಾಟಕದ ರಾಜ್ಯೋತ್ಸವ ಪ್ರಶಸ್ತಿ ಮತ್ತು ಗುಲಬರ್ಗಾ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ ಪದವಿ ಶ್ರೀ ಗುರುಪಾದಪ್ಪಾ ನಾಗಮಾರಪಳ್ಳಿ ಮಾಜಿ ಸಚಿವರು, ಅಧ್ಯಕ್ಷರು ಡಿ.ಸಿ.ಸಿ.ಬ್ಯಾಂಕ್ ಬೀದರ ಮತ್ತು ಅಧ್ಯಕ್ಷರು ನಾರಂಜಾ ಸಹಕಾರ ಸಕ್ಕರೆ ಕಾರ್ಖಾನೆ ಜನವಾಡಾ, ಬೀದರ ಜಿಲ್ಲೆ ಕೇಂದ್ರ ಸರಕಾರದಿಂದ ಉತ್ತಮ ಸಹಕಾರಿ ಪ್ರಶಸ್ತಿ ಪಡೆದಿದ್ದಾರೆ. ಪೂಜ್ಯ ಶ್ರೀ ಸಿದ್ದರಾಮ ಶರಣರು ಬೆಲ್ದಾಳ ಬಸವ ಶ್ರೀ ಪ್ರಶಸ್ತಿ ಚಿತ್ರದುರ್ಗ. ಶ್ರೀ ಮುರಳೀಧರರಾವ ಕಾಮತೀಕರ ಔರಾದ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಶ್ರೀ ವಿಶ್ವನಾಥರಾವ ಪಾಟೀಲ ಹಕ್ಯಾಳ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಶ್ರೀ ಅಬ್ರಾಹಂ ಇಸ್ಮಾಯಿಲ ಸುಂದಾಳ ಕರ್ನಾಟಕ ರಾಜ್ಯೋತ್ಸವ

ಪ್ರಶಸ್ತಿ, ಶ್ರೀಮತಿ ಯಶೋಧಮ್ಮ ಸಿದ್ದಬಟ್ಟೆ ಔರಾದ ಆದರ್ಶ ಶಿಕ್ಷಕಿ ರಾಷ್ಟ್ರಮಟ್ಟದ ಪ್ರಶಸ್ತಿ ದೆಹಲಿ, ಪ್ರೋ: ಬಾಬುರಾವ ವಡ್ಡೆ ಕರಕ್ಯಾಳ ಸರ.ಎಂ.ವಿಶ್ವೇಶ್ವರಯ್ಯ ಇಂಜಿನಿಯರ್ಸ ಡೈರಿ ಸರ್ವೆ ಪತ್ರಿಕೆ ಬೆಂಗಳೂರು, ಶ್ರೀ ಓಂಪ್ರಕಾಶ ರೊಟ್ಟೆ ಮದನೂರ ರಾಷ್ಟ್ರಪ್ರಶಸ್ತಿ ಯುವ ಜನ ಇಲಾಖೆ ಕೇಂದ್ರ ಸರಕಾರ ದೆಹಲಿ, ಶ್ರೀ ಪ್ರಭುಶೆಟ್ಟಿ ಸೈನಿಕಾರ ಸಂತಪೂರ ರಾಷ್ಟ್ರಪ್ರಶಸ್ತಿ ಯುವ ಜನ ಇಲಾಖೆ ಕೇಂದ್ರ ಸರಕಾರ ದೆಹಲಿ.

***ತಾಲ್ಲೂಕಿನ ಕನ್ನಡ ಚಟುವಟಿಕೆಗಳು:-***

ಬೀದರ ಜಿಲ್ಲೆಯಲ್ಲಿ ಕನ್ನಡ ಎಂದರೆ ಔರಾದ ತಾಲ್ಲೂಕಿನ ಹೆಸರು ನೆನಪಿಸಲೆಬೇಕು. ಬೀದರ ಜಿಲ್ಲೆಯಲ್ಲಿ ಕನ್ನಡ ಬೆಳಗಿಸಿದ ದಿವ್ಯ ಮೂರ್ತಿ ಚನ್ನಬಸವಪಟ್ಟದೇವರಿಗೆ ಸಲ್ಲುತ್ತದೆ ನಿಜಾಮನ ಕಾಲದಲ್ಲಿ (1885-90) ಕನ್ನಡ ಕಲಿತ್ತಿದ್ದು, ಈ ತಾಲ್ಲೂಕಿನ ಮುಧೋಳ ಗ್ರಾಮದ ಮಠದಲ್ಲಿ ನಂತರ ಪಟ್ಟದೇವರು ಭಾಲ್ಕಿ ಮಠಕ್ಕೆ ಅಧಿಪತಿಯಾಗಿ ಬಂದು ಬೀದರ ಜಿಲ್ಲೆಯಾದ್ಯಂತ ಕನ್ನಡ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಕನ್ನಡ ಮತ್ತು ಕಮಲನಗರ ಖೇಡ ಸಂಗಮ ಗ್ರಾಮಕ್ಕೆ ಬಿಡದನಂಟು, ಪಟ್ಟದೇವರ ಶಾಂತಿವರ್ಧಕ ಶಾಲೆಯಲ್ಲಿ ತಯಾರಾದ ಶಿಕ್ಷಕರು ಮುಂದೆ ಜಿಲ್ಲಾದ್ಯಾದಂತ ಕನ್ನಡ ಸೇವೆಯಲ್ಲಿ ತೊಡಗಿದ್ದಾರೆ. ಪಟ್ಟದೇವರ ಜೊತೆಯಲ್ಲಿ ಕಾಶಿನಾಥರಾವ ಬೆಲೂರೆ, ನಾಗಶೆಟ್ಟಿ ಶಿವಣಕರ, ಗುರಪ್ಪಾ ಟೋಣ್ಣೆ, ಮಾಧವರಾವ ಬಸನಾಳೆ, ಭೀಮಣ್ಣಾ ಖಂಡ್ರೆ, ಆರ್.ಬಿ.ಬೀಡಪ್ಪನವರುಗಳ ಸೇವೆ ಶ್ಲಾಘನೀಯ ಭಾಷಾವಾರು ಪ್ರಾಂತ ರಚನೆ ನಂತರ ನಾಡಹಬ್ಬ ಆಚರಣೆ ಮುಖಾಂತರ ಕನ್ನಡ ಚಟುವಟಿಕೆಗಳಿಗೆ ಚಾಲನೆ ನೀಡಿದವರು. ನೂರಾರು ಜನ ಕನ್ನಡ ಸಾಹಿತ್ಯ ಪರಿಷತ್ತು ಜಾರಿಗೆ ಬಂದ ನಂತರ ನಿರಂತರವಾಗಿ ಕನ್ನಡ ಬೆಳವಣಿಗೆಗೆ ತಾಲ್ಲೂಕಾ ಮತ್ತು ಜಿಲ್ಲಾ ಕಸಾಪ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅನೇಕ ಕಾರ್ಯಕ್ರಮಗಳು ಜರುಗಿವೆ. ಇವುಗಳಲ್ಲಿ ಕಮಲನಗರದ ಗಡಿ ನಾಡು ಉತ್ಸವ ನೆನಪಿಸ ಬೇಕು. ಡಾ: ಪಾಟೀಲ ಪುಟ್ಟಪ್ಪ, ಡಾ: ಚಂದ್ರಶೇಖರ ಪಾಟೀಲ ಮೇಲಿಂದ ಮೇಲೆ ಈ ಗಡಿ ತಾಲ್ಲೂಕಿಗೆ ಭೇಟಿ ನೀಡಿ ಕನ್ನಡ ಕಾರ್ಯಕರ್ತರಿಗೆ ಬೆಂಗಾವಲಾಗಿ ನಿಂತಿದ್ದಾರೆ. ಪ್ರೋ: ಬಾಬುರಾವ ವಡ್ಡೆ, ಪ್ರೋ: ಎಸ್.ಎನ್.ಶಿವಣಕರ, ಸಂಜುಕುಮಾರ ಜುಮ್ಮಾ, ಪ್ರೋ: ಬಸವರಾಜ ಸ್ವಾಮಿ, ಪ್ರೋ: ಸಿದ್ರಾಮಪ್ಪಾ ಮಾಸಿಮಾಡೆಯವರು ಕನ್ನಡ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳು ತಿವ್ರಗೊಳಿಸಿ ಕನ್ನಡ ಜಾಗೃತಿ ಮೂಡಿಸುವಲ್ಲಿ ಹಗಲಿರುಳು ಶ್ರಮಿಸಿದ್ದಾರೆ. ಪೂಜ್ಯ ಸಿದ್ದರಾಂ ಶರಣರು ಬೆಲ್ದಾಳ, ಶ್ರೀ ಯಶೋಧಮ್ಮಾ ಸಿದ್ದಬಟ್ಟೆ, ಶ್ರೀಮತಿ ವಿಜಶ್ರೀ ಸಬರದ (ಪಾಟಿಲ) ತಾಲ್ಲೂಕಿನವರಾಗಿದ್ದು, ರಾಜ್ಯ ಮಟ್ಟದ ಸಾಹಿತಿಗಳಾಗಿ ಬೆಳೆದಿದ್ದಾರೆ.

ಪೂಜ್ಯ ಬಸವಲಿಂಗ ಪಟ್ಟದೇವರು ಹಿರೇಮಠ ಸಂಸ್ಥಾನ ಭಾಲ್ಕಿಯವರು ಔರಾದ ತಾಲ್ಲೂಕಿನಲ್ಲಿ ನೂರಾರು ಧಾರ್ಮಿಕ ಸಮಾರಂಭಗಳು, ಹಾಗೂ ಹಲವಾರು ಶಿಕ್ಷಣ ಸಂಸ್ಥೆಗಳ ನಡೆಸುವ ಮುಖಾಂತರ ಕನ್ನಡದ ಜಾಗೃತಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ಶ್ರೀಯುತ ಪ್ರೋ: ಬಾಬುರಾವ ವಡ್ಡೆಯವರು ತಾಲ್ಲೂಕಾ ಕಸಾಪ ಅಧ್ಯಕ್ಷರಾಗಿದ್ದಾಗ ಕನ್ನಡ ಭವನಕ್ಕೆ ನಿವೇಶನ ಪಡೆದುಕೊಂಡಿದ್ದಾರೆ. ಈ ನಿವೇಶನದಲ್ಲಿ ಈವಾಗ ಭವ್ಯವಾದ ಕನ್ನಡ ಭವನ ನಿರ್ಮಿಸಲು ಶಾಸಕರಾದ ಶ್ರೀ ಗುಂಡಪ್ಪಾ ವಕೀಲರು ಪ್ರಯತ್ನಿಸಿರುವುದು ಕನ್ನಡಾಭಿಮಾನಿಗಳಿಗೆ ಸಂತೋಷವನ್ನುಂಟು ಮಾಡಿದೆ. ಇತ್ತಿತ್ತಲಾಗಿ ಪ್ರೋ: ಬಸವರಾಜ ಸ್ವಾಮಿ ತಾಲ್ಲೂಕು ಅಧ್ಯಕ್ಷರಾಗಿ ಪ್ರೋ: ಸಿದ್ರಾಮಪ್ಪಾ

ಮಾಸಿಮಾಡೆಯವರು ಜಿಲ್ಲಾಧ್ಯಕ್ಷರಾದ ಮೇಲೆ ತಾಲ್ಲೂಕು ಪಂಚಾಯತ ಸಮಿತಿಯಲ್ಲಿ ಕನ್ನಡ ಚಟುವಟಿಕೆಗಳ ಉದ್ಘಾಟನಾ ಸಮಾರಂಭ ಬಹಳ ಅದ್ದೂರಿಯಾಗಿ ನಡೆಯಿತು ಇದರಲ್ಲಿ ಶಾಸಕ ಗುಂಡಪ್ಪಾ ಬಿರಾದಾರ ಪೂಜ್ಯ ಬಸವಲಿಂಗ ಪಟ್ಟದೇವರು ತಾಲ್ಲೂಕಿನ ಎಲ್ಲಾ ಹಿರಿಯ ಅಧಿಕಾರಿಗಳ ಕಸಾಪ ಪಧಾಧೀಕಾರಿಗಳು ಪಾಲ್ಗೊಂಡಿದ್ದರು.

ಹೆಡಗಾಪೂರ ಹನುಮಾನ ಮಂದಿರ ಉದ್ಘಾಟನಾ ಸಮಾರಂಭ ಸಂದರ್ಭದಲ್ಲಿ ವಲಯ ಮಟ್ಟದ ಕನ್ನಡ ಸಾಹಿತ್ಯ ಪರಿಷತ್ತಿನ ಕಛೇರಿ ಉದ್ಘಾಟಿಸಿ ಈ ಭಾಗದ ಕನ್ನಡ ಚಟುವಟಿಕೆಗಳಿಗೆ ಸ್ಪಂದಿಸಿದ್ದಾರೆ. ಇದೊಂದು ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದಂತೆ ಅದ್ದೂರಿಯಾಗಿ ನಡೆಸಿದ್ದಾರೆ. ಈ ಗ್ರಾಮದ ಕಸಾಪ ಘಟಕಕ್ಕೆ ವೈಜಿನಾಥ ಮಾನಶೆಟ್ಟೆಯವರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ. ಕಮಲನಗರದಲ್ಲಿ ವಲಯ ಮಟ್ಟದ ಕಸಾಪ ಘಟಕ ಉದ್ಘಾಟನಾ ಸಮಾರಂಭ ನಡೆಯಿತು. ಈ ಸಮಾರಂಭದಲ್ಲಿ ಜಿಲ್ಲಾ ಕಸಾಪ ಪದಾಧಿಕಾರಿಗಳಾದ ಪ್ರೋ: ಸಿದ್ರಾಮಪ್ಪಾ ಮಾಸಿಮಾಡೆ, ನಾಗಶೆಟ್ಟಿ ಧರ್ಮಪೂರ, ಗುರುನಾಥ ಗಡ್ಡೆ, ಪ್ರೋ: ಧನರಾಜ ಘುಲಾರೆ, ಪ್ರೋ: ಅಂಕುಶ ಢೋಲೆ, ಪ್ರೋ: ಎಸ್.ಎನ್.ದೇವರಕಲ್, ಪ್ರೋ: ಬಸವರಾಜ ಸ್ವಾಮಿ, ಬಿ.ಎನ್.ಸೋಲಾಪೂರೆ, ಪ್ರಾಚಾರ್ಯ ಎಸ್.ಎಸ್.ಟೋಪಾರೆ, ನಾಗಶೆಟ್ಟಿ, ಶಿವಣಕರ, ಶ್ರೀಮತಿ ನೀಲಾ ಪಾಟೀಲ, ಪ್ರೋ: ಎಸ್.ಬಿ.ಜಾಂತೆ ಮುಂತಾದವರು ಭಾಗವಹಿಸಿದ್ದರು. ಶ್ರೀ ಎನ್.ಕೆ.ಪಾಟಿಲ ಇವರನ್ನು ಕಮಲನಗರ ವಲಯ ಅಧ್ಯಕ್ಷರಾಗಿ ನೇಮಕಮಾಡಿ ಅಧಿಕಾರ ಹಸ್ತಾಂತರಿಸಲಾಯಿತು. ತಾಲ್ಲೂಕಿನ ಅಧ್ಯಕ್ಷ ಪ್ರೋ: ಬಸವರಾಜ ಸ್ವಾಮಿಯವರು ಶಾಲೆಗೊಂದು ಕಾರ್ಯಕ್ರಮ, ಪಂಚಾಯತಗೊಂದು ಕಾರ್ಯಕ್ರಮ, ಸಾಹಿತ್ಯ ಜೋತಿಕಾರ್ಯಕ್ರಮಗಳು ಆಡಳಿತದಲ್ಲಿ ಕನ್ನಡ ಜಾರಿ ಮುಂತಾದ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ತಾಲ್ಲೂಕಾದಾದ್ಯಂತ ಕನ್ನಡ ಬೆಳವಣಿಗೆಗೆ ಬಹಳಷ್ಟು ಶ್ರಮಿಸುತ್ತಿದ್ದಾರೆ.

***ಔರಾದ ತಾಲ್ಲೂಕು ಹಿಂದುಳಿಯಲು ಪ್ರಮುಖ ಕಾರಣಗಳು ಮತ್ತು ಪರಿಹಾರಗಳು:-***

ಸರಕಾರದ ಕೆಲಸಗಳು ಯೋಜನೆಗೆ ಬದ್ದವಾಗಿ ನಡೆಯದೆ ಇರುವುದು.

ಒಕ್ಕಲಿಗರ ಹುಟ್ಟುವಳಿಗೆ ಅನುಸಾರವಾಗಿ ಹತ್ತಿ ಬಟ್ಟೆ ಗಿರಣಿ ಸ್ಥಾಪಿಸದಿರುವುದು.

ಹೈನುಗಾರಿಕೆ ಉತ್ತೇಜನಕ್ಕಾಗಿ ಹಾಲಿನ ಡೈರಿನ ಸ್ಥಾಪಿಸದಿರುವುದು.

ಸಾರಿಗೆ ಸಂಪರ್ಕ ಉತ್ತಮಗೊಳಿಸದಿರುವುದು.

ನೀರಾವರಿ ಸೌಲಭ್ಯವಿಲ್ಲದೆ, ಮಳೆಯೇ ಆಧಾರವಾಗಿರುವುದು.

ರಾಜಧಾನಿಯಿಂದ ಬಹುದೂರವಿರುವುದು.

ಸಮಾಜ ಸುಧಾರಕರ ಕುಶಲ ರಾಜಕಾರಣಿಗಳ ಕೊರತೆ ಇರುವುದು.

ಹೀಗೆ ಹಲವಾರು ಕಾರಣಗಳಿದ್ದು, ಕರ್ನಾಟದಲ್ಲಿಯೆ ಅತಿ ಹಿಂದುಳಿದ ತಾಲ್ಲೂಕುವಾಗಿದೆ. ಅದರೆ ಘನ ಸರಕಾರ ನುರಿತ ಪ್ರಜ್ಞಾವಂತ ನಾಯಕರು, ಹಾಗೂ ಸಮಸ್ತ ತಾಲ್ಲೂಕಿನ ಪ್ರಜೆಗಳು ಎಚ್ಚೆತ್ತು ಲಕ್ಷ್ಯ ವಹಿಸಿದರೆ, ಪ್ರಗತಿ ಪಥದಲ್ಲಿ ಏಳಿಗೆಯಲ್ಲಿ ಮುನ್ನಡೆದರೆ ತಾಲ್ಲೂಕು ಸಮೃದ್ಧಿಯಾಗಿ ಮುಕುಟಮಣಿ

ಎನಿಸಿರುವ ಕಿರಿಟಕ್ಕೆ ಕುಂದನ ಕೂಡಿಸಿದಂತಾಗುತ್ತದೆ. ಜ್ಯೋತಿ ಬೆಳಗುತ್ತದೆ. ಜೀವನ ಸುಖವಾಗುತ್ತದೆ. ಎಂಬುದರಲ್ಲಿ ಸಂಶಯವಿಲ್ಲ.

***ಔರಾದ ತಾಲ್ಲೂಕು ಸಾಹಿತಿಗಳು:-***

ಅನೀಲಕುಮಾರ ಪಾಟೀಲ, ಕಾಶೀನಾಥ ಮಹಿಮಾಕರ, ಗುರುನಾಥ ಗಡ್ಡೆ, ಚೆನ್ನಯ್ಯಾ ಹಿರೇಮಠ, ಪ್ರಭುಶೆಟ್ಟಿ ಸೈನಿಕಾರ, ಬಾಬುರಾವ ವಡ್ಡೆ, ಬಾಬು ಸೋಲಾಪೂರೆ (ಬಾಲಕ), ರಾಜೇಂದ್ರ ಯರನಳ್ಳೆ (ಡಾ:) (ಕುಯವೀರಾ), ಶಿವಕುಮರಾ ಶಿವಣಕರ, ಶಿವಕುಮಾರ ಕಟ್ಟೆ, ಶಿವರಾಜ ಪಾಟೀಲ, ಸಂಗಮೇಶ, ಶಿದ್ರಾಮೇಶ್ವರ ಶರಣರು, ಶ್ರೀ ಸಿದ್ರಾಮಪ್ಪಾ ಮಾಸಿಮಾಡೆ (ಪ್ರೋ), ಹಣಮಂತಪ್ಪಾ ವಲ್ಲೇಪೂರೆ (ಹಂಸಕವಿ), ಶಿವರಾಜ ಜುಲಾಂಡೆ.

***ಔರಾದ ತಾಲ್ಲೂಕು ಸ್ಥೂಲ ನೋಟ:-***

| | | |
|---|---|---|
| 1. | ಒಟ್ಟು ಹಳ್ಳಿಗಳು | 149 |
| 2. | ವಸತಿ ಹಳ್ಳಿಗಳು | 148 |
| 3. | ತಾಂಡಾಗಳು/ವಾಡಿಗಳು/ಉಪಹಳ್ಳಿಗಳು | 138 |
| 4. | ಜನ ರಹಿತ ಹಳ್ಳಿಗಳು | 1 |
| 5 | ಕಂದಾಯ ನಿರೀಕ್ಷಣಾಧಿಕಾರಿಗಳ ಕೇಂದ್ರಗಳು | 6 |
| 6 | ಗ್ರಾಮ ಲೆಕ್ಕಿಗರ ಕೇಂದ್ರಗಳು | 59 |
| 7 | ನಾಡ ಕಛೇರಿ ಕಾರ್ಯಲಯಗಳು | 2 |
| 8 | ಗ್ರಾಮ ಪಂಚಾಯತ ಕಾರ್ಯಲಯ | 38 |
| 9 | ಟೌನ್ ಪಂಚಾಯತ | 1 |
| 10 | ತಾಲ್ಲೂಕಿನ ಒಟ್ಟು ಜನಸಂಖ್ಯಾ | 210040 |
| | ಗಂಡಸರು | 106926 |
| | ಹೆಂಗಸರು | 103114 |
| 11. | ಪಟ್ಟಣದ ಜನಸಂಖ್ಯೆ(ಇಲ್ಲ) | --. |
| 12. | ಗ್ರಾಮೀಣ ಜನಸಂಖ್ಯೆ | 210040 |
| | 1. ಪರಿಶಿಷ್ಟ ಜಾತಿ | 56346 |
| | 2. ಪರಿಶಿಷ್ಟ ಪಂಗಡ | 12457 |
| | 3. ಇತರರು | 141237 |

| | | |
|---|---|---|
| 13 | ದನಕರುಗಳ ಸಂಖ್ಯೆ | 141237 |
| 14. | ಭೌಗೋಳಿಕ ಕ್ಷೇತ್ರ | 302541 ಎಕರೆ |
| 15. | ಅರಣ್ಯ | 5710 ಎಕರೆಗಳು |
| 16. | ವ್ಯವಸಾಯ ಬಿಟ್ಟು ಇತರೆ ಉದ್ದೇಶಗಳಿಗೆ ಉಪಯೋಗಿಸಿದ ಪ್ರದೇಶ | 6424 ಎಕರೆ |
| 17. | ಬಂಜರು ಮತ್ತು ವ್ಯವಸಾಯ ಮಾಡಲು ಸಾಧ್ಯವಿಲ್ಲದ ಪ್ರದೇಶ | 8090 ಎಕರೆ |
| 18. | ಸಾಗುವಳಿಗೆ ಯೋಗ್ಯವಾದ ಬಂಜರು ಪ್ರದೇಶ | 8431 ಎಕರೆ |
| 19. | ಖಾಯಂ ಗೋಮಾಳ ಮತ್ತು ಇತರ ಹುಲ್ಲುಗಾವಲು | 41621 ಎಕರೆ |
| 20. | ಬಿತ್ತನೆಯಾಗಿರುವ ಪ್ರದೇಶದಲ್ಲಿ ವಿವಿಧ ವೃಕ್ಷ ತೋಪುಗಳ ಜಮೀನು | 6751 ಎಕರೆ |
| 21. | ಚಾಲ್ತಿ ಸಾಗುವಳಿಯಲ್ಲಿದ್ದ ಬೀಳು ಬಿಟ್ಟ ಜಮೀನು | 19699 ಎಕರೆ |
| 22. | ಇತರೆ ಬೀಳು ಜಮೀನು | 16210 ಎಕರೆ |
| 23. | ಬಿತ್ತನೆಯಾಗಿರುವ ನಿವ್ವಳ ಪ್ರದೇಶ | 227064 ಎಕರೆ |
| 24. | ಮುಂಗಾರು ಬಿತ್ತನೆಯಾಗಿರುವ ಕ್ಷೇತ್ರ | 207624 ಎಕರೆ |
| 25. | ಹಿಂಗಾರು ಬಿತ್ತನೆಯಾಗಿರುವ ಕ್ಷೇತ್ರ | 60257 ಎಕರೆ |
| 26. | ಬೇಸಿಗೆ ಬಿತ್ತನೆಯಾಗಿರುವ ಕ್ಷೇತ್ರ | 100 ಎಕರೆ |
| 27. | ಬೆಳೆ ಬಿತ್ತನೆಯಾಗಿರುವ ಕ್ಷೇತ್ರ | 40957 ಎಕರೆ |
| 28. | ವಾಡಿಕೆ ಮಳೆ ಪ್ರಮಾಣ | 840.1 ಮಿ.ಮಿ |
| 29. | ಮಳೆ ಮಾಪನ ಕೇಂದ್ರಗಳು | 06 |
| 30. | ಸರಕಾರಿ ಪದವಿ ಮಹಾವಿದ್ಯಾಲಯ | 02 |
| 31. | ಕಿರಿಯ ಮಹಾವಿದ್ಯಾಲಯ | 06 |
| 32. | ಪದವಿ ಮಹಾವಿದ್ಯಾಲಯ | 02 |
| 33. | ಪ್ರೌಢ ಶಾಲೆಗಳು | 32 |
| 34. | ಪ್ರಾಥಮಿಕ ಶಾಲೆಗಳು | 194 |
| 35. | ಪಾಲಿಟೆಕ್ನಿಕಗಳು | 02 |

| | | |
|---|---|---|
| 36. | ಸರಕಾರಿ ಆಸ್ಪತ್ರೆಗಳು | 01 |
| 37. | ಪ್ರಾಥಮಿಕ ಆರೋಗ್ಯ ಕೇಂದ್ರಗಳು | 07 |
| 38. | ಪಶು ಚಿಕಿತ್ಸಾಲಯಗಳು | 03 |
| 39. | ಪ್ರಾಥಮಿಕ ಪಶು ಚಿಕಿತ್ಸಾಲಯಗಳು | 11 |

## ಅಧ್ಯಯ – ೩

## ಪ್ರಾಥಮಿಕ ಶಿಕ್ಷಣದ ನೀತಿ, ನಿರೂಪಣೆಯ ಸ್ವರೂಪ, ಗುರಿ, ಪ್ರಾಮುಖ್ಯತೆ, ಅಗತ್ಯ ಹಾಗೂ ಆಶಯಗಳು

ಭಾರತದಲ್ಲಿ ಶಿಕ್ಷಣ ನೀತಿ ಸವಾಲು ಸಾಧ್ಯತೆ ಹಮಿದ ಮಂಜೇಶ್ವರ ಬರೆದ ದಾರಿ ಬುತ್ತಿ ಎಂಬ ಗ್ರಂಥದಲ್ಲಿ ಹಾಗೂ ಸಿ.ವಿ.ಮ್ಯಾಗೇರಿ ಅವರು ಬರೆದ ಶೈಕ್ಷಣಿಕ ನಿರ್ವಹಣೆ ಎಂಬ ಗ್ರಂಥದಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ಕುರಿತು ಅವರು ಬರೆದ ಕೃತಿಯ ಪ್ರಕಾರ:

**1) ರಾಷ್ಟ್ರೀಯ ಶಿಕ್ಷಣ ನೀತಿ**

1968ರಲ್ಲಿ ಶಿಕ್ಷಣ ಆಯೋಗದ ವರದಿಯ ಮೇಲಿನ ಒಂದು ನಿರ್ಣಯದ ಸ್ವರೂಪದಲ್ಲಿ ಭಾರತ ಸರಕಾರವು ರಾಷ್ಟ್ರೀಯ ಶೈಕ್ಷಣಿಕ ನೀತಿಯ ಮೊದಲ ಹೇಳಿಕೆಯನ್ನು ಪ್ರಕಟಿಸಿತು ಶಿಕ್ಷಣದ ರಾಷ್ಟ್ರೀಯ ಸ್ವರೂಪ ಮತ್ತು ಎಲ್ಲಾ ಹಂತಗಳಲ್ಲಿ ಅದರ ಸರ್ವತೋಮುಖವಾದ ಅಭಿವೃದ್ಧಿಯ ಸಾರ್ವತ್ರಿಕ ನೀತಿಗಳು ಹಾಗೂ ಧೋರಣೆಗಳ ಬಗ್ಗೆ ಸರಕಾರಕ್ಕೆ ಸಲಹೆ ನೀಡಲು ಈ ಆಯೋಗವನ್ನು ರಚಿಸಲಾಗಿತ್ತು. ಇದನ್ನೂ ಅನುಸರಿಸಿ 1970ರ ದಶಕದಲ್ಲಿ ಇಡೀ ದೇಶದಲ್ಲಿ ಈ ರಾಷ್ಟ್ರೀಯ ನೀತಿಯಲ್ಲಿ ಕಂಡರಿಸಿದಂತೆ 10+2+3 ರ ಒಂದು ಸಾಮಾನ್ಯ ರಚನೆಯನ್ನು ಅಂಗೀಕರಿಸಲಾಯಿತು. ಇದರ ಜೊತೆಗೆ ಸಾರ್ವತ್ರಿಕ ಶಿಕ್ಷಣಕ್ಕೆ ಹತ್ತನೆಯ ತರಗತಿಯವರೆಗೆ ಹಾಗೂ ಉನ್ನತ ಮಾಧ್ಯಮಿಕ ಹಂತದ ವರೆಗೆ ಆಧುನಿಕರಣದ ಮತ್ತು ಶಾಲಾ ಪಠ್ಯ ವಿಷಯವನ್ನು ಸುಧಾರಿಸುವ ಪ್ರಕ್ರಿಯೆ ಮಾಡಲಾಯಿತು. ಎನ್.ಸಿ.ಇ.ಆರ್.ಟಿ.ಯು 1975ರಲ್ಲಿ ಸಿದ್ದಪಡಿಸಿದ ಹತ್ತು ವರ್ಷದ ಶಾಲಾ ಶಿಕ್ಷಣದ ಪಠ್ಯ ವಿಷಯ ಒಂದು ಚೌಕಟ್ಟು ಮತು ಅನಂತರ ಉನ್ನತ ಮಾಧ್ಯಮಿಕ ಶಿಕ್ಷಣದ ಒಂದು ಚೌಕಟ್ಟು ಹಾಗೂ ಈ ಚೌಕಟ್ಟುಗಳ ಆಧಾರದಲ್ಲಿ ವಿವಿಧ ವಿಷಯಗಳ ಹೊಸ ಪಾಠ ಕ್ರಮಗಳು ಶಾಲಾ ಪಾಠಕ್ರಮದ ಆಧುನಿಕರ ಮತ್ತು ಸುದಾರಣೆಗೆ ಅನುವು ಮಾಡಿಕೊಟ್ಟವು ಇವು 1968ರ ಧೋರಣೆ ಹೇಳಿದ ಶಿಕ್ಷಣದ ರಾಷ್ಟ್ರೀಯ ಸ್ವರೂಪವನ್ನು ಸ್ಥಾಪಿಸುವ ಪ್ರಕ್ರಿಯೆಯಲ್ಲಿ ಮೊದಲ ಹೆಜ್ಜೆಗಳೆಂದು ಕಾಣಬಹುದು. 1968ರ ಈ ಹೇಳಿಕೆಗಿಂತ ಹೆಚ್ಚು ವಿಸ್ತೃತವಾದ ಮತ್ತು ಸಮಗ್ರವಾದ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಅಂಗಿಕರಿಸಿತು.

1986ರಲ್ಲಿ ಜಾರಿಗೆ ಬಂದ ರಾಷ್ಟ್ರೀಯ ಶಿಕ್ಷಣ ನೀತಿ ಭಾರತೀಯ ಶಿಕ್ಷಣಕ್ಕೆ ಒಂದು ಸ್ಪಷ್ಟ ದಿಕ್ಸೂಚಿಯನ್ನು ಒದಗಿಸಿದೆ ಎಂದರೆ ತಪ್ಪಾಗಲಾರದು. ಇದು ಭಾರತೀಯ ಶಿಕ್ಷಣ ಹೇಗಿರಬೇಕು, ಎಲ್ಲಾ ಮಕ್ಕಳಿಗೂ ಸೂಕ್ತವಾದ ಶಿಕ್ಷಣ ಲಭ್ಯವಾಗಬೇಕಾದರೆ ಏನು ಮಾಡಬೇಕೆಂಬುದನ್ನು ಬಹಳ ಸ್ಪಷ್ಟ ಮಾತುಗಳಲ್ಲಿ ಹೇಳಿದೆ. ಹಾಗೆಯೇ ಶಿಕ್ಷಕರ ಪಾತ್ರವನ್ನೂ ಸ್ಪಷ್ಟಪಡಿಸಿದೆ. ಶಿಕ್ಷಕರು ಎಂಬ ಪ್ರತ್ಯೇಕ ಅಧ್ಯಯದಲ್ಲಿ (Part IX – The Teacher) ಶಿಕ್ಷಕರ ಸ್ಥಿತಿಗತಿ ಮತ್ತು ಶಿಕ್ಷಕರ ಅಭಿವೃದ್ಧಿ ಬಗೆಗೆ ವಿವರವಾಗಿ ಹೇಳಿದೆ.

ಅದರಂತೆ ಕೆಲವು ಮುಖ್ಯಾಂಶಗಳು ಹೀಗಿವೆ:

1) ಶಿಕ್ಷಕರ ಸ್ಥಿತಿಗತಿ ಒಂದು ಸಮಾಜದ ಸಮಾಜೋ ಸಾಂಸ್ಕೃತಿಕ ಸಂದರ್ಭವನ್ನು ಪ್ರತಿಬಿಂಬಿಸುತ್ತದೆ. ಸರಕಾರ ಮತ್ತು ಸಮುದಾಯವು, ಶಿಕ್ಷಕರು ರಚನಾತ್ಮಕ ಮತ್ತು ಕ್ರಿಯಾತ್ಮಕ ನಿಟ್ಟಿನಲ್ಲಿ ಮುಂದುವರಿಯಲು, ಸಹಕಾರ, ಪ್ರೇರಣೆ ಮತ್ತು ಸ್ಫೂರ್ತಿ ನೀಡಬೇಕಾಗಿದೆ. ಅನ್ವೇಷಣೆಗೆ, ಸಮುದಾಯದ ಅಗತ್ಯ ಮತ್ತು ಸಾಮರ್ಥ್ಯಕ್ಕೆ ತಕ್ಕ ಚಟುವಟಿಕೆ ಮತ್ತು ಸಂವಹನ ವಿಧಾನಗಳನ್ನು ಕಂಡುಕೊಳ್ಳಲು ಶಿಕ್ಷಕರಿಗೆ ಸ್ವತಂತ್ರವಿರಬೇಕು.

2) ಅರ್ಹತೆ, ಕಾರ್ಯದಕ್ಷತೆ, ಕ್ರಿಯಾತ್ಮಕತೆ ಆಧಾರದಲ್ಲಿ ಶಿಕ್ಷಕರನ್ನು ನೇಮಕ ಮಾಡಲು ನೇಮಕ ವಿಧಾನಗಳನ್ನು ಮರುಸಂಯೋಜಿಸಬೇಕು. ಶಿಕ್ಷಕರ ಸಾಮಾಜಿಕ ಮತ್ತು ವೃತ್ತಿ ಜವಾಬ್ದಾರಿ ಹಾಗೂ ಪ್ರತಿಭಾವಂತರನ್ನು ಆಕರ್ಷಿಸಲು ಅನುಗುಣವಾದ ರೀತಿಯಲ್ಲಿ ವೇತನ ಮತ್ತು ಸೌಲಭ್ಯಗಳನ್ನು ನೀಡಬೇಕು.

**ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು.**

ತರಗತಿಯಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ವ್ಯವಹರಿಸುವ ರೀತಿ ಅತ್ಯಂತ ಪ್ರಮುಖವಾದುದು, ಏಕೆಂದರೆ ಯಾರ ಜ್ಞಾನ ಶಾಲೆಗೆ ನೇರವಾಗಿ ಸಂಬಂಧಿಸಿದೆ ಮತ್ತು ಯಾರ ಧೋರಣೆ ಅದನ್ನು ರೂಪಿಸಿದೆ ಎಂಬುದರ ನಿಷ್ಕರ್ಷೆ ಆಗುವುದು ಇದರಿಂದಲೇ. ಹಿರಿಯರು ಕೇವಲ ಸಮಸ್ಯೆಗಳಿಗೆ ಉತ್ತರ ಹುಡುಕಿ ನೀಡಲು ವಿದ್ಯಾರ್ಥಿಗಳು ಅತಿ ಚಿಕ್ಕ ಮಕ್ಕಳಲ್ಲ. ಅವರು ಸನ್ನಿವೇಶಗಳನ್ನು ಮತ್ತು ಅಗತ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವ ವಿಮರ್ಶಾತ್ಮಕ ದೃಷ್ಟಿಯುಳ್ಳ ಸೂಕ್ಷ್ಮಗ್ರಾಹಿಗಳು. ಅವರ ಶಿಕ್ಷಣದ ಬಗೆಗೆ ಮತ್ತು ಅವರ ಭವಿಷ್ಯದ ಅವಕಾಶಗಳ ಬಗ್ಗೆ ಚರ್ಚೆಗಳಲ್ಲಿ ಮತ್ತು ಸಮಸ್ಯೆ ಬಿಡಿಸುವ ಪ್ರಕ್ರಿಯೆಗಳಲ್ಲಿ ಅವರು ಭಾಗಿಗಳಾಗಬೇಕು. ಆದುದರಿಂದ ತಮ್ಮ ಅನುಭವಗಳು ಮತ್ತು ಧೋರಣೆಗಳು ಅತಿ ಮುಖ್ಯ ಎಂಬುದರ ಬಗ್ಗೆ ಅವರು ಜಾಗೃತರಾಗಬೇಕು. ಅವರು ತಮ್ಮ ಚಿಂತನೆಗೆ ಮತ್ತು ಸ್ವತಂತ್ರ ವಿವೇಚನೆಗೆ ಅಗತ್ಯವಾದ ಮಾನಸಿಕ ಕೌಶಲಗಳನ್ನು ಬೆಳೆಸಿಕೊಳ್ಳಲು ಪ್ರೋತ್ಸಾಹಿಸಬೇಕು. ಅಂತೆಯೇ ಭಿನ್ನಮತವನ್ನು ಸ್ಪಷ್ಟಪಡಿಸುವ ಧೈರ್ಯವೂ ಬೇಕು, ಕಲಿಕಾ ಜ್ಞಾನ ಮತ್ತು ಜ್ಞಾನದ ಅಡಿಪಾಯ–ಮತ್ತು ಏನೇನನ್ನು ಅವರು ಶಾಲೆಯಿಂದ ಹೊರಗೆ ಒಯ್ಯುತ್ತಾರೋ ಅವೆಲ್ಲ ಕಲಿಕೆಯನ್ನು ವೃದ್ಧಿಸುತ್ತವೆ. ಬಡತನದ ಹಿನ್ನೆಲೆಯಿಂದ ಬಂದ ಮಕ್ಕಳ ವಿಶೇಷವಾಗಿ ಹೆಣ್ಣುಮಕ್ಕಳ ಶಿಕ್ಷಣ ಕುರಿತಂತೆ ಇದು ಅತ್ಯಂತ ಮಹತ್ವದ ವಿಷಯ. ಏಕೆಂದರೆ ಅವರು ಬದುಕುವ ಪರಿಸರ ಮತ್ತು ವಾಸ್ತವಗಳು ಶಾಲೆಯಲ್ಲಿ ಪ್ರತಿನಿಧಿಸಲ್ಪಡುವುದಿಲ್ಲ.

**ಮಕ್ಕಳ ಹಕ್ಕುಗಳಲ್ಲಿ ಶಿಕ್ಷಣಕ್ಕೆ ಒತ್ತು.**

ಈ ಸಮಾಜದಲ್ಲಿನ ಯಾವುದೇ ಅಹಿತಕರ ಘಟನೆ ನಡೆದರೂ ಅದರ ನೇರ ಮತ್ತು ತೀವ್ರತರವಾದ ಪರಿಣಾಮ ಬೀಳುವುದು ಮಕ್ಕಳ ಮೇಲೆ. ಇದು ಎಳೆಯ ಮನಸ್ಸುಗಳ ಮೇಲೆ ದುಷ್ಪರಿಣಾಮ ಬೀರುತ್ತದೆ. ಜತೆಗೆ ಮಕ್ಕಳ ಮೇಲೆ ಸತತವಾಗಿ ಒಂದಲ್ಲ ಒಂದು ರೀತಿಯ ದೌರ್ಜನ್ಯಗಳು ನಡೆಯುತ್ತಿರುತ್ತವೆ. ಇದೆಲ್ಲವನ್ನು ಮನಗಂಡು ವಿಶ್ವಸಂಸ್ಥೆ ಮಕ್ಕಳ ಹಕ್ಕುಗಳನ್ನು ಕಾಪಾಡುವ ನಿಟ್ಟಿನಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಘೋಷಿಸಿತು. ಇದನ್ನು ಭಾರತವೂ ಸೇರಿದಂತೆ ಜಗತ್ತಿನ ಹೆಚ್ಚಿನ ಎಲ್ಲಾ ದೇಶಗಳೂ ಒಪ್ಪಿಕೊಂಡು

ಬದ್ಧತೆಯನ್ನು ಪ್ರಕಟಿಸಿ ಸಹಿಮಾಡಿವೆ. ಮಕ್ಕಳ ಹಕ್ಕುಗಳ ಒಡಂಬಡಿಕೆಯ ಕೆಲವು ಪ್ರಮುಖ ಅಂಶಗಳು ಹೀಗಿವೆ.

* ಯಾವುದೇ ಮಗುವನ್ನು ಇತರರಿಂದ ಬೇರೆಯಾಗಿ ಪರಿಗಣಿಸಬಾರದು. ಮಗು ಮತ್ತು ಮಗುವಿನ ತಂದೆ-ತಾಯಿ, ಪೋಷಕರ ಜಾತಿ, ವರ್ಣ, ಲಿಂಗ, ಭಾಷೆ, ಪ್ರದೇಶ, ರಾಜಕೀಯ ನಿಲುವು, ಅಂಗವೈಕಲ್ಯತೆ, ಹುಟ್ಟು, ನಗರ, ಗ್ರಾಮ ಬುಡಕಟ್ಟು, ಆದಿವಾಸಿ ಹಿನ್ನಲೆಯಲ್ಲಿ ಆ ಮಗುವನ್ನು ಇತರ ಮಕ್ಕಳಿಂದ ಬೇರೆಯಾಗಿ ನೋಡಬಾರದು. ಎಲ್ಲ ಮಕ್ಕಳಿಗೂ ಒಂದೇ ಭಾವನೆಯಿಂದ ಬೆರೆಯಲು ಅವಕಾಶ ನೀಡಬೇಕು.

* ತಂದೆ-ತಾಯಿಯರ ಅಥವಾ ಪೋಷಕರ ಸ್ಥಾನಮಾನ, ಸಿದ್ದಾಂತ ನಿಲುವುಗಳು ಅಥವಾ ನಂಬಿಕೆಗಳು ಏನೇ ಇದ್ದರೂ ಅವುಗಳ ಆಧಾರದ ಮೇಲೆ ಮಕ್ಕಳಿಗೆ ಶಿಕ್ಷೆ ಅಥವಾ ತಾರತಮ್ಯ ಮಾಡುವಂತಿಲ್ಲ. ಹಾಗೇನಾದರೂ ಆದಲ್ಲಿ ಸರ್ಕಾರವು ಸೂಕ್ತಕ್ರಮ ಕೈಗೊಳ್ಳಬೇಕು.

* ಪ್ರತಿಯೊಂದು ಮಗುವಿಗೂ ಶಿಕ್ಷಣ ಪಡೆಯುವ ಹಕ್ಕು ಇದೆ. ಸರಕಾರವು ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಖಾತರಿಪಡಿಸಬೇಕು.

* ಶಾಲೆಗಳಲ್ಲಿನ ಶಿಸ್ತಿನ ನೆಪದಲ್ಲಿ ಮಕ್ಕಳ ಗೌರವಕ್ಕೆ ರಕ್ಷಣೆಗೆ ಚ್ಯುತಿ ಬಾರದಂತೆ ನೋಡಿಕೊಳ್ಳುವುದು, ಆ ಕುರಿತು ಕ್ರಮ ಕೈಗೊಳ್ಳುವುದು ಸರ್ಕಾರಗಳ ಜವಾಬ್ದಾರಿಯಾಗಿದೆ.

:- ಮಕ್ಕಳಿಗೆ ನೀಡುವ ಶಿಕ್ಷಣವು ಅವನ/ಅವಳ ವ್ಯಕ್ತಿತವನ್ನು ಬೆಳೆಸುವಂತಿರಬೇಕು.

:- ಮಾನವ ಹಕ್ಕು ಹಾಗೂ ಮೂಲ ಸ್ವಾತಂತ್ರ್ಯವನ್ನು ಗೌರವಿಸವಂತಿರಬೇಕು. ಅವರ ಹೆತ್ತವರನ್ನು ಗೌರವಿಸುವಂತಿರಬೇಕು. ಅವನ/ಅವಳ ಸಾಂಸ್ಕೃತಿಕ ಗುರುತಿಸುವಿಕೆಯನ್ನು, ಮಗುವಿನ ರಾಷ್ಟ್ರದ ರಾಷ್ಟ್ರೀಯ ಮೌಲ್ಯಗಳನ್ನು, ನೈಸರ್ಗಿಕ ಪರಿಸರವನ್ನು ಗೌರವಿಸುವಂತಿರಬೇಕು. ಮಗುವು ಮುಕ್ತ ಸಮಾಜದಲ್ಲಿ ಎಲ್ಲಾ ಜನರೊಡನೆ ಶಾಂತಿಯುತವಾದ ಮತ್ತು ಸ್ನೇಹಯುತವಾದ ಜವಾಬ್ದಾರಿಯುತ ಜೀವನನ್ನು ನಡೆಸಲು ಸಿದ್ಧಗೊಳಿಸುವಂತಿರಬೇಕು.

**ಬೋಧನೆ ಒಂದು ವೃತ್ತಿಯಾಗಿ.**

ಶಿಕ್ಷಕರು ಎಂದರೆ ಏನು? ಶಿಕ್ಷಕರು ಎಂದರೆ ಯಾರು ಎನ್ನುವುದುಕ್ಕಿಂತ ಭಿನ್ನವಾದ ಪ್ರಶ್ನೆ ಇದು. ಶಿಕ್ಷಕರು ಯಾರು ಎಂದರೆ ಉತ್ತರಿಸಬಹುದು. ಆದರೆ ಶಿಕ್ಷಕರು ಎಂದರೆ ಏನು ಎಂದು ಕೇಳಿದರೆ ತತ್‌ಕ್ಷಣಕ್ಕೆ ಉತ್ತರ ಲಭಿಸುವುದು ಕಷ್ಟ ಇಲ್ಲಿಯೇ ಶಿಕ್ಷಕರ ಸವಾಲು ಅಡಗಿರುವುದೂ ಕೂಡಾ. ಒಂದು ಸ್ವಸ್ಥ ಸಮಾಜದ ಹಿತ ಕಾಪಾಡಲು ಮುಂದೆ ಹೋಗಬೇಕಾದ ಸಮೂಹದ ಆಲೋಚನೆಗಳನ್ನು, ಸಾಮರ್ಥ್ಯವನ್ನು, ಚಿಂತನಾ ವಿಧಾನವನ್ನು ಒಂದು ಸೂಕ್ತ ಮತ್ತು ಆರೋಗ್ಯಕರ ರೀತಿಯಲ್ಲಿ ಸಂಯೋಜಿಸುವ ಗುರುತರ ಕೆಲಸ ಇದೆಯಲ್ಲ ಅದನ್ನು ಇದೇ ಎಂದು ಪಟ್ಟಿ ಮಾಡಲಾಗದ ಸ್ಥಿತಿಯೂ ನಮ್ಮ ಮುಂದಿದೆ. ಆದ್ದರಿಂದಲೇ ಶಿಕ್ಷಕರು ಅಥವಾ ಶಿಕ್ಷಣ ವೃತ್ತಿ ಅಂದರೆ ಏನು ಎಂಬುದನ್ನು ಮೊದಲು ಅರ್ಥ ಮಾಡಿಕೊಳ್ಳಬೇಕಾಗಿರುವುದು.

## 2) ಶೈಕ್ಷಣಿಕ ನಿರ್ವಹಣೆಯ ಮತ್ತು ಸ್ವರೂಪ

ಶೈಕ್ಷಣಿಕ ನಿರ್ವಹಣೆಯ ಸ್ವರೂಪವು ಇತರ ನಿರ್ವಹಣೆಗಳಂತೆಯೇ ಇದ್ದು ಅದರ ಸ್ವರೂಪ ಈ ಕೆಳಗಿನಂತಿದೆ.

1) ಸಾರ್ವತ್ರಿಕರಣವಾದುದಾಗಿದೆ
2) ವೃತ್ತಿ ಮತ್ತು ಕೌಶಲ್ಯಗಳನ್ನು ಹೊಂದಿದೆ.
3) ಸಾಮೂಹಿಕ ಕಾರ್ಯವಾಗಿದೆ.

**1) ಸಾರ್ವತ್ರಿಕರಣವಾದುದಾಗಿದೆ (Universal in nature)**

ಮಾನವನ ಪ್ರತಿಯೊಂದು ಕ್ಷೇತ್ರದ ಕಾರ್ಯವ್ಯಾಪ್ತಿಯ ನಿರ್ವಹಣೆಯನ್ನು ಹೊಂದಿದೆ. ಉದಾ: ಗೃಹ ನಿರ್ವಹಣೆ, ಉದ್ಯಮಗಳ ನಿರ್ವಹಣೆ, ಸಿಬ್ಬಂದಿ ನಿರ್ವಹಣೆ. ಆದರೆ ಶೈಕ್ಷಣಿಕ ನಿರ್ವಹಣೆಗೆ ವಿಶೇಷವಾದ ತರಬೇತಿ, ಕೌಶಲ್ಯಗಳು ಅಗತ್ಯವಾಗಿವೆ. ಏಕೆಂದರೆ ಇಲ್ಲಿ ಎಲ್ಲ ಕಾರ್ಯಗಳನ್ನು ಅರಿತುಕೊಂಡು ನಿರ್ವಹಿಸುವದು ಅಗತ್ಯವಾಗಿರುತ್ತದೆ. ಆದ್ದರಿಂದಲೇ ಶೈಕ್ಷಣಿಕ ನಿರ್ವಹಣೆಯು ಒಂದು ಕೌಶಲ್ಯವಾಗಿದ್ದು ಅದಕ್ಕೆ ವಿಶೇಷ ತರಬೇತಿಯು ಅವಶ್ಯಕವಾಗಿದೆ. ಈ ಕೌಶಲ್ಯಗಳ ವರ್ಗಾವಣೆಯು ಸಾಧ್ಯ, ಆದ್ದರಿಂದಲೇ ಇದು ಸಾರ್ವತ್ರಿಕವಾದುದಾಗಿದೆ.

**2) ವೃತ್ತಿ ಮತ್ತು ಕೌಶಲ್ಯಗಳನ್ನು ಹೊಂದಿದೆ.**

ಶೈಕ್ಷಣಿಕ ನಿರ್ವಹಣೆಯನ್ನು ನಿಭಾಯಿಸುವ ವ್ಯಕ್ತಿಯು ಜವಾಬ್ದಾರಿಯುತನೂ ಮತ್ತು ಆ ಜವಾಬ್ದಾರಿಯನ್ನು ಸರಿಯಾಗಿ ನೆರವೇರಿಸುವವನೂ ಆಗಿರಬೇಕಾಗುತ್ತದೆ. ಈ ಎಲ್ಲವೂ ಒಂದು ವೃತ್ತಿಯ ಹೊಣೆಯಾಗಿದೆ. ಈ ಹೊಣೆಯನ್ನು ವಹಿಸಿಕೊಳ್ಳುವುದು ಒಂದು ವೃತ್ತಿಯಾಗಿ ಮಾರ್ಪಟ್ಟಿದೆ. ಸಂಸ್ಥೆಯ ಉದ್ದೇಶಗಳನ್ನು ತಿಳಿದುಕೊಂಡು, ಲಭ್ಯವಿರುವ ಮಾನವ ಮತ್ತು ಭೌತಿಕ ಸಂಪನ್ಮೂಲಗಳನ್ನು ಉಪಯೋಗಿಸಿ ಕೊಳ್ಳುವುದು ಒಂದು ಕೌಶಲ್ಯವೆ ಆಗಿದೆ. ಆದ್ದರಿಂದ ಶೈಕ್ಷಣಿಕ ನಿರ್ವಹಣೆಯು ವೃತ್ತಿ ಮತ್ತು ಕೌಶಲ್ಯಗಳನ್ನು ಹೊಂದಿದೆ.

**3) ಸಾಮೂಹಿಕ ಕಾರ್ಯವಾಗಿದೆ.**

ಶೈಕ್ಷಣಿಕ ನಿರ್ವಹಣೆಯು ಸಾಮೂಹಿಕ ಕಾರ್ಯವಾಗಿದ್ದು, ಈ ನಿರ್ವಹಣೆಯ ಯಶಸ್ಸು ಕೇವಲ ಒಬ್ಬ ವ್ಯಕ್ತಿಗೆ ಸೀಮಿತವಾಗಿರದೇ ಈ ವ್ಯವಸ್ಥೆಯಲ್ಲಿ ಅಡಕವಾಗಿರುವ ಪ್ರತಿಯೊಬ್ಬ ವ್ಯಕ್ತಿಗೂ ಸೇರುತ್ತದೆ. ಶೈಕ್ಷಣಿಕ ಕಾರ್ಯ ನಿರ್ವಹಣೆಯು ಅನೇಕ ಉಪವ್ಯವಸ್ಥೆಗಳನ್ನು ಹೊಂದಿದ್ದು ಈ ಉಪವ್ಯವಸ್ಥೆಗಳನ್ನು ಅನೇಕ ವ್ಯಕ್ತಿಗಳು ನಿರ್ವಹಿಸುತ್ತಾರೆ. ಕಾರ್ಯವು ಸರಪಳಿಯಂತಿದ್ದು ಪ್ರತಿಯೊಂದು ಕೊಂಡಿಗಳು ಹೇಗೆ ಭದ್ರತೆಗೆ ಅವಶ್ಯವೋ ಅದೇ ರೀತಿ ಪ್ರತಿಕಾರ್ಯ ಮಾಡುವವರ ಮೇಲೆ ನಿರ್ವಾಹಕನು ಮೇಲ್ವಿಚಾರಕನಾಗಿದ್ದ ಗುರಿಯನ್ನು ಸಾಧಿಸಲು ಪ್ರಯತ್ನಿಸಬೇಕು. ಇದಕ್ಕಾಗಿ ಉಳಿದವರ ಸಹಾಯ ಸಹಕಾರ ಅಗತ್ಯವಾಗಿದೆ. ಆದ್ದರಿಂದ ಶೈಕ್ಷಣಿಕ ನಿರ್ವಹಣೆಯ ಒಬ್ಬ ವ್ಯಕ್ತಿಯ ಕಾರ್ಯವಾಗಿರದೆ ಅದು ತಂಡದ ಅಥವಾ ಸಾಮೂಹಿಕ ಕಾರ್ಯವಾಗಿದೆ.

### 3) ಶೈಕ್ಷಣಿಕ ನಿರ್ವಹಣೆಯ ಗುರಿ (ಉದ್ದೇಶ):

ಶೈಕ್ಷಣಿಕ ನಿರ್ವಹಣೆಯ ವ್ಯಾಪ್ತಿಯ ಮಟ್ಟದಲ್ಲಿ ಬೇರೆಯಾದಂತೆ ಅದರ ಉದ್ದೇಶಗಳು ಬೇರೆಯಾಗಿವೆ. ಶೈಕ್ಷಣಿಕ ನಿರ್ವಹಣೆಯ ಉದ್ದೇಶಗಳನ್ನು ಐದು ಮಟ್ಟದಲ್ಲಿ ನೋಡಬಹುದಾಗಿದೆ. ಅವುಗಳಾವುವೆಂದರೆ;-

1) ರಾಷ್ಟ್ರೀಯ ಮಟ್ಟದಲ್ಲಿ
2) ರಾಜ್ಯ ಮಟ್ಟದಲ್ಲಿ
3) ಸ್ಥಾನಿಕ ಮತ್ತು ಖಾಸಗಿ ಮಟ್ಟದಲ್ಲಿ
4) ಶಾಲೆಯ ಮಟ್ಟದಲ್ಲಿ
5) ಶಾಲೆಯ ಸಭಾಮಟ್ಟದಲ್ಲಿ

**1) ರಾಷ್ಟ್ರೀಯ ಮಟ್ಟದಲ್ಲಿ**

1) ರಾಷ್ಟ್ರೀಯ ಮಹತ್ವವನ್ನು ಪಡೆದ ವಿಶ್ವವಿದ್ಯಾಲಯಗಳಾದ ಅಲಿಗಡ ಮುಸ್ಲೀಮ್ ವಿಶ್ವವಿದ್ಯಾಲಯ, ಬನಾರಸ ಹಿಂದು ವಿಶ್ವವಿದ್ಯಾಲಯ, ದೆಹಲಿ ವಿಶ್ವವಿದ್ಯಾಲಯ, ವಿಶ್ವಭಾರತಿ ವಿಶ್ವವಿದ್ಯಾಲಯ, ಜವಾಹರಲಾಲ ನೆಹರೂ ವಿಶ್ವವಿದ್ಯಾಲಯ, ನಾರ್ಥ ಈಸ್ಟರ್ನ್ ಹಿಲ್ ಯುನಿವ್ಹರ್ಸಿಟಿ, ಹೈದರಾಬಾದ ವಿಶ್ವವಿದ್ಯಾಲಯ, ಪಾಂಡಿಚೇರಿ ವಿಶ್ವವಿದ್ಯಾಲಯ, ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾಲಯ, ಜಾಮಿಯಾ ಮಿಲಿಯಾ ಇಸ್ಲಾಮಿಯಾ ಇವು ಕೇಂದ್ರ ಸರಕಾರದೊಂದಿಗೆ ನೇರ ಸಂಪರ್ಕವನ್ನು ಹೊಂದಿದ್ದು ಕೇಂದ್ರ ಸರಕಾರದೊಂದಿಗೆ ನೇರವಾಗಿ ನಿರ್ವಹಿಸಲ್ಪಡುತ್ತವೆ.

2) ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗಾಗಿ ಅಂತರರಾಷ್ಟ್ರೀಯ ಸಂಬಂಧವನ್ನು ಹೊಂದಬಹುದು.

3) ಶೈಕ್ಷಣಿಕವಾಗಿ ತನ್ನ ವಿಚಾರಗಳನ್ನು, ಮಾಹಿತಿಗಳನ್ನು ಸಮೂಹ ಮಾಧ್ಯಮಗಳಾದ ದೂರದರ್ಶನ (ಟಿ.ವಿ) ಮತ್ತು ಆಕಾಶವಾಣಿ ಮುಖಾಂತರ ಬಿತ್ತರಿಸುವ ಅಧಿಕಾರವನ್ನು ಪಡೆದಿದೆ.

4) ಕೇಂದ್ರಾಡಳಿತ ಪ್ರದೇಶಗಳ ಶೈಕ್ಷಣಿಕ ಜವಾಬ್ದಾರಿಯನ್ನು ಸಂಪೂರ್ಣವಾಗಿ ಹೊಂದಿದೆ.

5) ರಾಷ್ಟ್ರೀಯ ಸಂಸ್ಥೆಗಳ ನಿರ್ಮಾಣ.

6) ಅಂಗವಿಕಲರಿಗಾಗಿ ಶಿಕ್ಷಣದ ಸೌಲಭ್ಯಗಳನ್ನು ಕಲ್ಪಿಸುವುದು.

7) ಶೈಕ್ಷಣಿಕ ಸಂಶೋಧನೆಗಳಿಗಾಗಿ ಧನ ಸಹಾಯವನ್ನು ಕಲ್ಪಿಸುವುದು.

8) ಅಲ್ಪ ಸಂಖ್ಯಾತರ ಮತ್ತು ಹಿಂದುಳಿದ ವರ್ಗಗಳ ಹಿತಕ್ಕಾಗಿ, ಶೈಕ್ಷಣಿಕ ಸೌಲಭ್ಯಗಳತ್ತ ಗಮನ ಕೊಡುವುದು.

9) ಸಂಪರ್ಕ ಭಾಷೆಯಾದ ಹಿಂದಿಯ ಅಭಿವೃದ್ಧಿ ಪ್ರಚಾರಕ್ಕಾಗಿ ಪ್ರಯತ್ನ ಪಡುವುದು ಮತ್ತು ಜನಪ್ರಿಯಗೊಳಿಸುವುದು.

10) ಶಿಷ್ಯ ವೇತನ (ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ) ವನ್ನು ಮಂಜೂರು ಮಾಡುವುದು.

11) ಸಾರ್ವತ್ರಿಕರಣ ಶಿಕ್ಷಣಕ್ಕಾಗಿ ಶ್ರಮಿಸುವುದು.

12) ಅಗತ್ಯತೆಯು ಕಂಡು ಬಂದಲ್ಲಿ ವಿದೇಶಗಳಿಂದ ಆರ್ಥಿಕ ಸೌಲಭ್ಯಗಳನ್ನು ಪಡೆಯುವದು.

13) ವಾಣಿಜ್ಯ ಮತ್ತು ಕೃಷಿ, ವಿಜ್ಞಾನ ಮತ್ತು ವೃತ್ತಿಪರ ಶಿಕ್ಷಣವನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ಸಮಾನವಾಗಿ ಬೆಳೆಯುವಂತೆ ಶ್ರಮಿಸುವುದು.

14) ಮಹಿಳೆಯರಿಗೆ, ಅಂಗವಿಕಲರಿಗೆ, ಸಾಮಾಜಿಕವಾಗಿ ಹಿಂದುಳಿದ ವರ್ಗಗಳ, ಅಲ್ಪ ಸಂಖ್ಯಾತರ, ಅಲ್ಪಭಾಷಿಕರಿಗೆ ಶೈಕ್ಷಣಿಕ ಯೋಜನೆಗಳನ್ನು ರೂಪಿಸುವುದು.

ಈ ಮೇಲಿನ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ಕೇಂದ್ರ ಸರಕಾರವು ಮಾನವ ಸಂಪನ್ಮೂಲ ಅಭಿವೃದ್ಧಿ ಖಾತೆಯನ್ನು ಹೊಂದಿದ್ದು, ದೇಶದ ಸಮಗ್ರ ಶೈಕ್ಷಣಿಕ ವ್ಯವಸ್ಥೆಯನ್ನು ನಿರ್ವಹಿಸುತ್ತದೆ. ತನ್ನ ಸಕಲ ಕಾರ್ಯಗಳು ವ್ಯವಸ್ಥಿತವಾಗಿಯೂ ನ್ಯೂನ್ಯತೆಗಳಿಂದ ಮುಕ್ತವಾಗಿರಲು ಈ ಕೆಳಗಿನ ಕಾರ್ಯಲಯಗಳನ್ನು ಹೊಂದಿದೆ.

1) ಸಾಮಾನ್ಯ ಶಿಕ್ಷಣ ಇಲಾಖೆ

(Bureau of General Education)

2) ವಿಜ್ಞಾನ ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ

(Bureau of Science and technical Education)

3) ಸಾಂಸ್ಕೃತಿಕ ಚಟುವಟಿಕೆಗಳ ಇಲಾಖೆ

(Bureau of Cultural Activities)

4) ಭಾಷೆ ಮತ್ತು ಪಠ್ಯ ಪುಸ್ತಕಗಳ ಇಲಾಖೆ

(Bureau of Language and text Books)

5) ಶಿಷ್ಯ ವೇತನ ಮತ್ತು ಯುವ ಸೇವಾ ಇಲಾಖೆ

(Bureau of Schoolarship and youth Services)

**ಮಾನವ ಸಂಪನ್ಮೂಲ ಖಾತೆಯು ಅನೇಕ ವಿಭಾಗಗಳನ್ನು ಹೊಂದಿದೆ, ಅವುಗಳೆಂದರೆ:-**

1) ಆಡಳಿತದ ವಿಭಾಗ (Administrative Division)
2) ಪ್ರಾಥಮಿಕ ಮತ್ತು ಸಾಮಾನ್ಯ ಶಿಕ್ಷಣ ವಿಭಾಗ. (Elementary and Basic Education Division)
3) ಮಾಧ್ಯಮಿಕ ಶಿಕ್ಷಣ ವಿಭಾಗ (Secondary Education Division)
4) ಉನ್ನತ ಶಿಕ್ಷಣ ವಿಭಾಗ (Higher Education Division)
5) ಶಿಷ್ಯ ವೇತನ ವಿಭಾಗ (Schoolarship Division)
6) ಹಿಂದಿ ವಿಭಾಗ (Hindi Division)
7) ಸಂಶೋಧನೆ ಮತ್ತು ಪ್ರಕಾಶನ ವಿಭಾಗ
   (Research and Publication Division)

ಈ ಎಲ್ಲ ವಿಭಾಗಗಳನ್ನು ಈ ಸಚಿವಾಲಯದ ಮಾರ್ಗದರ್ಶನಗಳನ್ನು ನಿರ್ದೇಶನಗಳನ್ನು ಚಾಚು ತಪ್ಪದೆ ಪಾಲಿಸುತ್ತದೆ.

ಕೇಂದ್ರ ಸರಕಾರವು ತನ್ನ ಶೈಕ್ಷಣಿಕ ಅಭಿವೃದ್ಧಿ ಮತ್ತು ಯೋಜನೆಗಳನ್ನು ರೂಪಿಸಲು ಸಂಪೂರ್ಣ ಅಧಿಕಾರವನ್ನು ಹೊಂದಿದ್ದು, ವೈಜ್ಞಾನಿಕ ಮತ್ತು ತಾಂತ್ರಿಕ ಅಭಿವೃದ್ಧಿಗೆ ತಕ್ಕಂತೆ ಬದಲಾಗಿಸುತ್ತಿರುವ ಶೈಕ್ಷಣಿಕ ವ್ಯವಸ್ಥೆಗಳನ್ನು ಸರಿಹೊಂದಿಸಲು, ಸಮಾನಾಗಿರಿಸಲು ಅಗತ್ಯತೆಯು ಕಂಡು ಬಂದರೆ ಶೈಕ್ಷಣಿಕ ಆಯೋಗಗಳನ್ನು ನೇಮಿಸುವ ಮತ್ತು ಅವುಗಳಿಂದ ಪಡೆದ ಶಿಪಾರಸುಗಳನ್ನು ಅನುಷ್ಠಾನಕ್ಕೆ ತರುವ

ಸಂಪೂರ್ಣ ಅಧಿಕಾರವನ್ನು ಕೇಂದ್ರ ಸರಕಾರವು ಪಡೆದಿದೆ. ಇದರ ಫಲವಾಗಿಯೆ ಮಾನವ ಸಂಪನ್ಮೂಲ ಖಾತೆಯು ಅನೇಕ ಸಲಹಾ ಮಂಡಳಿಗಳನ್ನು ಪಡೆದಿದೆ ಅವುಗಳಲ್ಲಿ ಮುಖ್ಯವಾಗಿ.

1) ಕೇಂದ್ರಿಯ ಶಿಕ್ಷಣ ಸಲಹಾ ಮಂಡಳಿ

   (The Central Advisory Board of Education)

2) ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಳಿ

   (All India Counsil of Technical Education)

3) ವಿಶ್ವವಿದ್ಯಾಲಯ ಧನ ಸಹಾಯ ಆಯೋಗ

   (University Grants Commission)

4) ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಸಂಸ್ಥೆ.

   (N.C.E.R.T)

5) ತಾಂತ್ರಿಕ ಶಿಕ್ಷಣ ಸಂಸ್ಥೆ

   (Councial of technical Education)

6) ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನಾ ಪರಿಷತ್

   (Council for Scientific and industrial Research)

## 2) ರಾಜ್ಯ ಮಟ್ಟದಲ್ಲಿ

ಶಿಕ್ಷಣವು ಸಂಪೂರ್ಣವಾಗಿ ಕೇಂದ್ರ ಸರಕಾರದ ಜವಾಬ್ದಾರಿಯಾಗಿದ್ದರೂ ಭಾರತೀಯ ಸಂವಿಧಾನದ ಏಳನೇಯ ಪರಿಚ್ಛೇದದ ಎರಡನೇಯ ಪಟ್ಟಿಯ ಎರಡನೇಯ ದಾಖಲೆಯು ಶಿಕ್ಷಣವನ್ನು ರಾಜ್ಯದ ಜವಾಬ್ದಾರಿಯೆಂದು ಘೋಷಿಸಿತು. ಆದ್ದರಿಂದ ರಾಜ್ಯ ಸರಕಾರಗಳು ಶೈಕ್ಷಣಿಕವಾಗಿ ಹೆಚ್ಚು ಸ್ವಾತಂತ್ರ್ಯವನ್ನು ಪಡೆದುಕೊಂಡವು. ರಾಜ್ಯ ಸರ್ಕಾರಗಳು ತಮ್ಮ ಶೈಕ್ಷಣಿಕ ಜವಾಬ್ದಾರಿಯನ್ನು ನಿರ್ವಹಿಸುವುದಕ್ಕಾಗಿ ಈಗ ಪ್ರತ್ಯೇಕವಾದ ಶಿಕ್ಷಣ ಇಲಾಖೆಯನ್ನು ಹೊಂದಿದೆ. ಈ ಇಲಾಖೆಯ ವತಿಯಿಂದ ತಮ್ಮ ಶೈಕ್ಷಣಿಕ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ಇಂದಿನ ಶೈಕ್ಷಣಿಕ ಉದ್ದೇಶಗಳು ಅನೇಕ ವಿರುವುದರಿಂದ ನಿರ್ವಹಣೆಯ ಉದ್ದೇಶಗಳೂ ಅನೇಕವಾಗಿವೆ. ಅತಿ ಮಹತ್ವವಾದವುಗಳನ್ನು ಕೆಳಗೆ ಕೊಡಲಾಗಿದೆ.

1) ಕೇಂದ್ರ ಸರಕಾರದ ಶೈಕ್ಷಣಿಕ ನೀತಿಗಳಿಗೆ ಅನುರೂಪವಾಗಿಯೇ ರಾಜ್ಯ ಸರಕಾರಗಳು ತಮ್ಮ ಶೈಕ್ಷಣಿಕ ನೀತಿಗಳನ್ನು ರಚಿಸಿಕೊಳ್ಳುತ್ತವೆ.
2) ರಾಷ್ಟ್ರೀಯ ನೀತಿಗಳಿಗೆ ಅನುಗುಣವಾಗಿ ಪಠ್ಯ ಪುಸ್ತಕಗಳನ್ನು ತಯ್ಯಾರಿಸುವುದು.
3) ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣವನ್ನು ನೀಡುವುದು.
4) ರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಪರೀಕ್ಷೆಗಳಿಗೆ, ವಿಚಾರ ಸಂಕೀರಣಗಳಿಗೆ, ಸಮ್ಮೇಳನಗಳಿಗೆ ಮತ್ತು ಇತರ ಚಟುವಟಿಕೆಗಳಿಗೆ ರಾಜ್ಯದ ಪ್ರತಿನಿಧಿಯನ್ನು ಆಯ್ಕೆ ಮಾಡುವುದು.
5) ಜನತೆಗೆ ಪೂರ್ವ ಪ್ರಾಥಮಿಕ, ಪ್ರಾಥಮಿಕ, ಮಾಧ್ಯಮಿಕ, ಉನ್ನತ ಶಿಕ್ಷಣ ಮುಂತಾದ ಸೌಲಭ್ಯಗಳನ್ನು ಒದಗಿಸುವುದು.

6) ಸರಕಾರ/ಇಲಾಖೆಗಳಿಂದ ಅನುಮತಿಯನ್ನು ಪಡೆದ ಖಾಸಗಿ ಸಂಸ್ಥೆಗಳಿಗೆ ಅನುದಾನವನ್ನು ಕೊಡುವುದು.
7) ಶಿಕ್ಷಕರ ತರಬೇತಿಗಾಗಿ ತರಬೇತಿ ಶಾಲೆಗಳನ್ನು ತೆರೆಯುವುದು.
8) ವಯಸ್ಕರ ಶಿಕ್ಷಣ, ಜನಸಂಖ್ಯಾ ಶಿಕ್ಷಣ ಮುಂತಾದ ಕಾರ್ಯಕ್ರಮಗಳನ್ನು ಯೋಜಿಸುವುದು.
9) ಕಡ್ಡಾಯ ಮತ್ತು ಉಚಿತ ಶಿಕ್ಷಣಕ್ಕೆ ಹೆಚ್ಚು ಮಹತ್ವವನ್ನು ಕೊಡುವುದು.
10) ಶೈಕ್ಷಣಿಕ ಆಡಳಿತವು ಸುಗಮವಾಗಿ ನೆರವೇರಲೆಂದು ಸಿಬ್ಬಂದಿ ವರ್ಗವನ್ನು ನೇಮಿಸುವುದು.
11) ಅವಶ್ಯಕತೆಯನ್ನೇ ಆಧಾರವಗಿಟ್ಟುಕೊಂಡು ಹೊಸ ಶಾಲೆಗಳನ್ನು ಪ್ರಾರಂಭಿಸಲಿಚ್ಛಿಸುವ ಖಾಸಗಿ ಸಂಸ್ಥೆಯವರಿಗೆ ಪರವಾನಿಗೆಯನ್ನೀಯುವದು.
12) ಕೇಂದ್ರ ಸರಕಾರದಿಂದ ದೊರೆತ ಹಣ ಸಹಾಯವನ್ನು ಅದೇ ಕಾರ್ಯಕ್ರಮ/ ಯೋಜನೆಗಳಿಗಾಗಿ ಉಪಯೋಗಿಸುವುದು.
13) ಕೇಂದ್ರ ಸರಕಾರದೊಂದಿಗೆ ಸದಾ ಸೌಹಾರ್ಧಯುತ ಸಂಬಂಧವನ್ನಿಟ್ಟು ಕೊಂಡಿರುವುದು.
14) ವಿಶ್ವವಿದ್ಯಾಲಯ ಶಾಲೆಗಳಿಗೆ ರಜಾ ದಿನಗಳನ್ನು ನಿಗದಿಪಡಿಸುವುದು.
15) ಶಿಕ್ಷಕರ ನೇಮಕಾತಿ ಮತ್ತು ಅವರ ಸೇವಾ ಷರತ್ತುಗಳನ್ನು ನಿರ್ಧರಿಸುವುದು.
16) ಖಾಸಗಿ ಅನುದಾನಿತ ಸಂಸ್ಥೆಯಲ್ಲಿಯ ಶಿಕ್ಷಕರಿಗೆ ಸೇವಾ ಭದ್ರತೆಯನ್ನು ಒದಗಿಸುವುದು.
17) ಶಿಷ್ಯ ವೇತನವನ್ನು ನೀಡಲು ನಿಯಮಾವಳಿಗಳನ್ನು ರಚಿಸುವುದು.

**3) ಸ್ಥಾನಿಕ ಮತ್ತು ಖಾಸಗಿ ಮಟ್ಟದಲ್ಲಿ**

1) ರಾಜ್ಯ ಶಿಕ್ಷಣ ಇಲಾಖೆಯ ಮಾರ್ಗದರ್ಶನ ಮತ್ತು ನಿರ್ದೇಶನಗಳಿಗೆ ಅನುಗುಣವಾಗಿ ಶಿಕ್ಷಣವನ್ನು ನೀಡುವುದು.
2) ಶೈಕ್ಷಣಿಕ ಅಭಿವೃದ್ಧಿಗಾಗಿ ಸಂಸ್ಥೆಗಳನ್ನು ಸಂಘಟಿಸುವುದು.
3) ಶಾಲೆಯ ಆಡಳಿತವನ್ನು ನಿರ್ವಹಿಸುವುದು.
4) ಅನುದಾನ ಸಂಹಿತೆಯ ಮತ್ತು ರಾಜ್ಯ ಸರಕಾರದ ನಿಯಮಗಳನ್ನು ಪಾಲಿಸಿ ಭೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ನೇಮಕ ಮಾಡಿಕೊಳ್ಳುವುದು.
5) ಶಾಲೆಯ ಪಾಠೋಪಕರಣಗಳನ್ನು, ಪೀಠೋಪಕರಣಗಳನ್ನು ಒದಗಿಸುವುದು.
6) ಶಾಲೆಯ ಸ್ಥಾವರವನ್ನು ಅಚ್ಚುಕಟ್ಟಾಗಿಯೂ, ನೈರ್ಮಲ್ಯವಾಗಿಯೂ ಇರಿಸುವುದು.
7) ಸಂಸ್ಥೆಯ ಹಣಕಾಸಿನ ಸ್ಥಿತಿಯನ್ನು ಭದ್ರವಾಗಿಟ್ಟಿರುವುದು.
8) ಅನುದಾನ ಸಂಹಿತೆಯ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುವುದು.
9) ಶಾಲೆಯ ಕೀರ್ತಿಗೆ ಪಾತ್ರವಾದ ಆಟ ಪಂದ್ಯಾಟಗಳಲ್ಲಿ, ರ್‍ಯಾಂಕನ್ನು ಪಡೆದ ವಿದ್ಯಾರ್ಥಿಗಳನ್ನು ಮತ್ತು ಈ ಜಯಗಳಿಸಲು ಕಾರಣಭೂತರಾದ ಶಿಕ್ಷಕರನ್ನು ಗೌರವಿಸುವುದು.
10) ಶಾಲೆಯ ಸಿಬ್ಬಂದಿಗೆ ಸರಕಾರದ ನಿಗದಿತ ನಿಯಮಗಳಂತೆ ವೇತನವನ್ನು ಪಾವತಿ ಮಾಡುವುದು.
11) ಶಿಕ್ಷಣ ಇಲಾಖೆ ಮತ್ತು ಸಿಬ್ಬಂದಿಯೊಂದಿಗೆ ಉತ್ತಮ ಸಂಬಂಧವನ್ನು ಹೊಂದಿರುವುದು.
12) ಶೌಚಾಲಯದ ವ್ಯವಸ್ಥೆಯನ್ನು ಸಮರ್ಪಕವಾಗಿರಿಸಿರುವುದು.
13) ಶಾಲೆಯ ಸಿಬ್ಬಂದಿಯವರಿಗೆ ನೀತಿ-ಸಂಹಿತೆಯನ್ನು ಬೋಧಿಸುವುದು.

14) ಆಟದ ಬಯಲನ್ನು ಮಕ್ಕಳ ಅನುಕೂಲಕ್ಕಾಗಿ ಒದಗಿಸುವುದು.
15) ನೀತಿಬಾಹಿರ ವರ್ತನೆಯನ್ನು ತೋರಿದ ಸಿಬ್ಬಂದಿಯ ಮೇಲೆ ಶಿಸ್ತಿನ ಕ್ರಮವನ್ನು ಕೈಗೊಳ್ಳುವುದು.

**4) ಶಾಲೆಯ ಮಟ್ಟದಲ್ಲಿ**

1) ಶಾಲೆಯ ಆವರಣವನ್ನು ಸುಂದರವಾಗಿಯೂ, ಸ್ವಚ್ಛವಾಗಿಯೂ ನೈರ್ಮಲ್ಯಯುತವಾಗಿಯೂ ಇಡುವುದು.
2) ಗಂಡು ಮಕ್ಕಳಿಗಾಗಿ ಮತ್ತು ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕ ಶೌಚಾಲಯದ ವ್ಯವಸ್ಥೆಯನ್ನು ಮಾಡಿ ಅವುಗಳ ನೈರ್ಮಲ್ಯತೆಯನ್ನು, ಸ್ವಚ್ಛತೆಯನ್ನು ಕಾಪಾಡುವುದು. ಅವಶ್ಯ.
3) ವಾಚನಾಲಯ ಮತ್ತು ಗ್ರಂಥಾಲಯದ ವ್ಯವಸ್ಥೆ.
4) ಶಿಷ್ಯ ವೇತನವನ್ನು ನಿರ್ಧರಿಸುವುದು.
5) ವೇಳಾ ಪತ್ರಿಕೆ ತಯಾರಿಸುವುದು ಮತ್ತು ಅನುಷ್ಠಾನಕ್ಕೆ ತರುವುದು.
6) ಪರೀಕ್ಷೆಗಳನ್ನು ನಡೆಸುವುದು.
7) ವಿದ್ಯಾರ್ಥಿಗಳ ಪ್ರಗತಿ ಮತ್ತು ನ್ಯೂನತೆಗಳನ್ನು ಪಾಲಕರಿಗೆ ಒಪ್ಪಿಸುವುದು.
8) ಸಹಪಠ್ಯ ಚಟುವಟಿಕೆಗಳಿಗೆ ಆಸ್ಪದವನ್ನು ಕೊಡುವುದು.
9) ವಿದ್ಯಾರ್ಥಿಗಳ ಆರೋಗ್ಯದತ್ತ ಗಮನವನ್ನು ಹರಿಸುವುದು.
10) ಸಾಕಷ್ಟು ಕ್ರೀಡಾ ಸಾಮಗ್ರಿಗಳನ್ನು ಒದಗಿಸುವುದು.
11) ದೃಕ್ ಶ್ರವಣೋಪಕರಣಗಳ ಬಳಕೆಯ ಬಗ್ಗೆ ಶಿಕ್ಷಕರಿಗೆ ಹೆಚ್ಚು ಒತ್ತನ್ನು ನೀಡುವುದು ಸಂರಕ್ಷಿಸುವುದು.
12) ದಿನ ಪತ್ರಿಕೆಗಳ ಬಗ್ಗೆ ಹೆಚ್ಚು ಗಮನವನ್ನಿರಿಸಿರುವುದು.
13) ವಿದ್ಯಾರ್ಥಿಗಳನ್ನು ವೈದ್ಯಕೀಯ ತಪಾಸಣೆಗೆ ಗುರಿಪಡಿಸುವುದು.
14) ನಿಯಮಿತವಾಗಿ ಶಿಕ್ಷಕರ ಸಭೆಯನ್ನು ಕರೆದು ವಿದ್ಯಾರ್ಥಿಗಳ ಕಲ್ಯಾಣದತ್ತ ಗಮನವನ್ನು ಹರಿಸುತ್ತಿರಬೇಕು.

**5) ಶಾಲೆಯ ಸಭಾ ಮಟ್ಟದಲ್ಲಿ**

1) ಶಾಲೆಯ ಆವರಣದಲ್ಲಿ ಸ್ವಚ್ಚವಾಗಿಯೂ, ಶುಭ್ರವಾಗಿಯೂ, ನೈರ್ಮಲ್ಯಯುತವಾಗಿಯೂ ಇರಿಸುವದಕ್ಕೆ ಹೆಚ್ಚು ಪ್ರಧಾನ್ಯತೆಯನ್ನು ಕೊಡುವುದು.
2) ಸಂಚಯಿತ ಖಾತೆಯನ್ನು ತೆರದು ಉಳಿತಾಯದ ಅನುಭವಗಳನ್ನು ಲಾಭಗಳನ್ನು ಮಕ್ಕಳಿಗೆ ತಿಳಿಸುವುದು.
3) ಬರಗಾಲ ಪೀಡಿತರಿಗೆ, ಸಂತ್ರಸ್ತರಿಗೆ ಧನಸಹಾಯವನ್ನು ಮಾಡುವುದು.
4) ಶಾಲೆಯ ಸಾಮಗ್ರಿಗಳನ್ನು ಸಂರಕ್ಷಿಸುವಂತೆ ಮಕ್ಕಳಿಗೆ ತಿಳಿಸುವುದು.
5) ಪ್ರವಾಸವನ್ನು ಸಂಘಟಿಸುವುದು.
6) ಪೋಲೀಸ್ ಆರೋಗ್ಯ ಇಲಾಖೆ, ಅಗ್ನಿ ಶಾಮಕದಳದ ಕಛೇರಿಗೆ ಭೇಟಿಯನ್ನಿತ್ತು ಅಲ್ಲಿಯ ಕಾರ್ಯ ವಿಧಾನಗಳನ್ನು ತಿಳಿದುಕೊಳ್ಳುವುದು.
7) ವಿದ್ಯಾರ್ಥಿಗಳ ಆರೋಗ್ಯ ಮತ್ತು ಸ್ವಚ್ಛತೆಯ ಕಡೆಗೆ ಗಮನವನ್ನಿರಿಸುವುದು.

8) ವಿದ್ಯಾರ್ಥಿಗಳಿಗೆ ನೀತಿ ಸಂಹಿತೆಯನ್ನು ಬೋಧಿಸುವುದು.
9) ವರುಷವಿಡಿ ಶಿಕ್ಷಕ ವೃಂದಕ್ಕೆ ಸಹಾಯವನ್ನೀಯುವುದು.
10) ವಯಸ್ಕರ ಶಿಕ್ಷಣ ಮುಂತಾದ ಸಾಮಾಜಿಕ ಚಟುವಟಿಕೆಗಲ್ಲಿ ಬಾಗವಹಿಸುವುದು.
11) ವಿದ್ಯಾರ್ಥಿಗಳು ಶಾಲೆಯ ಎಲ್ಲ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಪ್ರೇರೇಪಿಸುವುದು.
12) ವಿದ್ಯಾರ್ಥಿಗಳಿಗೆ ತಮ್ಮ ವ್ಯಕ್ತಿತ್ವವನ್ನು ಪ್ರದರ್ಶಿಸಲು ಅವಕಾಶಗಳನ್ನು ಕಲ್ಪಿಸುವುದು.
13) ಶಾಲೆಯ ಕೀರ್ತಿಯು ಪಸರಿಸಲು ಅಥವಾ ಹರಡಲು ಪ್ರಯತ್ನಿಸುವುದು.
14) ಸಾರಿಗೆ ಸಪ್ತಾಹ ಮುಂತಾದ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಶಾಲೆಯ ಮಕ್ಕಳನ್ನು ಪ್ರೋತ್ಸಾಹಿಸುವುದು.
15) ಧಾರ್ಮಿಕ ಮತ್ತು ರಾಷ್ಟ್ರೀಯ ಹಬ್ಬಗಳಲ್ಲಿ ಭಾಗವಹಿಸುವುದು.

## 2.5 ನಿರ್ವಹಣೆಯು ಒಂದು ವಿಜ್ಞಾನವೇ?

ಶೈಕ್ಷಣಿಕ ನಿರ್ವಹಣೆಯು ಒಂದು ವಿಜ್ಞಾನವೇ ಎಂದು ತಿಳಿಯುವ ಪೂರ್ವದಲ್ಲಿನ ವಿಜ್ಞಾನ ಎಂದರೇನು, ವಿಜ್ಞಾನದ ಲಕ್ಷಣಗಳೇನು ಎಂಬುದನ್ನು ತಿಳಿದುಕೊಳ್ಳೋಣ.

ವಿಜ್ಞಾನದ ವ್ಯಾಖ್ಯೆಯನ್ನು ಮೊದಲು ವಿಶ್ಲೇಷಿಸೋಣ.

'ವಿಜ್ಞಾನವು ಒಂದು ಸಂಚಿತ ಮತ್ತು ನಿರಂತರ ಪ್ರಾಯೋಗಿಕ' ವಿಕ್ಷಣೆಗಳ ಶ್ರೇಣಿಯಾಗಿದ್ದು ಇದರ ಫಲವು ಪರಿಕಲ್ಪನೆ ಮತ್ತು ಸಿದ್ಧಾಂತಗಳನ್ನು ರೂಪಿಸುತ್ತದೆ. ಈ ಪರಿಕಲ್ಪನೆ ಮತ್ತು ಸಿದ್ಧಾಂತಗಳು ಭವಿಷ್ಯದ ಪ್ರಾಯೋಗಿಕ ಮತ್ತು ವೀಕ್ಷಣೆಗಳ ಫಲವಾಗಿ ಬದಲಾವಣೆಗೆ ಒಳಪಟ್ಟಿವೆ. ವಿಜ್ಞಾನದ ಜ್ಞಾನವು ಸಮೂಹವೂ ಹೌದು ಮತ್ತು ಅದನ್ನು ಗಳಿಸುವ ಸಾಧನವೇ ಆಗಿದೆ".

–ಫ್ರೇಡರಿಕ್ ಫಿಜ್ ಪಾಟ್ರಿಕ್ 1960

ವಿಜ್ಞಾನವು ವ್ಯವಸ್ಥಿತ ಹಾಗೂ ಶೇಖರಿತ ಕಲಿಕೆಯಾಗಿದ್ದು, ಸಾಮಾನ್ಯವಾಗಿ ಅದು ನೈಸರ್ಗಿಕ ಪ್ರಕೃತಿ ಘಟನೆಗಳಿಗೆ ಪರಿಮಿತಗೊಂಡಿದೆ. ವಿಜ್ಞಾನದ ಪ್ರಗತಿಯು ಸಂಗತಿಗಳನ್ನು ಶೇಖರಿಸುವುದರಿಂದ ಮಾತ್ರ ಗುರುತಿಸಲ್ಪಡುವುದಿಲ್ಲ. ಆದರೆ ವೈಜ್ಞಾನಿಕ ವಿಧಾನ ಮತ್ತು ವೈಜ್ಞಾನಿಕ ಮನೋವೃತ್ತಿಗಳ ಹೊರ ಹೊಮ್ಮುವಿಕೆಯಿಂದಾಗುವುದು.

–ದಿ ಕೊಲಂಬಿಯಾ ವಿಶ್ವಕೋಶ 1990

ಈ ಮೇಲಿನ ಎರಡು ವ್ಯಾಖ್ಯೆಗಳನ್ನು ವಿಶ್ಲೀಷಿಸಿದಾಗ ಮೂರು ಮೂಲಭೂತ ತತ್ವಗಳು ಉದಯಗೊಳ್ಳುತ್ತದೆ.

1) ವಿಜ್ಞಾನವು ಶೇಖರಿಸಿದ ಮತ್ತು ವ್ಯವಸ್ಥಿತ ಜ್ಞಾನವಾಗಿದೆ.
2) ವಿಚಾರಣೆಗಾಗಿ ವೈಜ್ಞಾನಿಕ ಪದ್ಧತಿಯ ಅನ್ವಯ
3) ವೈಜ್ಞಾನಿಕ ಮನೋವೃತ್ತಿ.

ಮೊದಲನೆಯ ತತ್ವವು ವಿಜ್ಞಾನದ ಉತ್ಪಾದನೆಯನ್ನು ಸೂಚಿಸಿದರೆ, ಎರಡನೆಯ ಮತ್ತು ಮೂರನೆಯ ತತ್ವಗಳು ವಿಜ್ಞಾನದ ಪ್ರಕ್ರಿಯೆಯನ್ನು ಸೂಚಿಸುತ್ತವೆ. ಸಂಕ್ಷಿಪ್ತದಲ್ಲಿ ವಿವರಿಸುವುದಾದರೆ ವಿಜ್ಞಾನವು ಉತ್ಪಾದನೆ ಮತ್ತು ಪ್ರಕ್ರಿಯೆ ಎರಡನ್ನೂ ಒಳಗೊಂಡಿದೆ.

**ಶೈಕ್ಷಣಿಕ ನಿರ್ವಹಣೆಯನ್ನು ಈ ಕೆಳಗಿನ ಅಂಶಗಳ ಮೇಲೆ ವಿಜ್ಞಾನವೆಂದು ಪರಿಗಣಿಸಬಹುದು.**

1) ವಿಜ್ಞಾನದಂತೆ ಶೈಕ್ಷಣಿಕ ನಿರ್ವಹಣೆಯು ಸತ್ಯ ಶೋಧನೆಗೆ ಹೆಚ್ಚು ಮಹತ್ವವನ್ನೀಯುತ್ತದೆ.

ಇದು ಸಂಗತಿಯನ್ನು ಅಧ್ಯಯನ ಮಾಡುತ್ತವೆ. ಉದಾ: ಶಿಕ್ಷಕರ ವರ್ತನೆ ಮತ್ತು ವಿದ್ಯಾರ್ಥಿಗಳ ಶೈಕ್ಷಣಿಕ ಸಂಪಾದನೆ, ಲಿಂಗ ಮತ್ತು ಸೃಜನಾತ್ಮಕತೆ ಇತ್ಯಾದಿ. ಅಲ್ಲದೆ ಅವುಗಳನ್ನು ನಿರ್ವಹಿಸುವ ನಿಯಮಗಳನ್ನು ವಿವರಿಸುತ್ತದೆ.

2) ಇದು ವೈಜ್ಞಾನಿಕ ವಿಚಾರಣೆಯ ವಿಧಾನವನ್ನು ಅನ್ವಯಿಸಿ ಶೈಕ್ಷಣಿಕ ಸಮಸ್ಯೆಗಳಿಗೆ ಪರಿಹಾರವನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತದೆ.

3) ಇದು ವಿಜ್ಞಾನಿಗಳು ಉಪಯೋಗಿಸುವ ವೈಜ್ಞಾನಿಕ ಮಾರ್ಗವನ್ನೇ ಉಪಯೋಗಿಸುತ್ತದೆ.

4) ಇತರ ವಿಜ್ಞಾನಗಳಂತೆ ಇದು ಶುದ್ಧ ಮತ್ತು ಅನ್ವಯಿತ ಸಂಬಂಧಗಳನ್ನು ಹೊಂದಿದೆ.

**ಈಗ ವಿಜ್ಞಾನ ಮತ್ತು ಶೈಕ್ಷಣಿಕ ನಿರ್ವಹಣೆಯ ಪ್ರಕ್ರಿಯೆಗಳನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡೋಣ.**

1. ವಿಜ್ಞಾನ ನೂರಾರು ವರ್ಷಗಳ ಅನುಭವಗಳ ಆಧಾರದ ಮೇಲೆ ಇರಬಹುದೆಂದು ಭಾವಿಸಿಕೊಂಡು ಭವಿಷ್ಯ ನುಡಿಯುತ್ತದೆ, ಮುಂದುವರೆಯುತ್ತದೆ. ಅವರಂತೆಯ ಶೈಕ್ಷಣಿಕ ನಿರ್ವಹಣೆಯು ಭವಿಷ್ಯತ್ತಿನಲ್ಲಿ ಉಂಟಾಗುವ ಸ್ಥಿತಿಗಳನ್ನು ಇಂದು ತಿಳಿದ ಸಂಗತಿಗಳಿಂದ ಊಹೆ ಮಾಡಿಕೊಂಡು ಭವಿಷ್ಯ ನುಡಿಯುತ್ತದೆ.
2. ವಿಜ್ಞಾನದ ಜ್ಞಾನವು ಚಲಕಗಳ (ನಮೂನೆಗಳ) ವೀಕ್ಷಣೆಗಳನ್ನು ಅವಲಂಭಿಸಿದೆ. ಈ ಜ್ಞಾನವು ಸಾರ್ವಜನಿಕರಿಂದ ಯಾವ ವೇಳೆಯಲ್ಲಾದರೂ ಸುಲಭದಲ್ಲಿ ದೊರೆಯುವಂತೆ ಇದೆ ಅದರಂತೆ ಶೈಕ್ಷಣಿಕ ನಿರ್ವಹಣೆಯು ನಮೂನೆಗಳ ವೀಕ್ಷಣೆಯನ್ನು ಅವಲಂಭಿಸಿದೆ, ಮತ್ತು ಸುಲಭದಲ್ಲಿ ಜನತೆಗೆ ದೊರೆಯುವದಲ್ಲದೆ ಅವುಗಳನ್ನು ಪ್ರಮಾಣಿಕರಿಸಲುಬಹುದು.
3. ವಿಜ್ಞಾನವು ಎಂದೂ ಅಂತ್ಯವಿಲ್ಲದ ಉದ್ಯಮವಾಗಿದ್ದು, ಅನೇಕ ಹೊಸ ಹೊಸ ಸಂಶೋಧನೆಗಳು ನಿರಂತರವಾಗಿ ಸಾಗುತ್ತಲೇ ಇರುತ್ತವೆ. ವಿಶ್ವದಲ್ಲಿಯ ವಸ್ತುಗಳು ಹೇಗೆ ವರ್ತಿಸುತ್ತವೆ, ಮತ್ತು ಅವುಗಳ ಆಂತರಿಕ ಸಂಬಂಧವೇನು ಎಂಬುದನ್ನು ತಿಳಿಯಲು ಶ್ರಮಿಸುತ್ತಲೆ ಇರುತ್ತದೆ. ಅದರಂತೆ ಶೈಕ್ಷಣಿಕ ನಿರ್ವಹಣೆಯು ನಿರಂತರ ಪ್ರಕ್ರಿಯೆ ಮತ್ತು ಉದ್ಯಮವಾಗಿದೆ. ಉತ್ತಮ ಆಡಳಿತ ವ್ಯವಸ್ಥೆಯನ್ನು ಒದಗಿಸಲು ಇದರ ಕ್ರಿಯೆಯು ನಿರಂತರವಾಗಿ ಸಾಗುತ್ತಲೆ ಇರುತ್ತದೆ. ಶಿಕ್ಷಣವು ನಿರಂತರ ಪ್ರಕ್ರಿಯೆಯಾಗಿದ್ದು, ಸದಾ ಬೆಳೆಯುತ್ತಲೆ, ಅಭಿವೃದ್ಧಿ ಹೊಂದುತ್ತಲೆ ಇರುತ್ತದೆ.
4. ಎಲ್ಲ ಆಧುನಿಕ ವಿಜ್ಞಾನಗಳ ಮಹತ್ವ ಪೂರ್ಣ ಲಕ್ಷಣ ಯಾವುದೆಂದರೆ ಅಳತೆ ಸ್ಥಾಪಿಸಲ್ಪಟ್ಟ ಎಲ್ಲ ಕಾನೂನುಗಳ ಸೂತ್ರ ರೂಪಣೆಯು ಪರಿಮಾಣಾತ್ಮಕ ಸೌಲಭ್ಯಗಳಿಂದ ಉಂಟಾದುದಾಗಿದೆ. ಅದರಂತೆಯೆ ಶೈಕ್ಷಣಿಕ ನಿರ್ವಹಣೆಯು ಅಳತೆಯನ್ನು ತನ್ನ ಸಂಶೋಧನೆಯ ನಿರ್ಣಯಗಳ ಪ್ರಮುಖ ಅಂಶವೆಂದು ಪರಿಗಣಿಸುತ್ತದೆ. ಮೌಲ್ಯಮಾಪನವು ಈ ದಿಸೆಯಲ್ಲಿ ಹೆಚ್ಚು ಸಹಾಯ

ಮಾಡುತ್ತದೆ. ಶೈಕ್ಷಣಿಕ ನಿರ್ವಹಣೆಯು ಸಂಗತಿಗಳನ್ನು ಅಧ್ಯಯನ ಮಾಡಿ ಅವುಗಳು ಏನು ಎಂಬುದನ್ನು ವಿವರಿಸುತ್ತದೆ.

5. ಕಾರ್ಯ ನಿರ್ವಹಣೆಯು ಅಭಿಪ್ರೇರಣೆ ಮತ್ತು ಮಾನವ ಸಂಬಂಧದ ಮೇಲೆ ನಿಂತಿದೆ.
6. ಕಾರ್ಯ ನಿರ್ವಹಣೆಯು ವಿಜ್ಞಾನದ ಇಷ್ಟೆಲ್ಲಾ ಗುಣಲಕ್ಷಣಗಳನ್ನು ಹೊಂದಿದ್ದರೂ ಕೂಡಾ ನೈಸರ್ಗಿಕ ವಿಜ್ಞಾನಗಳಾದ ರಸಾಯನಶಾಸ್ತ್ರ, ಜೀವಶಾಸ್ತ್ರ, ಭೌತಶಾಸ್ತ್ರಗಳಷ್ಟು ಖಚಿತವಾದ, ನಿಖರವಾದ, ವಿಜ್ಞಾನವಲ್ಲ. ಆದರೆ ಆರ್ಥಿಕ ವಿಜ್ಞಾನ, ಸಮಾಜ ವಿಜ್ಞಾನ, ಸೈನಿಕ ವಿಜ್ಞಾನಗಳಂತೆ ಶೈಕ್ಷಣಿಕ ನಿರ್ವಹಣೆಯು ಒಂದು ವಿಜ್ಞಾನವೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

## 4) ಕರ್ನಾಟಕ ರಾಜ್ಯದಲ್ಲಿ ಶೈಕ್ಷಣಿಕ ಪ್ರಾಮುಖ್ಯತೆ

ಮಾನ್ಯ ರಾಜ್ಯಪಾಲರು ರಾಜ್ಯ ಸರಕಾರದ ಶೈಕ್ಷಣಿಕ ರಾಜಕೀಯ ವ್ಯವಸ್ಥೆ ಸಂವಿಧಾನಾತ್ಮಕ ಅಧಿಪತ್ಯವನ್ನು ಪಡೆದಿದ್ದು, ಅವರ ಶಿರೋನಾಮೆಯಡಿಯಲ್ಲಿ ತನ್ನ ಎಲ್ಲಾ ಕಾರ್ಯಗಳನ್ನು ರಾಜ್ಯ ಸರಕಾರವು ನೆರವೇರಿಸುತ್ತದೆ. ರಾಜ್ಯ ಸರಕಾರವು ರಾಜ್ಯಪಾಲರ ಸಲಹೆಗಾಗಿ ಸಲಹಾ ಸಮಿತಿಯನ್ನು ನೇಮಿಸಿದ್ದು, ಶೈಕ್ಷಣಿಕ ವ್ಯವಸ್ಥೆಯ ವಾಸ್ತವಾಂಶದ ಬಗ್ಗೆ ರಾಜ್ಯಪಾಲರಿಗೆ ಸಲಹೆ ಸೂಚನೆಗಳನ್ನು ಕೊಡುತ್ತಿರುತ್ತದೆ. ಮಾನ್ಯ ಮುಖ್ಯಮಂತ್ರಿಗಳು ಮಂತ್ರಿಮಂಡಲದ ಪ್ರತಿನಿಧಿತ್ವವನ್ನು ಪಡೆದಿರುತ್ತಾರೆ. ಮಂತ್ರಿ ಮಂಡಲದ ಸಕಲ ಕಾರ್ಯಗಳ ಸಭೆಯಲ್ಲಿ ಅಧ್ಯಕ್ಷ ಸ್ಥಾನವನ್ನು ಹೊಂದಿರುತ್ತಾರೆ. ಮಾನ್ಯ ಶಿಕ್ಷಣ ಮಂತ್ರಿಗಳು ಶಿಕ್ಷಣದ ವಾಸ್ತವಾಂಶ ರೀತಿ ನೀತಿಗಳ, ನಿಯಮಾವಳಿಗಳ ರಚನೆಯ ಜವಾಬ್ದಾರಿಯನ್ನು ಹೊಂದಿದ್ದು, ಇತರ ಮಂತ್ರಿಗಳೂ ಸರ್ವೆ ಸಾಮಾನ್ಯವಾಗಿ ಇವರ ಜವಾಬ್ದಾರಿಯಲ್ಲಿ ಪಾಲುದಾರರಾಗಿರುತ್ತಾರೆ. ಅವರವರ ಖಾತೆಗೆ ಸಂಬಂಧಿಸಿದಂತೆ ವಿಶೇಷ ಶಿಕ್ಷಣದ ವ್ಯವಸ್ಥೆಗಾಗಿ ಅವರು ಈ ಮಂತ್ರಿವರ್ಯರೊಂದಿಗೆ ಚರ್ಚಿಸುತ್ತಾರೆ. ಉದಾ: ಕೃಷಿ ಮಂತ್ರಿಗಳು ಕೃಷಿ ಶಿಕ್ಷಣಕ್ಕಾಗಿ ವಿಶೇಷ ಅಭಿರುಚಿಯನ್ನು ಹೊಂದಿರುತ್ತಾರೆ. (B.Sc or M.Sc (Agri)) ಮೀನುಗಾರಿಕೆಯ ಮಂತ್ರಿಗಳು (B.F.Sci) ಹಾಗೂ ಪಶು ಸಂಗೋಪನಾ ಮಂತ್ರಿಗಳು (B.V.Sci) ಶಿಕ್ಷಣ ಮಂತ್ರಿಗಳು ಸಹಾಯಕ್ಕಾಗಿ ಇನ್ನು ಕೆಲವು ರಾಜ್ಯಗಳಲ್ಲಿ ಉಪಮಂತ್ರಿಗಳನ್ನು ಪಡೆದಿರುತ್ತಾರೆ.

ಕರ್ನಾಟಕ ರಾಜ್ಯದ ಸದ್ಯದ ಪರಿಸ್ಥಿತಿಯಲ್ಲಿ ಶಿಕ್ಷಣ ಇಲಾಖೆಯು ಎರಡು ಭಾಗಗಳಲ್ಲಿ ವಿಂಗಡಿಸಿದ್ದು ಅವುಗಳು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣಕ್ಕೆ ಒಬ್ಬ ಮಂತ್ರಿಯನ್ನು ಪಡೆದಿದ್ದು, ಮಾನ್ಯ ಶ್ರೀ ಬಿ.ಕೆ. ಚಂದ್ರಶೇಖರ ಅಲ್ಲದೆ ಉನ್ನತ ಶಿಕ್ಷಣಕ್ಕೆ ಮಾನ್ಯ ಶ್ರೀ ಪರಮಶಿವಪ್ಪ (17–12–1994 ರಿಂದ ಮಂತ್ರಿಯಾಗಿದ್ದರು) ಇತ್ತೀಚಿಗೆ (1996) ಬಿ. ಸೋಮಶೇಖರ ಅವರು ಉನ್ನತ ಶಿಕ್ಷಣಕ್ಕೆ ಮಂತ್ರಿಯಾಗಿರುತ್ತಾರೆ. ಇದಕ್ಕೂ ಮೊದಲ ವೈದ್ಯಕೀಯ ಶಿಕ್ಷಣಕ್ಕೆ ಶ್ರೀ. ಎ.ಬಿ.ಮಾಲಕರೆಡ್ಡಿ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣಕ್ಕೆ ಶ್ರೀಮತಿ ನಾಗಮ್ಮಾ ಕೇಶವ ಮೂರ್ತಿ ಹಾಗೂ ಉನ್ನತ ಶಿಕ್ಷಣಕ್ಕೆ ಎಸ್.ಎಂ.ಯಾಹ್ಯಾ ಶಿಕ್ಷಣ ಮಂತ್ರಿಗಳಾಗಿದ್ದರು.

ಆಯುಕ್ತರು(C.P.I) ಇಂದು 2006ಕ್ಕೆ ಇದ್ದಂತೆ ಶ್ರೀ ಮದನಗೋಪಾಲ ಇಡೀ ಶೈಕ್ಷಣಿಕ ಆಡಳಿತದ ರೂವಾರಿಯಾಗಿದ್ದು, ಮಾನ್ಯ ಶಿಕ್ಷಣ ಮಂತ್ರಿ ಸನ್ಮಾನ್ಯ ಶ್ರೀ ಬಸವರಾಜ ಹೊರಟ್ಟಿಯವರೊಂದಿಗೆ

ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಇವರು ನೇರವಾಗಿ ಶಿಕ್ಷಣ ಮಂತ್ರಿಯೊಂದಿಗೆ ಸಂಪರ್ಕವನ್ನು ಹೊಂದಿರುತ್ತಾರೆ.

ಶೈಕ್ಷಣಿಕ ಸ್ತರಗಳನ್ನು ವಿಂಗಡಿಸಿದರೆ ಶಿಕ್ಷಣ ಮಂತ್ರಿಗಳ ನಂತರ ಅವರ ಕಾರ್ಯದರ್ಶಿಯು, ಶೈಕ್ಷಣಿಕ ಆಡಳಿತದ ದಿನನಿತ್ಯದ ವ್ಯವಹಾರವನ್ನು ನೋಡಿಕೊಳ್ಳುತ್ತಾರೆ. ಆಡಳಿತಕ್ಕೆ ಸಂಬಂಧಿಸಿದಂತೆ ನಿಯಮಾವಳಿಗಳ ರೂಪಣೆಯು ಜವಾಬ್ದಾರಿಯು ಇವರದೆ ಆಗಿರುತ್ತದೆ. ಇವರು ಶಿಕ್ಷಣ ಮಂತ್ರಿಗಳಿಗೆ ಆಪ್ತ ಕಾರ್ಯದರ್ಶಿಯಾಗಿರುತ್ತಾರೆ. ಎಲ್ಲ ಕ್ಷೇತ್ರಗಳಿಗೆ ಕಾರ್ಯಗಳಿಗೆ ಸಂಬಂಧಿಸಿದಂತೆ ಶಿಕ್ಷಣ ಮಂತ್ರಿಗಳಿಗೆ ಸಹಾಯವನ್ನೊದಗಿಸುತ್ತಾರೆ. ಇವರು ಚೈನಿನ ಕೊಂಡಿಯಂತಿದ್ದು ನಿಯಮಾವಳಿಗಳನ್ನು ರೂಪಿಸುವಾಗ ಶಾಸನಸಭೆ (Legislative) ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ (Commissioner for Public Instruction) ಇವರಿಗೆ ಮಧ್ಯವರ್ತಿಯಾಗಿರುತ್ತಾರೆ.

ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಶೈಕ್ಷಣಿಕ ನಿರ್ದೇಶಕರಿಂದ ಆಡಳಿತಾತ್ಮಕ ಸಹಾಯವನ್ನು ಪಡೆಯುತ್ತಾರೆ. ಉದಾ: ನಿರ್ದೇಶಕರು (ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ) ಪದವಿ ಪೂರ್ವ ಶಿಕ್ಷಣ, ಪ್ರೌಢ ಶಿಕ್ಷಣ, ಅಲ್ಪಸಂಖ್ಯಾತ ಶಿಕ್ಷಣ ಇತ್ಯಾದಿ, ವಿಭಾಗೀಯ ಮಟ್ಟದಲ್ಲಿ ಇನ್ನೊಬ್ಬ ಪದನಿಮಿತ್ತ ಮತ್ತು ವಿಭಾಗೀಯ ಕಾರ್ಯದರ್ಶಿಗಳು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ನಿರ್ದೇಶಕರಿದ್ದು, ಸದ್ಯದ ಕರ್ನಾಟಕ ಅಲ್ಪ ಸಂಖ್ಯಾತ ಶಿಕ್ಷಣ ಶೈಕ್ಷಣಿಕ ವ್ಯವಸ್ಥೆಯಲ್ಲಿ ನಾಲ್ಕು ವಿಭಾಗಗಳಿವೆ. ಅವುಗಳು–ಬೆಂಗಳೂರು, ಮೈಸೂರು, ಗುಲಬರ್ಗಾ ಮತ್ತು ಬೆಳಗಾಂವ. ಈ ಪದ ನಿಮಿತ್ತ ಸಹ ನಿರ್ದೇಶಕರು ಮತ್ತು ವಿಭಾಗೀಯ ಕಾರ್ಯದರ್ಶಿಗಳು ಕರ್ನಾಟಪ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಸಹ ನಿರ್ದೇಶಕರು ವಿಭಾಗೀಯ ಮಟ್ಟದಲ್ಲಿ ಸಂಪೂರ್ಣ ಅಧಿಕಾರವನ್ನು ಪಡೆದಿರುತ್ತಾರೆ. ಇವರ ಮೂಲಕ ವಿಭಾಗೀಯ ಮಟ್ಟದಲ್ಲಿ ಶೈಕ್ಷಣಿಕ ಸಕಲ ಕಾರ್ಯಗಳು ಸಮಗ್ರವಾಗಿ, ಸಾಂಗೋಪಾಂಗವಾಗಿ ನೆರವೇರುತ್ತದೆ. ಸಕಲ ಕಾರ್ಯ ಕಲಾಪಗಳನ್ನು ಇವರು ನಿಗಾವಹಿಸಿ ನಿರ್ದೇಶಿಸುತ್ತಾರೆ.

ಇನ್ನು ಜಿಲ್ಲಾ ಮಟ್ಟದಲ್ಲಿ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆಯನ್ನು ಹೊಂದಿದ್ದು, ಇವರು ಜಿಲ್ಲೆಯ ಸಮಗ್ರ ಆಡಳಿತದ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಇವರು ಸಹ ನಿರ್ದೇಶಕರ ಮಾರ್ಗದರ್ಶನದಲ್ಲಿ ತಮ್ಮ ಕಾರ್ಯ ಕಲಾಪಗಳನ್ನು ನಿರ್ವಹಿಸುತ್ತಾರೆ. ಇವರು ನೇರವಾಗಿ ಶಾಲೆಯಲ್ಲಿಯ ಶಿಕ್ಷಣದ ಸಂಬಂಧವುಳ್ಳವರಾಗಿರುತ್ತಾರೆ. ಇವರು ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವ ಶಾಲೆಗಳ ತಪಾಸಣೆಗಾಗಿ ಶಿಕ್ಷಣ ಅಧಿಕಾರಿ ಮತ್ತು ವಿಷಯ ಪರಿಣಿತರನ್ನು ಹೊಂದಿರುತ್ತಾರೆ. ಇವರು ತಮ್ಮ ಕಾರ್ಯ ವ್ಯಾಪ್ತಿಯಲ್ಲಿ ಬರುವ ಪ್ರಾಥಮಿಕ, ಮಾಧ್ಯಮಿಕ, ಪದವಿಪೂರ್ವ ಶಿಕ್ಷಣದ ಆಡಳಿತವನ್ನೆಲ್ಲಾ ನಿಭಾಯಿಸುವ ಮುಖ್ಯ ಅಧಿಕಾರಿಯಾಗಿರುತ್ತಾರೆ. ಇವರೊಂದಿಗೆ ಇವರ ಸಿಬ್ಬಂದಿ ವರ್ಗವು ಸಹ ಶೈಕ್ಷಣಿಕ ಆಡಳಿತದ ವ್ಯವಸ್ಥೆಗೆ ಬದ್ಧವಾಗಿರುತ್ತದೆ.

ಇನ್ನು ತಾಲ್ಲೂಕಾ ಮಟ್ಟದಲ್ಲಿ ಸಹ ಶಿಕ್ಷಣಾಧಿಕಾರಿಯೊಬ್ಬರಿದ್ದು, ಪ್ರತಿ 24 ಶಾಲೆಗಳಿಗೊಬ್ಬರಂತೆ ಶಿಕ್ಷಣ ಸಂಯೋಜಕರಿದ್ದು ಕ್ಷೇತ್ರ ಶಿಕ್ಷಣಾಧಿಕಾರಿಗೆ ಸಹಾಯ ಮಾಡುತ್ತಾರೆ.

ಒಟ್ಟಿನಲ್ಲಿ ಇಡೀ ರಾಜ್ಯ ಶಿಕ್ಷಣ ಆಡಳಿತವನ್ನು ವಿವಿಧ ಭಾಗಗಳಾಗಿ ವಿಂಗಡಿಸಿದ್ದರೂ ಎಲ್ಲ ವಿಭಾಗಗಳ ಆಡಳಿತವೆಲ್ಲವೂ ಶಿಕ್ಷಣ ಸಚಿವಾಲಯದ ಮುಖಾಂತರ ಶಿಕ್ಷಣ ಮಂತ್ರಿಗೆ ಹೊಣೆಯಾಗಿರುತ್ತದೆ. ಅಪ್ರತ್ಯಕ್ಷವಾಗಿ ರಾಜ್ಯಪಾಲರ ಅಡಿಯಲ್ಲಿಯೇ ಕಾರ್ಯನಿರ್ವಹಸಿದಂತೆ.

**ಕರ್ನಾಟಕ ರಾಜ್ಯ ಸರಕಾರದ ಶಿಕ್ಷಣ ಇಲಾಖೆಯ ಅಧಿಕಾರಿ ವರ್ಗ**

| ಕ್ರ.ಸಂ. | ಖಾತೆ | ಕಾರ್ಯಗಳು |
|---|---|---|
| 1 | ಶಿಕ್ಷಣ ಮಂತ್ರಿಗಳು (Minister of Education) | ರಾಜ್ಯ ಶಿಕ್ಷಣ ಖಾತೆಗೆ ಸಂಬಂಧಪಟ್ಟ |
| 2 | ಕಾರ್ಯದರ್ಶಿಗಳು (Secretary) | ಶಿಕ್ಷಣ ಮಂತ್ರಿಗಳಿಗೆ ಸಲಹಾಗಾರರಾಗಿ ಕಾರ್ಯನಿರ್ವಹಿಸುತ್ತಾರೆ |
| 3 | ಆಯುಕ್ತರು (C.P.I.) | ಶೈಕ್ಷಣಿಕ ಆಡಳಿತ ಯಂತ್ರದ ರೂವಾರಿ |
| 4 | ಸಹ ನಿರ್ದೇಶಕರು (J.D.P.I) ಮತ್ತು ವಿಭಾಗೀಯ ಕಾರ್ಯದರ್ಶಿಗಳು ಕ.ಪ್ರೌ.ಶಿ.ಪ.ಮಂ | ವಿಭಾಗೀಯ ಮಟ್ಟದ ಶೈಕ್ಷಣಿಕ ಆಡಳಿತದ ಕಾರ್ಯವ್ಯಾಪ್ತಿಯನ್ನು ಹೊಂದಿದ್ದಾರೆ |
| 5 | ಉಪನಿರ್ದೇಶಕರು (D.D.P.I) | ಜಿಲ್ಲೆಯ ಶಿಕ್ಷಣಾಧಿಕಾರಿಯಾಗಿದ್ದಾರೆ. |
| 6 | ಶಿಕ್ಷಣಾಧಿಕಾರಿಗಳು (E.O.S) | ಪ್ರೌಢ ಶಾಲೆಗಳ ತನಿಖೆ ಮತ್ತು ಮೇಲ್ವಿಚಾರಣೆ |
| 7 | ಶಿಕ್ಷಣಾಧಿಕಾರಿಗಳು (E.Os) | ತಾಲ್ಲೂಕಾ ಮಟ್ಟದ ಶಿಕ್ಷಣದ ಮೇಲ್ವಿಚಾರಣೆ |

ಈ ಮೇಲಿನ ವ್ಯಕ್ತಿಗಳು ಪ್ರತ್ಯಕ್ಷವಾಗಿ ಕ್ರಿಯಾತ್ಮಕವಾಗಿ ಶೈಕ್ಷಣಿಕ ಆಡಳಿತದಲ್ಲಿ ಪಾಲುದಾರರಾಗಿರುತ್ತಾರೆ ಅಥವಾ ಭಾಗಿಯಾಗಿರುತ್ತಾರೆ. ಆದರೆ ರಾಜ್ಯಪಾಲರು ಮುಖ್ಯ ಮಂತ್ರಿಗಳು ಅಪ್ರತ್ಯಕ್ಷವಾಗಿ ಸಕಲ ಕಾರ್ಯಗಳನ್ನು ವೀಕ್ಷಿಸುತ್ತಾರೆ. ಅಲ್ಲದೆ ಅವಶ್ಯಕತೆ ಕಂಡು ಬಂದಲ್ಲಿ ಮಾರ್ಗದರ್ಶನವನ್ನಿಯುತ್ತಾರೆ.

ಈಗ ಪ್ರತಿಯೊಂದು ವ್ಯಕ್ತಿಯ ಕಾರ್ಯ ವ್ಯಾಪ್ತಿಯನ್ನು ತಿಳಿದುಕೊಳ್ಳೋಣ

1. ರಾಜ್ಯಪಾಲರು

ರಾಜ್ಯಪಾಲರು ಸಂವಿಧಾನಾತ್ಮಕ ಅಧಿಪತ್ಯವನ್ನು ಪಡೆದಿದ್ದು ಇವರ ಶಿರೋನಾಮೆಯ ಅಡಿಯಲ್ಲಿ ರಾಜ್ಯ ಸರಕಾರವು ತನ್ನ ಪ್ರತಿಯೊಂದು ಕಾರ್ಯವನ್ನು ನಿರ್ವಹಿಸಬೇಕಾಗುತ್ತದೆ. ಇವರು ಕೇಂದ್ರ ಸರಕಾರದ ಪ್ರತಿನಿಧಿಯಾಗಿದ್ದು ರಾಷ್ಟ್ರಾಧ್ಯಕ್ಷರಿಂದ ನೇಮಿಸಲ್ಪಟ್ಟಿರುತ್ತಾರೆ. ಇದು ರಾಜಕೀಯ ನೇಮಕಾತಿಯಾಗಿದೆ. ಇವರು ಕೇಂದ್ರ ಹಾಗೂ ರಾಜ್ಯ ಸರಕಾರಗಳ ನಡುವೆ ಕೊಂಡಿಯಂತೆ ವರ್ತಿಸುತ್ತಿದ್ದು, ರಾಜ್ಯದಾಡಳಿತದ ಪ್ರತಿಯೊಂದು ಘಟನೆಗಳ ವರದಿಯನ್ನು ಕೇಂದ್ರ ಸರಕಾರಕ್ಕೆ ಒಪ್ಪಿಸುತ್ತಾರೆ. ಇವರು ಕೆಲವು ಕಾರ್ಯದರ್ಶಿಗಳು ಹೊಂದಿದ್ದು ಈ ಕಾರ್ಯದರ್ಶಿಗಳು ಅವರಿಗೆ ಶೈಕ್ಷಣಿಕ ಹಾಗೂ ಆಡಳಿತಾತ್ಮಕ ಸಲಹೆ ಮತ್ತು ಮಾರ್ಗದರ್ಶನಗಳನ್ನು ಕೊಡುತ್ತಾರೆ.

2. ಮುಖ್ಯ ಮಂತ್ರಿಗಳು

ಇವರು ಮಂತ್ರಿ ಮಂಡಳದ ಪ್ರತಿನಿಧಿಯಾಗಿದ್ದು, ಪ್ರತಿಯೊಂದು ಮಂತ್ರಿ ಮಂಡಳದ ಸಭೆಗಳಲ್ಲಿ ಅಧ್ಯಕ್ಷರ ಸ್ಥಾನವನ್ನು ನಿರ್ವಹಿಸುತ್ತಾರೆ. ಶಿಕ್ಷಣ ಮಂತ್ರಿಗಳೊಂದಿಗೆ ಇವರು ಶೈಕ್ಷಣಿಕ ಆಡಳಿತಕ್ಕೆ ಜವಾಬ್ದಾರರಾಗಿದ್ದಾರೆ. ಇವರು ರಾಜ್ಯದಲ್ಲಿ ನಡೆಯುವ ಪ್ರತಿಯೊಂದು ಶೈಕ್ಷಣಿಕ ಚಟುವಟಿಕೆಗಳ ವರದಿಯನ್ನು

ರಾಜ್ಯಪಾಲರಿಗೆ ತಲುಪಿಸಬೇಕಾಗುತ್ತದೆ. ಇವರು ರಾಜ್ಯಪಾಲರ ಮುದ್ರೆಯಡಿಯಲ್ಲಿ ಸಕಲ ಕಾರ್ಯಗಳನ್ನು ನಿರ್ವಹಿಸುತ್ತಾರೆ.

3. ಶಿಕ್ಷಣ ಮಂತ್ರಿಗಳು

ರಾಜ್ಯದ ಶಿಕ್ಷಣ ಇಲಾಖೆಗೆ ಸಂಬಂಧಪಟ್ಟ ಎಲ್ಲಾ ಕಾರ್ಯ ಚಟುವಟಿಕೆಗಳಿಗೆ ರಾಜ್ಯದ ಶಿಕ್ಷಣ ಮಂತ್ರಿಗಳೆ ಪ್ರಮುಖ ಅಧಿಕಾರಿಗಳಾಗಿದ್ದಾರೆ. ಶಿಕ್ಷಣ ಮಂತ್ರಿಯು ಜನರಿಂದ ಆಯ್ದ ಪ್ರತಿನಿಧಿಯಾಗಿದ್ದು ರಾಜ್ಯದ ಶಾಸಕಾಂಗಕ್ಕೆ ಬದ್ಧರಾಗಿರುತ್ತಾರೆ. ಕೇಂದ್ರದ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯ ಅಡಳಿತದ ನಿಯಮಾವಳಿಗಳನ್ನು, ಪ್ರವೇಶ ಹಾಗೂ ತೇರ್ಗಡೆಯ ನಿಯಮಾವಳಿಗಳೂ. ಸೇವಾ ನಿಯಮಾವಳಿಗಳು, ಪಠ್ಯ ಪುಸ್ತಕಗಳ ರಚನೆ ಮುಂತಾದವುಗಳ ರಚನೆಯ ಜವಾಬ್ದಾರಿಯನ್ನು ಹೊಂದಿದ್ದು ಅಲ್ಲದೆ ಅವುಗಳ ಪ್ರಾಯೋಗಿಕ ಅನ್ವಯಕ್ಕೂ ಜವಾಬ್ದಾರರಾಗಿರುತ್ತಾರೆ.

**ಶೈಕ್ಷಣಿಕ ಅಧ್ಯಯನಗಳ ಅಗತ್ಯ**

ಶಿಕ್ಷಕರ ಬಗೆಗೆ ಈ ಸಮಾಜಕ್ಕೆ ಅತಿಯಾದ ನಂಬಿಕೆ ಮತ್ತು ಶಿಕ್ಷಕರಿಂದ ಅತಿಯಾದ ನಿರೀಕ್ಷೆ ಇದೆ ಎಂಬುದನ್ನು ಈಗಾಗಲೇ ಚರ್ಚಿಸಿದೆವು. ಈ ನಿರೀಕ್ಷೆಗಳ ಭಾರದಲ್ಲಿ ಶಿಕ್ಷಕರು ನಲುಗಿಹೋಗುತ್ತಿದ್ದಾರೆಯೇ ಎಂಬ ಭಾವನೆ ಬಂದರೆ ತಪ್ಪಲ್ಲ. ಒಂದು ಕಡೆಯಿಂದ ಸಮಾಜದ ನಿರೀಕ್ಷೆ, ಇನ್ನೊಂದು ಕಡೆಯಿಂದ ಉತ್ತಮ ಗುಣಮಟ್ಟದ ಶಿಕ್ಷಣದ ಬಗೆಗಿನ ಸರಕಾರದ ಭರವಸೆ ಇದೆಲ್ಲವೂ ನಿಜಕ್ಕೂ ಇಂದು ಶಿಕ್ಷಕರ ಜವಾಬ್ದಾರಿಯನ್ನು ಹೆಚ್ಚಿಸಿದೆ. ಆಧುನಿಕತೆಯ ನಾಗಾಲೋಟಕ್ಕೆ ಮಕ್ಕಳು ಓಡಲು ಶಕ್ತರಾಗುವ ರೀತಿಯಲ್ಲಿ ಅವರನ್ನು ಸಜ್ಜುಗೊಳಿಸಲು ಶಿಕ್ಷಕರು ತಯಾರಾಗಬೇಕಾಗಿದೆ. ದಿನದಿಂದ ದಿನಕ್ಕೆ ಬದಲಾಗುತ್ತಿರುವ ಶಿಕ್ಷಣದ ಬೇಡಿಕೆ ಮತ್ತು ಪರಿಣಾಮಕಾರಿ ಬೊಧನೆಗೆ ಅಗತ್ಯವಾದ ವಿಧಾನ ಇದೆಲ್ಲವೂ ಶಿಕ್ಷಕರ ಮುಂದಿರುವ ಸವಾಲುಗಳು. ಆದ್ದೇಗೋ ಏನೋ ಒಂದಷ್ಟು ಕಷ್ಟಪಟ್ಟು ಖಾಸಗಿ ಶಾಳೆಗಳು ಹೆಚ್ಚು ಫಲಿತಾಂಶ ತರುವಾಗ ಸರಕಾರಿ ಶಾಲೆಗಳು ಮೂಕಸಾಕ್ಷಿಯಾಗಿ ನಿಂತು ನೋಡಲು ಸಾಧ್ಯವಿಲ್ಲ. ಹಾಗಾಗಿರುವುದರಿಂದಲೇ ಹೆಚ್ಚು ಪ್ರತಿಭಾವಂತರನ್ನು, ಹೆಚ್ಚು ತರಬೇತಾದ ಶಿಕ್ಷಕ ಸಮೂಹವನ್ನು ಹೊಂದಿರುವ ಸರಕಾರಿ ಶಾಲೆಗಳು ಖಾಸಗಿ ಶಾಳೆಗಳ ಮುಂದೆ ಮಂಡಿಯೂರಬೇಕಾಗಿ ಬಂದಿರುವುದು. ಖಾಸಗಿ ಶಾಲೆಗಳ ಬಗೆಗೆ ಜನರಲ್ಲಿ ಭ್ರಮೆ ಹುಟ್ಟಿಕೊಂಡಿರುವುದು. ಆದ್ದರಿಂದ ನಮ್ಮ ಆಸ್ತಿತ್ವವನ್ನು ನಮ್ಮ ಸಾಮರ್ಥ್ಯವನ್ನು ಪ್ರತಿಭೆಯನ್ನು ಪ್ರಸ್ತುತಪಡಿಸಬೇಕಾಗಿದೆ. ಜನರ ನಂಬಿಕೆಯನ್ನು ಉಳಿಸಬೇಕಾಗಿದೆ. ಇವೆಲ್ಲವೂ ಸಾಧ್ಯವಾಗಬೇಕಾದರೆ ಶಿಕ್ಷಕರು ಆಧುನಿಕ ಶಿಕ್ಷಣದ ಒಳನೋಟಗಳು, ಬೇಡಿಕೆಗಳು, ಮಕ್ಕಳ ಮನಸ್ಥಿತಿ, ಬದಲಾವಣೆಗಳನ್ನು ಅಂತರ್ಗತಗೊಳಿಸಿಕೊಳ್ಳಬೇಕು. ಸವಾಲುಗಳನ್ನು ಎದುರಿಸಲು ಸಿದ್ಧರಾಗಬೇಕು. ಅದಕ್ಕೆ ಬೇಕಾದ ಶೈಕ್ಷಣಿಕ ಅಧ್ಯಯನಗಳನ್ನು ಕ್ರೀಯಾ ಸಂಶೋಧನೆಗಳನ್ನು ಮಾಡಲೇಬೇಕಾಗಿದೆ.

ಇದಕ್ಕೆ ಇಂದು ಇಲಾಖೆಯಿಂದಲೂ ಬೇಕಾದಷ್ಟು ಅವಕಾಶಗಳಿವೆ. ಸರ್ವ ಶಿಕ್ಷಣ ಅಭಿಯಾನದ ಮೂಲಕ ಇಂತಹದ್ದಕ್ಕೆಲ್ಲಾ ವ್ಯವಸ್ಥೆಯಿದೆ. ಅಧ್ಯಯನ, ಸಂಶೋಧನೆ ಎಂದರೆ ಅದೇನೋ ದೊಡ್ಡ ಅಸಾಮಾನ್ಯ ಸಂಗತಿ ಎನ್ನುವ ಯೋಚನೆ ಕೆಲವರಲ್ಲಿದೆ. ಆದರೆ ಹಾಗೆ ತಿಳಿದುಕೊಳ್ಳಬೇಕಾಗಿಲ್ಲ. ಸಣ್ಣ ಸಣ್ಣ ಅಧ್ಯಯನಗಳನ್ನು ನಡೆಸಬಹುದು. ಉದಾಹರಣೆಗೆ ಒಂದು ಶಾಲೆಯ ಪರೀಕ್ಷೆಯಲ್ಲಿ ಎಲ್ಲಾ ಮಕ್ಕಳು ಉತ್ತರಿಸಲು ತಡಕಾಡಿದ ಸಮಾನ ವಿಷಯ ಅಥವಾ ಸಮಾನ ಸ್ವರೂಪದ ಪ್ರಶ್ನೆ ಇದೆಯೆ? ಎಂಬುದನ್ನೇ

ಒಂದು ಅಧ್ಯಯನವಾಗಿ ತೆಗೆದುಕೊಳ್ಳಬಹುದು. ಆ ಮೂಲಕ ಆ ಶಾಲೆಯಲ್ಲಿನ ಒಂದು ಸಾಮಾನ್ಯ ಕಲಿಕಾ ಸಮಸ್ಯೆಯನ್ನು ಪರಿಹರಿಸಲು ಬೇಕಾದ ಕಾರ್ಯತಂತ್ರ ರೂಪಿಸಲು ಸಹಕಾರಿಯಾಗುತ್ತದೆ.

ಒಂದು ಊರಿನಲ್ಲಿ ಬರುವ ಸಾಮಾನ್ಯ ಖಾಯಿಲೆಗಳ ಬಗೆಗೆ ಅರ್ಥ ಮಾಡಿಕೊಂಡರೆ ಪರಿಸರ ವಿಜ್ಞಾನ ಪಾಠಗಳಲ್ಲಿ ಅದೇ ಉದಾಹರಣೆಯಾಗಿ ಬಳಸಿಕೊಂಡು ಮಕ್ಕಳಲ್ಲಿ ಆರೋಗ್ಯದ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಬಹುದು. ಒಂದು ಕಠಿಣವಾದ ವಿಷಯವನ್ನು ನಿಭಾಯಿಸಲು ಕಂಡುಕೊಂಡ ಪರಿಸರ ಶಾಲೆಗಳ ಪ್ರಯತ್ನವನ್ನೇ ಒಂದು ಅಧ್ಯಯನ ವಿಷಯವಾಗಿ ಬಳಸಿಕೊಳ್ಳಬಹುದು. ಒಂದು ಸ್ಪಷ್ಟವಾದ ಉದ್ದೇಶ ಗುರಿಯೊಂದಿಗೆ ಕಾರ್ಯಪ್ರವೃತ್ತವಾದರೆ ಇವೆಲ್ಲವೂ ಸಾಧ್ಯ. ಬಹಳಷ್ಟು ಬಾರಿ ಅನಿಸುವುದೆಂದರೆ ಇದೆಲ್ಲಾ ಮಾಡಬಹುದು. ಆದರೆ ಇದಕ್ಕೆ ಸಮಯ ಎಲ್ಲಿ? ಇರುವ ಪಾಠ ಮುಗಿಸಲು ಸಮಯ ಸಾಕಾಗುವುದಿಲ್ಲ ಎಂಬ ಚಿಂತನೆ. ಆದರೆ ಸಮಯದ ಅಭಾವ ಖಂಡಿತಾ ಬರಲಾರದು. ಇದನ್ನು ಬೋಧನಾ ಪ್ರಕ್ರಿಯೆಯ ಆಚೆಗಿನ ವಿಷಯ ಎಂದರೆ ಸಮಯದ ತಾಪತ್ರಯ ಬರುತ್ತದೆ. ಆದರೆ ಇದನ್ನೂ ಬೊಧನಾ ಪ್ರಕ್ರಿಯೆಯ ಭಾಗವಾಗಿ ಪರಿಗಣಿಸಿದರೆ ಸಮಯದ ಅಭಾವ ಬರಲಾರದು. ಇದರ ಮಹತ್ವವನ್ನು ಕಂಡುಕೊಳ್ಳಬೇಕಷ್ಟೇ. ಶಿಕ್ಷಕರಿಗೆ ಇದು ಸಾಧ್ಯ. ಸಮಯದ ಸೂಕ್ತ ವಿನ್ಯಾಸದ ಜೊತೆಗೆ ಇದು ತನ್ನ ಬೊಧನೆಯನ್ನು ಸುಗಮಗೊಳಿಸಲು ಸೂಕ್ತ ಎಂಬುದು ಅರ್ಥಮಾಡಿಕೊಂಡರೆ ಸಾಕು. ಸಾಗುವ ಮನಸ್ಸು ಮಾಡಿದರೆ ದಾರಿಗಳು ನೂರಾರು ಸಿಗುತ್ತವೆ.

ಶಿಕ್ಷಕರು ಬೆಳೆಯಲು ತಮ್ಮನ್ನು ಸಂಪನ್ಮೂಲಗೊಳಿಸಿಕೊಳ್ಳಲು ಇಂದು ಬೇಕಾದಷ್ಟು ವ್ಯವಸ್ಥೆಗಳಿವೆ. ಇಲಾಖೆಯೇ ಶಿಕ್ಷಕರನ್ನು ಹೆಚ್ಚು ಸಂಪನ್ಮೂಲಗೊಳಿಸುವುದಕ್ಕಾಗಿ ಹತ್ತು ಹಲವು ತರಬೇತಿಗಳನ್ನು ಹಮ್ಮಿಕೊಳ್ಳುತ್ತಿದೆ. ಕೆಲವೊಮ್ಮೆ ಈ ತರಬೇತಿಗಳು ಅತಿಯಾಯ್ತು ಎನಿಸಿಬಿಡುತ್ತದೆ. ಇಲಾಖೆ ರಜೆಯಲ್ಲೂ ಬಿಡದೆ ತರಬೇತಿಗಳನ್ನು ನೀಡುತ್ತಿದೆ. (ಹಾಗೆ ನೋಡಿದರೆ ರಜೆ ಇರುವುದೇ ಶಿಕ್ಷಕರು ಬೆಳೆಯುವುದಕ್ಕಿರುವ ಅವಕಾಶವಾಗಿ ಬೇರಾವುದೇ ಇಲಾಖೆಯಲ್ಲೂ ಇರದ ಈ ದೀರ್ಘ ಅವಧಿಯ ರಜೆ ಇರುವುದು ಸುಮ್ಮನೆ ಕಾಲಹರಣಕ್ಕಾಗಿ ಅಲ್ಲ. ಹೊಸ ಶೈಕ್ಷಣಿಕ ವರ್ಷ ಆರಂಭವಾಗುವಾಗ ಮಕ್ಕಳನ್ನು ಹೆಚ್ಚು ಹೊಸತನದಿಂದ ಅಹ್ವಾನಿಸಲು ಮಾಡಬೇಕಾಗಿರುವ ಸಿದ್ಧತೆಗಾಗಿ ತರಬೇತಿ ಪಡೆದೋ, ಓದಿಯೋ ಹೆಚ್ಚು ಹೆಚ್ಚು ಮಾಹಿತಿಗಳನ್ನು ಪಡೆದು ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದಲು, ಹೊಸ ವಿಧಾನಗಳನ್ನು ಯೋಜಿಸಿ ಆ ಮೂಲಕ ತರಗತಿಗಳಿಗೆ ಹೊಸತನ ತುಂಬಲು) ಎಲ್ಲಾ ತರಬೇತಿಗಳು ಒಂದೇ ರೀತಿಯಿದೆ. ಇದನ್ನು ಯಾಕಾದರೂ ನೀಡುತ್ತಾರೋ ಎಂಬ ಭಾವನೆ ಹಲವು ಶಿಕ್ಷಕರ ಮನದಲ್ಲಿ ಮೂಡಿರಲೂ ಸಾಕು. ಆದರೆ ತರಬೇತಿ ಹೆಚ್ಚು ಇದ್ದಷ್ಟೂ ನಮ್ಮ ಜ್ಞಾನ ಹೆಚ್ಚಾಗುತ್ತದೆ. ಹೊಸ ಅಂಶಗಳು ಲಭಿಸುತ್ತದೆ. ಕೆಲವೊಮ್ಮೆ ಹತ್ತಾರು ತರಬೇತಿಗಳನ್ನು ಒಬ್ಬರೇ ನೀಡುವಾಗ ಏಕತಾನತೆ ಬರುತ್ತದೆ. ಎಲ್ಲಾ ತರಬೇತಿಗಳು ಒಂದೇ ತರ ಕಾಣತೊಡಗುತ್ತದೆ. ಆದರೆ ಒಂದೇ ಆಗಿರುವುದಿಲ್ಲ. ಖಂಡಿತವಾಗಿಯೂ ಭೀನ್ನವಾಗಿರುತ್ತದೆ. ಒಂದು ವೇಳೆ ಹಾಗನಿಸಿದರೆ ಬದಲಾವಣೆ ಕೇಳಲು, ತಮಗೆ ಯಾವ ವಿಷಯದಲ್ಲಿ ಯಾವ ವಲಯದಲ್ಲಿ ಮಾಹಿತಿ ಬೇಕು ಎಂದು ಕೇಳಲು ಶಿಕ್ಷಕರು ಮುಂದಾಗಬೇಕು. ತರಬೇತಿ ಬೇಡ ಎನ್ನುವುದಕ್ಕಿಂತ ತಮಗೆ ಬೇಕಾದ ತರಬೇತಿಗಳನ್ನು ಪಡೆಯುವುದು ಅಗತ್ಯವಾಗಿದೆ. ಅಗತ್ಯಗಳಿಗೆ ಅನುಗುಣವಾಗಿ ಆಯ್ಕೆಗೆ ಒತ್ತು ಕೊಡಬೇಕು.

ತರಬೇತಿ ಮಾತ್ರವಲ್ಲ, ಮಾಹಿತಿ ಪಡೆಯಲು ಬೇಕಾದಷ್ಟು ಪುಸ್ತಕಗಳೂ ದೊರೆಯುತ್ತವೆ. ಅಂತರ್ಜಾಲ ಬಳಸುವವರಿಗಂತೂ ಶೈಕ್ಷಣಿಕ ಮಾಹಿತಿಗೆ ಯಾವತ್ತೂ ಕೊರತೆಯಾಗುವುದಿಲ್ಲ. ಅಲ್ಲಿ ಪರಿಕಲ್ಪನಾತ್ಮಕವಾಗಿ, ಶೈಕ್ಷಣಿಕವಾಗಿ, ವಿಧಾನಾತ್ಮಕವಾಗಿ ತಿಳಿದುಕೊಳ್ಳುವ ಅಸಂಖ್ಯಾತ ಮಾಹಿತಿಗಳಿವೆ. ಕ್ಷೇತ್ರ ಸಂಪನ್ಮೂಲ ಕೇಂದ್ರಗಳಲ್ಲಿ ಅಂತರ್ಜಾಲದ ಸೌಕರ್ಯಗಳಿವೆ. ಸಮಯ ಸಿಕ್ಕಿದಾಗ ಅಥವಾ ತರಬೇತಿಗೆ ಹೋದಾಗ ವಿರಾಮ ಸಮಯದಲ್ಲಿ ಇದನ್ನು ಬಳಸಿಕೊಳ್ಳಬಹುದು. ಹಾಗೆಯೇ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುವ ಸ್ವಯಂ ಸೇವಾ ಸಂಸ್ಥೆಗಳಿದ್ದಲ್ಲಿ ಅಲ್ಲಿ ಬೇಕಾದಷ್ಟು ಮಾಹಿತಿಗಳಿರುತ್ತವೆ. ಉದಾಹರಣೆಗೆ ಚಾಮರಾಜನಗರ ಜಿಲ್ಲೆಯಲ್ಲಿ ವಿದ್ಯಾಂಕುರ (ಭಾರತ ಜ್ಞಾನ ವಿಜ್ಞಾನ ಸಮಿತಿಯ ಒಂದು ಯೋಜನೆ) ಯೋಜನೆಯ ವತಿಯಿಂದ ಜಿಲ್ಲಾ ಸಂಪನ್ಮೂಲ ಕೇಂದ್ರ ನಡೆಯುತ್ತಿದೆ. ಅಲ್ಲಿಗೆ ಹೋದರೆ ಬೇಕಾದಷ್ಟು ಮಾಹಿತಿ ಪಡೆಯಬಹುದು ಶಿಕ್ಷಕರ ಜಾಲಗಳು, ಕರ್ನಾಟಕ ಎಜುಕೇಶನ್ ನೆಟ್ ವರ್ಕನ ಜತೆಗೆ ಸಂಪರ್ಕ ಹೊಂದಿ ಮಾಹಿತಿ ಪಡೆಯಬಹುದು. ನಾನು ಈಗಾಗಲೇ ಹೇಳಿದಂತೆ ಶಿಕ್ಷಕರು ಬೆಳೆಯಬೇಕು, ಇನ್ನಷ್ಟು ಮಾಹಿತಿ ಬೇಕು ಎಂದು ಒಮ್ಮೆ ಆಲೋಚನೆ ಮಾಡಿದರೆ ಮಾಹಿತಿಗಳು ಅವರನ್ನು ಹುಡುಕಿಕೊಂಡು ಬರುತ್ತದೆ ಅದಕ್ಕೆ ಒಂದು ಸಣ್ಣಮಟ್ಟದ ಶ್ರಮ ಮಾತ್ರ ಸಾಕಾಗುತ್ತದೆ.

**ಶಿಕ್ಷಣದ ಬಗೆಗಿನ ಆಶಯ**

**ಸಂವಿಧಾನದಲ್ಲಿ ಶಿಕ್ಷಣದ ಆಶಯ**

ಸಂವಿಧಾನದ ಆಶಯದ ಪ್ರಕಾರ, ಸಂವಿಧಾನ ಜಾರಿಗೆ ಬಂದ ಹತ್ತು ವರ್ಷಗಳೊಳಗಾಗಿ ಭಾರತದ ಎಲ್ಲಾ 14 ವರ್ಷದೊಳಗಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಲಭಿಸಬೇಕಿತ್ತು. ಆದರೆ ಈ ಆಶಯ ಇಂದಿಗೂ ಸಾಧ್ಯವಾಗಿಲ್ಲ ಎನ್ನುವುದು ಸತ್ಯ. ಆದರೆ ಸಂವಿಧಾನ ಜಾರಿಗೆ ಬಂದ ಸಂದರ್ಭದಲ್ಲಿ ಶಿಕ್ಷಣ ಮೂಲಭೂತ ಹಕ್ಕಾಗಿರಲಿಲ್ಲ. ಬದಲಾಗಿ ರಾಜ್ಯ ನಿರ್ದೇಶಕ ತತ್ವದಡಿಯಲ್ಲಿ ಸೇರಿಸಲಾಗಿತ್ತು. (ಪರಿಚ್ಛೇದ 45 ರಾಜ್ಯ ನಿರ್ದೇಶಕ ತತ್ವಗಳು). ಸಂವಿಧಾನ ನಿರ್ದೇಶನ ನೀಡಿದ್ದರೂ, ಶಿಕ್ಷಣ ಮೂಲಭೂತ ಹಕ್ಕಾಗದಿದ್ದುದರಿಂದ ಎಲ್ಲರಿಗೂ ಶಿಕ್ಷಣ ಲಭ್ಯಗೊಳಿಸಲು ಬೇಕಾದಷ್ಟು ಗಮನ ಕೇಂದ್ರಿತವಾಗಿರಲಿಲ್ಲ. ಇದರ ಪರಿಣಾಮವಾಗಿ ಬಹು ಸಂಖ್ಯೆಯಲ್ಲಿ ಮಕ್ಕಳು ಹೊರಗುಳಿದರು. ಆದ್ದರಿಂದ ಶಿಕ್ಷಣವನ್ನು ಮೂಲಭೂತ ಹಕ್ಕಾಗಿಸುವ ನಿಟ್ಟಿನಲ್ಲಿ ಬಹಳಷ್ಟು ಶ್ರಮಗಳು, ಹೋರಾಟಗಳು ನಡೆದು, 2002 ರಲ್ಲಿ ಸಂವಿಧಾನ ತಿದ್ದುಪಡಿಯ ಮೂಲಕ ಶಿಕ್ಷಣವು ಮೂಲಭೂತ ಹಕ್ಕಾಯಿತು. (ಪರಿಚ್ಛೇದ 21ಎ) ಇದರಂತೆ ಇಂದು 6 ರಿಂದ 14 ವರ್ಷದ ಯಾವುದೇ ಮಗುವು ಶಿಕ್ಷಣದಿಂದ ವಂಚಿತವಾಗುವುದೆಂದರೆ ಅದು ಮಗುವಿನ ಮೂಲಭೂತ ಹಕ್ಕಿನ ಉಲ್ಲಂಘನೆಯಾದಂತೆ. ಆದರೆ ಸಂವಿಧಾನ ತಿದ್ದುಪಡಿಯ ಮೂಲಕ ಶಿಕ್ಷಣ ಮೂಲಭೂತ ಹಕ್ಕು ಎಂದು ಪರಿಗಣಿಸಿದ ಆರು ವರ್ಷಗಳ ನಂತರ, ಇಂದು ಕೂಡಾ ಲಕ್ಷಾಂತರ ಮಕ್ಕಳು ಶಿಕ್ಷಣದಿಂದ ಹೊರಗಿದ್ದಾರೆ ಎನ್ನುವುದು ಮಾತ್ರ ಖೇದಕರ.

ನಿಜವಾಗಿ ಸಂವಿಧಾನ ಆಶಯ ಈಡೇರಬೇಕಾದರೆ, ಅದರ ಹೆಚ್ಚಿನ ಜವಾಬ್ದಾರಿ ಶಾಲೆಗಳ, ಶಿಕ್ಷಕರ ಮೇಲೆ ಇದೆ. ಶಿಕ್ಷಕರು ನಿರ್ಮಿಸುವ ಶಾಲಾ ವಾತಾವರಣ, ಕಲಿಕಾ ವಾತಾವರಣ, ಪ್ರೇರಣಾತ್ಮಕ ಪ್ರೋತ್ಸಾಹ ಆ ಪ್ರದೇಶದ ಶಿಕ್ಷಣ ಪ್ರಕ್ರಿಯೆಯಲ್ಲಿ–ಅಭಿವೃದ್ಧಿಯಲ್ಲಿ ಹೆಚ್ಚು ಪ್ರಭಾವ ಬೀರಲು ಸಾಧ್ಯ.

## ಅಧ್ಯಯ ೪:-

## ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಒಂದು ಸ್ಥೂಲ ನೋಟ.

(ಜಿಲ್ಲೆಯ ಜನಸಂಖ್ಯೆ, ಶಾಲೆಗಳ ಅಂಕಿ ಸಂಖ್ಯೆ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರ ಹಾಜರಾತಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಇತರೆ ಖಾಸಗಿ, ಸರ್ಕಾರಿ, ಆಂಗ್ಲ, ಮರಾಠಿ, ಉರ್ದು, ಶಾಲೆಗಳ ಸಂಖ್ಯೆ)

ಶ್ರೀ ಎನ್.ಹೆಚ್ ನಾಗೂರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಲಿಂಗಸೂಗುರು ರಾಯಚೂರ ಜಿಲ್ಲೆ ಇವರು ಬರೆದ ಬೀದರಿನ ಐತಿಹಾಸಿಕ ಬೆಡಗು ಮತ್ತು ಬೀದರಿನ ಭೌಗೋಳಿಕ ಬೆಡಗು ಎಂಬ ಕೃತಿಯಲ್ಲಿ ಬೀದರ ಜಿಲ್ಲೆಯ ಒಂದು ಸ್ಥೂಲ ನೋಟ ಕುರಿತು ಸಂಪೂರ್ಣ ಚಿತ್ರಣ ನೀಡಿದ್ದಾರೆ. ಶೈಕ್ಷಣಿಕವಾಗಿಯೂ ಅಂಕಿ ಅಂಶದೊಂದಿಗೆ ಮಾಹಿತಿ ನೀಡಿದ್ದಾರೆ, ಬೀದರ ಜಿಲ್ಲೆಯು ರಾಜ್ಯದ ಉತ್ತರ ಭಾಗದಲ್ಲಿ ಸ್ಥಾಪಿತವಾಗಿದೆ. ಜಿಲ್ಲೆಯು ಕೇಂದ್ರದಿಂದ ವಾಯುವ್ಯಕ್ಕೆ ಮಹಾರಾಷ್ಟ್ರ ರಾಜ್ಯ ಮತ್ತು ನೈರುತ್ತಯಕ್ಕೆ ಆಂಧ್ರಪ್ರದೇಶ ರಾಜ್ಯಗಳು ಮತ್ತು ದಕ್ಷಿಣಕ್ಕೆ ಗುಲಬರ್ಗಾ ಜಿಲ್ಲೆಯು ಗಡಿಭಾಗಗಳಾಗಿವೆ.

ಜಿಲ್ಲೆಯು ಸಮುದ್ರ ಪಾತಳಿಯಿಂದ 233. ಅಡಿಗಳಷ್ಟು ಮೇಲಿದೆ. ಜಿಲ್ಲೆಯ ಸುಮಾರು 5458 ಚ.ಕಿ.ಮಿ. ಭೂಪ್ರದೇಶದಲ್ಲಿ 2001 ರ ಜನಗಣತಿಯಂತೆ ಒಟ್ಟು 1502996 ಜನಸಂಖ್ಯೆಯನ್ನು ಹೊಂದಿದೆ. ಶೇಕಡಾ 19.55 ದರದಲ್ಲಿ ಜನಸಂಖ್ಯೆ ಬೆಳವಣಿಗೆಯಾಗಿದೆ ಜಿಲ್ಲೆಯಲ್ಲಿ ಲಿಂಗ ಅಂತರದಲ್ಲಿ 1000 ಪುರುಷರಿಗೆ 949 ಸ್ತ್ರೀಯರಿದ್ದಾರೆ. ಜಿಲ್ಲೆಯಲ್ಲಿ ಸಾಕ್ಷರತಾ ಪ್ರಮಾಣವು ರಾಷ್ಟ್ರ ಮತ್ತು ರಾಜ್ಯದ ಪ್ರಮಾಣಕ್ಕಿಂತಲೂ ಕಡಿಮೆ ಅಂದರೆ ಶೇ: 61.98 ಇದೆ. ಔರಾದ, ಬಸವಕಲ್ಯಾಣ, ಭಾಲ್ಕಿ, ಬೀದರ, ಹುಮನಾಬಾದ ಎಂದೆ 5 ಕಂದಾಯ ಪ್ರಕಾರ 30 ಹೋಬಳಿಗಳನ್ನು ಹೊಂದಿದೆ. 900 ಜನವಸತಿ ಹಳ್ಳಿಗಳನ್ನು, 14 ಜನವಸತಿ ರಹಿತ ಗ್ರಾಮಗಳನ್ನು 5 ಪಟ್ಟಣ ಪ್ರದೇಶಗಳನ್ನೂ ಹೊಂದಿದೆ. ಜಿಲ್ಲೆಯು ವರ್ಷಾದಾದ್ಯಂತ ಸಮತೋಲಿತ ಒಣ ಮತ್ತು ತಂಪು ಮಿಶ್ರಿತ ಹವೆಯನ್ನು ಹೊಂದಿರುತ್ತದೆ. ಜಿಲ್ಲೆಯಲ್ಲಿ ಸರಾಸರಿಯಾಗಿ 907 ಮಿ.ಮೀ ರಷ್ಟು ಮಳೆಯಾಗುತ್ತದೆ. ಮಾಂಜರಾ ಮತ್ತು ಕಾರಂಜಾಗಳು ಜಿಲ್ಲೆಯ ಪ್ರಮುಖ ನದಿಗಳು. ಮಹಾರಾಷ್ಟ್ರ, ಆಂದ್ರಪ್ರದೇಶ, ರಾಜ್ಯಗಳ ಮೇರೆಯಲ್ಲಿರುವವರು ಉರ್ದು, ತೆಲುಗು ಮತ್ತು ಮರಾಠಿ ಭಾಷೆಯನ್ನು ಜಿಲ್ಲೆಯಲ್ಲಿ ಮಾತನಾಡುತ್ತಿರುತ್ತಾರೆ.

ಉಳಿದ ಬಹುಸಂಖ್ಯಾತ ಜನರು ಕನ್ನಡ ಮಾತನಾಡುತ್ತಿದ್ದು, ಅವರ ಮಾತೃ ಭಾಷೆ ಕನ್ನಡವಾಗಿದೆ. ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿ ನಂ.9 ಹಾದು ಹೋಗುತ್ತದೆ. ಸುಮಾರು 60 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿಯಿದೆ. ಜಿಲ್ಲೆಯಲ್ಲಿ ಶೇ. 70 ರಷ್ಟು ವ್ಯವಸಾಯವನ್ನು ಅವಲಂಭಿಸಿದ್ದಾರೆ. ಉತ್ತಮ ಫಲವತ್ತಾದ ಕೆಂಪು ಬಣ್ಣ ಮಿಶ್ರಿತ ಭೂಮಿ ಇದೆ. ರಾಜ್ಯ ಆದಾಯಕ್ಕೆ ಅತಿ ಕಡಿಮೆ ಪ್ರಮಾಣದ ಆದಾಯವನ್ನು ಜಿಲ್ಲೆ ಹೊಂದಿದೆ. ಆಧುನಿಕರಣದ ನೀರಿನ ಸೌಲಭ್ಯವನ್ನು ಬಳಸಿಕೊಂಡು ಉದ್ದು, ಸಜ್ಜೆ, ತೊಗರಿ, ಶೇಂಗಾ, ಕಬ್ಬು, ಸೂರ್ಯಕಾಂತಿ, ಜೋಳ, ಗೋಧಿ ಪ್ರಮುಖ ಬೆಳೆಗಳನ್ನು ಜಿಲ್ಲೆಯಲ್ಲಿ ಬೆಳೆಯುತ್ತಾರೆ.

ಬೀದರ ಜಿಲ್ಲೆಯಲ್ಲಿ ಬಿದರಿ ಕುಸುರಿ ಕೆಲಸದಲ್ಲಿ ಜಗತ್ಪ್ರಸಿದ್ಧ ಕೆಲಸಗಾರರು ಇದ್ದಾರೆ. ಬಿದಿರುಗಾರರು ಬಡಿಗರು, ಅಕ್ಕಸಾಲಿಗರು, ಈ ಕಾರ್ಯದವರು ವಂಶಪರಂಪರಾಗತವಾಗಿ ತಮ್ಮ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಜಿಲ್ಲೆಯಲ್ಲಿ ಕಾಣುತ್ತೇವೆ.

Source (BEO Office Report):-

ಜಿಲ್ಲೆಯಲ್ಲಿ ಸರ್ವಶಿಕ್ಷಣ ಅಭಿಯಾನ ಕಾರ್ಯಕ್ರಮವು ಜಾರಿಯಲ್ಲಿದೆ ಮಗುವಿನ ಗುಣಮಟ್ಟದ ಕಲಿಕೆಯನ್ನು ಸಾಧಿಸಲು ಎಲ್ಲರಲ್ಲಿ ಜಾಗೃತಿಯನ್ನು ಮೂಡಿಸಿ, ಎಲ್ಲಾ ಮೂಲಭೂತ ಸೌಕರ್ಯಗಳನ್ನು ಪೊರೈಸಿ ಶಿಕ್ಷಕರಿಗೆ ಮತ್ತು ಮಕ್ಕಳಿಗೆ ಶೈಕ್ಷಣಿಕ ಸೌಲಭ್ಯಗಳನ್ನು ನೀಡಿ ಮಕ್ಕಳನ್ನು ವಿವಿಧ ಕಾರ್ಯಕ್ರಮಗಳ ಮೂಲಕ ಶಾಲೆಗೆ ಕರೆತಂದು ಕಲಿಸಲಾಗುತ್ತಿದೆ. ಶಿಕ್ಷಕರ ಸಾಮರ್ಥ್ಯ, ಬಲವರ್ಧನೆ ಜನಪ್ರತಿನಿಧಿಗಳಿಗೆ (ಎಸ್.ಡಿ.ಎಂ.ಸಿ) ತರಬೇತಿಗಳು ಜನಜಾಗೃತಿ ಕಾರ್ಯಕ್ರಮಗಳಿವೆ. ನಿಗದಿತವಾಗಿ ಶಾಲೆಗೆ ಬರಲು ಪ್ರೋತ್ಸಾಹದಾಯಕ ಕಾರ್ಯಕ್ರಮಗಳಿವೆ. ಕಲಿಕೆಯಲ್ಲಿ ಹಿಂದುಳಿದ ಮಕ್ಕಳಿಗೆ ಪರಿಹಾರ ಭೋದನೆಗೆ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಸಾಮಗ್ರಿ ವಿತರಣೆ, ಗೃಹಆಧಾರಿತ ಶಿಕ್ಷಣ, ಹೆಣ್ಣು ಮಕ್ಕಳಿಗಾಗಿ ಎಸ್.ಪಿ.ಜಿ.ಇ.ಎಲ್ ಯೋಜನೆ ಇಂತಹ ಹಲವಾರು ಕಾರ್ಯಕ್ರಮಗಳನ್ನು ಶಿಕ್ಷಣದ ಸಾರ್ವತ್ರೀಕರಣ ಹಮ್ಮಿಕೊಳ್ಳಲಾಗಿದೆ. ಎಸ್.ಎಸ್.ಎಲ್.ಸಿ. ಫಲಿತಾಂಶದಲ್ಲಿ ಗಣನೀಯ ಸಾಧನೆ ಮಾಡಬೇಕಾಗಿದೆ. ಹಾಗೂ ಪ್ರಯತ್ನದಲ್ಲಿದೆ.

ಶಿಕ್ಷಣ ಕುರಿತು ಆಳವಾಗಿ ಅಧ್ಯಯನ ಮಾಡಿದಾಗ ಶ್ರೀ ಎಸ್.ಎಸ್.ಹಿರೇಮಠ ನಿವೃತ್ತ ಉಪನ್ಯಾಸಕರು ಜೂನ್ 2002 ರ ಜೀವನ ವಿಕಾಸ ಶೈಕ್ಷಣಿಕ ಪತ್ರಿಕೆಯಲ್ಲಿ ಪ್ರಕಟಿಸಿದ ಪ್ರಕಾರ ಶಿಕ್ಷಣದಲ್ಲಿ ಎರಡು ಪ್ರಕಾರಗಳು.

1. **ಪರೋಕ್ಷ ಶಿಕ್ಷಣ**

2. **ಪ್ರತ್ಯಕ್ಷ ಶಿಕ್ಷಣ**

1. ಪರೋಕ್ಷ ಶಿಕ್ಷಣ:- ವಿಶಾಲಾರ್ಥದಲ್ಲಿ ಪರೋಕ್ಷ ಶಿಕ್ಷಣವೇಂದರೆ ಅನೌಪಚಾರಿಕ ಅಥವಾ ಅನುಸಾಂಗಿಕ ಪರೋಕ್ಷ ಶಿಕ್ಷಣ. ಇದು ಜೀವನದುದ್ದಕ್ಕೂ ಅನುಭವದಿಂದ ದೊರೆಯುತ್ತದೆ. ಅಂದರೆ ಜೀವನದಲ್ಲಿಯ ವಿವಿಧ ಅನುಭವಗಳೆಲ್ಲವೂ ಶಿಕ್ಷಣದ ಪ್ರತಿಯೊಂದು ಅನುಭವದಿಂದ ವ್ಯಕ್ತಿಯು ಒಂದಿಲ್ಲೊಂದು ಪಾಠ ಕಲಿಯುತ್ತಾರೆ. ಹಾಗೂ ಮುಂದೆ ಅಂತಹ ಪ್ರಸಂಗಗಳಲ್ಲಿ ಹೆಚ್ಚು ಜಾಣ್ಮೆಯಿಂದ ವರ್ತಿಸುತ್ತಾನೆ. ಶಿಕ್ಷಣವೆಂದರೆ ಜೀವನ. ಈ ದೃಷ್ಟಿಯಿಂದ ನೋಡಿದರೆ ಶಿಕ್ಷಣದ ಅರ್ಥ ವಿಶಾಲವಾಗಿದೆ.

ಅ) 'ಲಾಡ್ಜ' ಎಂಬ ಶಿಕ್ಷಣ ತಜ್ಞನು ಜೀವನವೇ ಶಿಕ್ಷಣ, ಶಿಕ್ಷಣವೇ ಜೀವನ ಎಂದು ಹೇಳಿದ್ದಾನೆ.

ಆ) ಈ ವಿಚಾರವನ್ನೇ ಇನ್ನೊಬ್ಬ ಶಿಕ್ಷಣ ತಜ್ಞ ಎಡ್ಗರ ಧೀಂಗ್ ಎಂಬುವನು ಶಿಕ್ಷಣವು ಜೀವಿಯಿಂದ ಜೀವನವನ್ನೇ ವರ್ಗಾಯಿಸುವಂತಹದು ವ್ಯಕ್ತಿ ತಾನು ಏನಾಗಬೇಕೆಂದು ಬಯಸುತ್ತಾನೋ ಅದಾಗಲಿ ಯಾವುದು ಸಹಾಯ ಮಾಡುತ್ತದೋ ಅಥವಾ ಮನುಷ್ಯ ಯಾವುದನ್ನು ಮಾಡಬಾರದೋ ಅದನ್ನು ಮಾಡದಂತೆ ಯಾವುದು ತಡೆಹಿಡಿಯುತ್ತದೆಯೋ ಅದೇ ಶಿಕ್ಷಣ. ಮಗುವಿನ ವ್ಯಕ್ತಿತ್ವವನ್ನು ರೂಪಿಸಲು ಶಿಕ್ಷಣದ ಪರೋಕ್ಷ ಪ್ರಾತಿನಿಧಿಕ ಸಂಸ್ಥೆಗಳು ತಮ್ಮದೇ ಆದ ಅಗಣಿತ ಪ್ರಭಾವವನ್ನು ಬೀರತಕ್ಕವುಗಳಾಗಿವೆ. ಅವುಗಳ ಭೋದನೆಯೂ ಪರೋಕ್ಷವಾದದ್ದು ಎಂದು ಹೇಳಿದ್ದಾನೆ.

ಉದಾಹರಣೆ:- ತಂದೆ, ತಾಯಿ, ಬಂಧು, ಬಳಗ ಇವರೆಲ್ಲರೂ ಮಗುವಿಗೆ ಭಾಷೆ ಕಲಿಸುವುದರಲ್ಲಿ ಪರೋಕ್ಷವಾಗಿ ಸಹಾಯ ನೀಡವರು ಸಹಚರರು ಆಟ-ಪಾಠಗಳು ಚಲನಚಿತ್ರ ಟಿ.ವಿ.ರೇಡಿಯೋ ಮುಂತಾದವುಗಳು ಪರೋಕ್ಷವಾಗಿ ಮಗುವಿಗೆ ಜ್ಞಾನವನ್ನು ಕೊಡುತ್ತವೆ ಎಂದು ಹೇಳಿದ್ದಾನೆ.

ನಿಜ ಹೇಳಬೇಕೆಂದರೆ ತಾಯಿಯ ಗರ್ಭದಲ್ಲಿಯೇ ಮಗುವಿಗೆ ಶಿಕ್ಷಣ ಪ್ರಾರಂಭವಾಗುತ್ತದೆ. ತಾಯಿಯ ಆಚಾರ, ವಿಚಾರಗಳು, ಆಹಾರ-ವಿಹಾರಗಳು ಮಗುವಿನ ಮೇಲೆ ಬಹಳ ಪರಿಣಾಮ ಬೀರುತ್ತವೆಂಬುದಕ್ಕೆ ಮಹಾಭಾರತದಲ್ಲಿ ಬರುವ ವೀರ ಅಭಿಮನ್ಯುವಿನ ಪಾತ್ರವೇ ಸಾಕ್ಷೀ ಕಾರಣ ಶಿಕ್ಷಕರು ಮತ್ತು ಪಾಲಕರು ಮಗುವಿಗೆ ಪರೋಕ್ಷ ಶಿಕ್ಷಣ ನೀಡುವುದರೊಂದಿಗೆ ಪ್ರತ್ಯಕ್ಷ ಶಿಕ್ಷಣದ ಹೊಳಪುಗಳನ್ನು ನೀಡಬೇಕು. ಇದಲ್ಲದೆ ವ್ಯವಹಾರ ಕುಶಲ ಜ್ಞಾನವನ್ನು ನೀಡಿದರೆ ಮಗುವಿನ ಸರ್ವತೋಮುಖ ಅಭಿವೃದ್ಧಿ ಹೊಂದುವದರಲ್ಲಿ ಸಂದೇಹವಿಲ್ಲ.

ಔಪಚಾರಿಕ ಶಿಕ್ಷಣ:- ಇದು ಪ್ರಜ್ಞಾಪೂರ್ವಕವಾಗಿ ಶಾಲೆಗಳಲ್ಲಿ ನೀಡುವ ಶಿಕ್ಷಣವಾಗಿದೆ ಶಾಲೆಗಳು ಹೆಚ್ಚಾದಂತೆ ಪ್ರತ್ಯಕ್ಷ ಶಿಕ್ಷಣ ಬಂತು ಶಾಲೆಗಳು ಮಕ್ಕಳ ಮೇಲೆ ನೇರವಾದ ನಿರ್ದಿಷ್ಟ ಪ್ರಭಾವವನ್ನು ಬೀರುತ್ತವೆ. ಅವು ಮಕ್ಕಳ ಅಭಿವೃದ್ಧಿಗೆ ಮತ್ತು ಬೆಳವಣಿಗೆಗೆ ನೆರವಾಗುತ್ತದೆ.

ಶಾಲೆಯು ಶಿಕ್ಷಣದ ಪ್ರತ್ಯಕ್ಷ ಪ್ರಾತಿನಿಧಿಕ ಸಂಸ್ಥೆ, ಅದು ನೇರವಾಗಿ ಮತ್ತು ನಿರ್ದಿಷ್ಟವಾಗಿ ಅಲ್ಲದೆ ಸುವ್ಯವಸ್ಥಿತವಾಗಿ ಶಿಕ್ಷಣವನ್ನು ನೀಡುವಂತಹದ್ದಾಗಿದೆ. ಶಿಕ್ಷಣದ ಈ ರೀತಿಯ ಪ್ರತ್ಯಕ್ಷ ಪ್ರಾತಿನಿಧಿಕ ಸಂಸ್ಥೆ ಇಲ್ಲದಿದ್ದಲ್ಲಿ ಈಗಿನ ಕಲುಷಿತ ವಾತಾವರಣದಲ್ಲಿ ಮತ್ತು ಸಂಕೀರ್ಣ ಸ್ಥಿತಿಯಲ್ಲಿ ಮಕ್ಕಳಿಗೆ ಸಮಾಜದ ಸಾಧನೆ ಮತ್ತು ಸಂಪನ್ಮೂಲಗಳ ಅರಿವು ಮಾಡಿಕೊಡುವುದು ಕಷ್ಟ ಸಾಧ್ಯವಾಗುತ್ತದೋ ಏನೋ?

ಶಿಕ್ಷಣ ತಜ್ಞ ಜಾನ್ ಡುಯಿಯು ಶಾಲೆಗಳ ಬಗ್ಗೆ ತಮ್ಮ ಅಭಿಪ್ರಾಯ ಹೀಗೆ ವ್ಯಕ್ತಿ ಪಡಿಸಿದ್ದಾರೆ The School is exprcked to provide a special environment for formulative years of human life ಪ್ರಜ್ಞಾಪೂರ್ವಕ ನೀಡುವುದು ಅವುಗಳ ಕರ್ತವ್ಯವಾಗಿದೆ. ಎಂಬುದು ಜಾನ್ ಡುಯಿಯವರ ಅಭಿಪ್ರಾಯವಾಗಿದೆ.

ಬಾಲವಾಡಿಯಿಂದ ಹಿಡಿದು ವಿಶ್ವವಿದ್ಯಾಲಯಗಳವರೆಗೆ ಶಿಕ್ಷಣದ ಎಲ್ಲಾ ಹಂತಗಳನ್ನು ಹೇಳುತ್ತವೆ. ಈ ಒಂದು ವಿಶಿಷ್ಟ ವಾತಾವರಣವು ನಮ್ಮ ಸಂಕೀರ್ಣ ನಾಗರಿಕತೆಯನ್ನು ವಿವರಿಸಲು ಅವಶ್ಯಕ ಎಂದು ರೆಡನ ಎಂಬ ಆಲೋಚನಾ ತಜ್ಞರು ಶಿಕ್ಷಣದ ಬಗ್ಗೆ ತಮ್ಮ ವಿಚಾರವನ್ನು ಹೀಗೆ ವ್ಯಕ್ತ ಪಡಿಸುತ್ತಾರೆ. ಶಿಕ್ಷಣವು ಉದ್ದೇಶಪೂರ್ವಕವಗಿ ಮತ್ತು ವ್ಯವಸ್ಥಿತವಾಗಿ ಅರಿತು ನುರಿತವರಾದ ಹಿರಿಯರಿಂದ ಅರಿಯದ ಕಿರಿಯರ ಮೇಲೆ ಬೀರುವ ಪ್ರಭಾವವೇ ಭೋದನೇ, ಶಿಸ್ತು, ಶಾರೀರಿಕ, ಭೌದ್ಧಿಕ ಸಾಮಾಜಿಕ ಹಾಗೂ ಚೈತನ್ಯಯುಕ್ತ ಸ್ಪೂರ್ತಿದಾಯಕ ಶಕ್ತಿಗಳನ್ನು ಸಮಗ್ರವಾಗಿ ಬೆಳೆಸುವಂತಹದೇ ಆಗಿದೆ.

ಜಾನ್ ಡುಯಿ ಅವರ ಪ್ರಕಾರ ಪರೋಕ್ಷ ಮತ್ತು ಪ್ರತ್ಯಕ್ಷ ಶಿಕ್ಷಣ ನೀಡುವ ಸಂಸ್ಥೆಗಳಲ್ಲಿ ಹೊಂದಾಣಿಕೆ ಅವಶ್ಯಕವಾಗಿದೆ. ಆಕಸ್ಮಿಕ ಮತ್ತು ಪೂರ್ವಕವಾಗಿ ಶಿಕ್ಷಣ ನೀಡುವ ವಿಧಾನಗಳಲ್ಲಿ ಸಮತೋಲನ ಇಟ್ಟುಕೊಳ್ಳಬೇಕೆಂದು ಹೇಳಿದ್ದಾರೆ. ಆದರೆ ಇದಕ್ಕೆ ಎಲ್ಲಾ ರೀತಿಯ ಶಿಕ್ಷಣ ಪ್ರಾತಿನಿಧಿಕ ಸಂಸ್ಥೆಗಳ ಸಹಕಾರ

ಅಗತ್ಯ. ವಿವಿಧ ಹಂತಗಳಲ್ಲಿ ವಿವಿಧ ಪ್ರಕಾರಗಳಲ್ಲಿ ಕೂಡಿಸಲಾಗುತ್ತಿರುವ ಶಿಕ್ಷಣವೆಲ್ಲ ಸಂಕುಚಿತ ವ್ಯಾಪ್ತಿಯಲ್ಲಿಯೇ ಬರುತ್ತದೆ. ಈ ಪ್ರತ್ಯಕ್ಷ ಶಿಕ್ಷಣಕ್ಕೆ ನಿರ್ದಿಷ್ಟ ಸ್ಥಳವಿರುತ್ತದೆ. ನಿರ್ದಿಷ್ಟ ವೇಳೆಯಲ್ಲಿ ಶಿಕ್ಷಣ ನೀಡಲಾಗುತ್ತದೆ. ಇದಲ್ಲದೆ ನಿರ್ದಿಷ್ಟವಾದ ಜ್ಞಾನವು ನಿರ್ದಿಷ್ಟವಾದ ಜನರಿಂದ ನಿರ್ದಿಷ್ಟವಾದ ಜನರಿಗೆ ಕೊಡಲಾಗುತ್ತದೆ. ಈ ಸಂಸ್ಥೆಗಳಿಗೆ ನಿರ್ದಿಷ್ಟವಾದ ಸಮಯವಿರುತ್ತದೆ. ಇದಲ್ಲದೆ ನಿರ್ದಿಷ್ಟವಾದ ಧ್ಯೇಯ ಗುರಿಗಳನ್ನು ಹೊಂದಿದ ಪಠ್ಯ ಪುಸ್ತಕಗಳೂ ಇರುತ್ತವೆ. ಆದ್ದರಿಂದಲೇ ಇದಕ್ಕೆ ಪ್ರತ್ಯಕ್ಷ ಶಿಕ್ಷಣವೆಂದು ಕರೆಯಲಾಗಿದೆ.

ಕಾರಣ ಪರೋಕ್ಷ ಮತ್ತು ಪ್ರತ್ಯಕ್ಷ ಶಿಕ್ಷಣವು ನಿಗದಿತ ಸಮಯದಲ್ಲಿ ನಿಯಮಾನುಸಾರ ಮಕ್ಕಳಿಗೆ ಲಭಿಸಿದ್ದಾದರೆ ರಾಷ್ಟ್ರದ ಉತ್ತಮ ಪ್ರಜೆಗಳಾಗಿ ಬಾಳಲು ಅನುವಾಗುತ್ತದೆ. ಇಂದಿನ ಮಕ್ಕಳು ಮುಂದಿನ ರಾಷ್ಟ್ರದ ನಾಯಕರು ಎಂಬ ಗಾದೆಯ ಮಾತೊಂದಿದೆ. ಆ ಮಾತು ಸತ್ಯವಾಗಬೇಕಾದರೆ. ನಮ್ಮ ಮಕ್ಕಳಿಗೆ ಸರ್ವಾಂಗ ಸುಂದರವಾದ ಶಿಕ್ಷಣವು ಅವಶ್ಯವೆಂದು ನಾನು ಭಾವಿಸಿರುತ್ತೇನೆ.

ಗಂಗಾನದಿಯಲ್ಲಿ ಎಷ್ಟೋ ನೀರು ಹರಿದು ಹೋಗಿದೆ. ಅದರಂತೆ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ಕಾಯ್ದೆ ಕಾನೂನುಗಳು ಜಾರಿಯಾಗಿವೆ. ಆದರೆ ಹಳ್ಳಿಯ ಮಕ್ಕಳಿಗೆ ಇದರಿಂದ ಯಾವ ಪ್ರಯೋಜನವೂ ಆಗಿರಲಾರದು. ಆಡಳಿತದಲ್ಲಿ ತಪ್ಪಿದೆಯೋ ಅಥವಾ ಅನುಷ್ಠಾನದಲ್ಲಿ ತಪ್ಪಿದೆಯೋ ಇದೊಂದು ಚಿದಂಬರ ರಹಸ್ಯವಾಗಿದೆ. ಶಿಕ್ಷಣದಲ್ಲಿ ಇತ್ತೀಚಿಗೆ ಹೆಚ್ಚಾಗಿ ಹಣದ ಪ್ರಭಾವ ಬೀರುವ ಶ್ರೀಮಂತ ಹುಡುಗರು ರ್‍ಯಾಂಕ ಪಡೆದು ಉದ್ಯೋಗ ಅವಕಾಶ ಪಡೆಯುತ್ತಿದ್ದರೆ ಇದನ್ನು ನಿವಾರಿಸುವವರು ಯಾರು?

ಸ್ವಾತಂತ್ರ್ಯ ಬಂದ ನಂತರ ಶಿಕ್ಷಣದಲ್ಲಿ ಹೇರಳ ಪ್ರಯೋಜನ ನಡೆದಿದೆ ಆದರೆ ಹಳ್ಳಿಯಲ್ಲಿರುವ ಬಡ ಬೋರೆಗೌಡನನ್ನು ಮತ್ತು ದೀನ ದಲಿತರ ಮಕ್ಕಳನ್ನು ಕೇಳುವರಾರು ಇಲ್ಲ. ನಮ್ಮ ಕರ್ನಾಟಕ ಸರ್ಕಾರದ ಮಾಜಿ ಮಂತ್ರಿಗಳಾದ ಶ್ರೀ ಹೆಚ. ವಿಶ್ವನಾಥ ಅವರು ತಜ್ಞರ ಸಮಿತಿ ನೇಮಿಸಿ ಆ ಸಮಿತಿಯ ವರದಿಯ ಕೆಲವು ಸಲಹೆ ಸೂಚನೆಗಳನ್ನು ಅನುಷ್ಠಾನಕ್ಕೆ ತರುತ್ತಿದ್ದಾರೆ.

ಹಳೆಯದು ಹೋಗಿ ಹೊಸ ವಿಚಾರ ಬರುವಾಗ ಸಂಘರ್ಷಣೆ ಆಗುವುದು ಸಹಜ. ಆದರೆ ಅವರು ತಂದಂತಹ ಚಿಣ್ಣರ ಅಂಗಳ ಮತ್ತು ಶಾಲಾ ಸುಧಾರಣಾ ಸಮಿತಿಗಳು ಬಹಳ ಪ್ರಗತಿ ಸಾಧಿಸಿವೆ ಎಂದು ನಾನು ಭಾವಿಸಿರುವೆ. ಕೆಲವು ಸಮಿತಿಯವರು ಅಧಿಕಾರ ದುರ್ಬಳಕೆ ಮಾಡಿಕೊಂಡಿದ್ದ ಅನೇಕ ದೃಷ್ಟಾಂತಗಳಿವೆ.

ಚಿಣ್ಣರ ಅಂಗಳ ಕಾರ್ಯಕ್ರಮವು ಹಳ್ಳಿಯ ವಿದ್ಯಾರ್ಥಿಗಳಿಗೆ ತುಂಬಾ ಅನುಕೂಲವಾಗಿದೆ. ಬೇಸಿಗೆ ರಜೆಯಲ್ಲಿ 9 ರಿಂದ 14 ವರ್ಷಗಳ ವಿದ್ಯಾರ್ಥಿಗಳು ಹಳ್ಳಿಗಳಲ್ಲಿ ಆಟವಾಡುತ್ತ ಮತ್ತು ಸಮಾಜದಲ್ಲಿ ಗದ್ದಲ ಎಬ್ಬಿಸುವ ಕೆಲಸ ಮಾಡುತ್ತಿದ್ದರು. ಅವರಿಗೆ ಚಿಣ್ಣರ ಅಂಗಳದಲ್ಲಿ ತೊಡಗಿಸಿ ಅವರಿಗೆ ಓದುವುದರಲ್ಲಿ ತೊಡಗಿಸಿದ್ದು ಸ್ತುತ್ಯ ಕೆಲಸವೆಂದು ನಾನು ಭಾವಿಸಿರುವೆ ಎಂದು ಶ್ರೀ ಎಸ್.ಎಸ್. ಹಿರೇಮಠ ಉಪನ್ಯಾಸಕರ ಅನಿಸಿಕೆಯಾಗಿದೆ. ಇಂತಹ ಜನೋಪಯುಕ್ತ ಕಾರ್ಯಕ್ರಮಗಳು ಸರಕಾರದಿಂದ ಬರಲೆಂದು ಆಶಿಸಿದ್ದಾರೆ.

ಜೀವನ ವಿಕಾಸ ಪತ್ರಿಕೆ ನಮ್ಮ ಹೈದ್ರಾಬಾದ ಕರ್ನಾಟಕದಲ್ಲಿಯೇ ಏಕೈಕ ಶಿಕ್ಷಣ ಪತ್ರಿಕೆಯಾಗಿದೆ. ನಾವೆಲ್ಲ ಈ ಪತ್ರಿಕೆಗೆ ದುಡಿದಿದ್ದೇವೆ. ಕಾರಣಾಂತರದಿಂದ ನಿಂತು ಹೋದ ಪತ್ರಿಕೆ ಮತ್ತೆ ಪ್ರಾರಂಭವಾಗುವುದು "ಯಶಸ್ವಿಗಳಿಸುವು ಶಾಂತಿಯನ್ನು ಕಾಪಾಡುವುದು, ಪ್ರಗತಿಯನ್ನು ಸಾಧಿಸುವುದು ನಾಗರಿಕತೆಯನ್ನು ಬೆಳೆಸುವುದು ಇತಿಹಾಸವನ್ನು ನಿರ್ಮಿಸುವುದು ಯುದ್ಧ ಭೂಮಿಯಲಲ್ಲ. ಅದು ಸುಸಂಸ್ಕೃತ ಶೈಕ್ಷಣಿಕ ಸಂಸ್ಥೆಗಳಲ್ಲಿ ಮಾತ್ರ.

ಒಟ್ಟಾರೆ ಬೀದರ ಜಿಲ್ಲೆಯ ತನ್ನ ಐತಿಹಾಸಿಕ ಶೈಕ್ಷಣಿಕ ಪರಂಪರೆ ಮತ್ತು ಹಿರಿಮೆಯಂತೆ ಎಲ್ಲ ಹಂತಗಳಲ್ಲಿ ಅಂದರೆ ಶೈಕ್ಷಣಿಕವಾಗಿ ಸಿವಿಲ್ ಕಾಮಗಾರಿಗಳ ಪ್ರಗತಿಯು ಮುಂಚೂಣಿಯಲಿದ್ದು, ಇನ್ನು ಹೆಚ್ಚಿನ ಪ್ರಗತಿ ಹೊಂದುತ್ತಿರುವ ಜಿಲ್ಲೆಯಾಗಿದೆ. ಈ ಪ್ರಗತಿಗೆ ಜಿಲ್ಲೆಯ ಉಪನಿರ್ದೇಶಕರು, ಉಪಯೋಜನಾಧಿಕಾರಿಗಳು ಹಾಗೂ ಎಲ್ಲ ಶಿಕ್ಷಕರು, ಬಿ.ಆರ್.ಪಿ., ಸಿ.ಆರ್.ಪಿ. ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಸಿಬ್ಬಂದಿಗಳ ರವರ ಕರ್ತವ್ಯದ ಮೇಲೆ ಅವಲಂಭಿಸಿದೆ.

ಸರ್ವಶಿಕ್ಷಣ ಯೋಜನೆ ಅಡಿಯಲ್ಲಿ ಶಿಕ್ಷಣ ವಾರ್ತೆಯಲ್ಲಿ ಜೀವನ ವಿಕಾಸ ಮಾಸ ಪತ್ರಿಕೆಯಲ್ಲಿ ಮತ್ತು ಟೀಚರ ಶೈಕ್ಷಣಿಕ ಮಾಸ ಪತ್ರಿಕೆಯಲ್ಲಿ ಮಾರ್ಚ 2009 ರ ವಿಶೇಷ ಸಂಚಿಕೆಯಲ್ಲಿ 8 ಶೈಕ್ಷಣಿಕ ಹಬ್ಬ ಬೀದರ ಈ ಸಂಚಿಕೆಯಿಂದ ಹಾಗೂ ಕನ್ನಡ ದಿನಪತ್ರಿಕೆಯಾದ ವಿಜಯ ಕರ್ನಾಟಕ, ಪ್ರಜಾವಾಣಿ ಇತ್ಯಾದಿ ಪತ್ರಿಕೆಯಲ್ಲಿ ಪ್ರಕಟವಾದದ್ದು, ಆಯ್ದುಕೊಳ್ಳಲಾಗಿದೆ. ಜಿಲ್ಲೆಯಲಿದ್ದ ಶಿಕ್ಷಣ ಪ್ರೇಮಿ, ಸಾಹಿತಿಗಳು, ಲೇಖಕರನ್ನು ಖುದ್ದು ಭೇಟಿ ಮಾಡಿ ಅಧ್ಯಯನದ ಪ್ರಗತಿ ಕುರಿತು ಸಮಾಲೋಚಿಸಲಾಗಿದೆ. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಅಗತ್ಯ ಮಾಹಿತಿ ಟಿಪ್ಪಣಿ ಬರೆದಿದ್ದೇನೆ.

ಅಧ್ಯಯನಕ್ಕೆ ಸಂಬಂಧಪಟ್ಟಂತೆ ತಿಳಿದು ಬಂದ ಹೊಸ ಹೊಸ ವಿಚಾರ ಆಲೋಚಿಸಿ ಮತ್ತು ನೈಜ ಅಂಶಗಳನ್ನು ನಿಯಮಿತವಾಗಿ ದಾಖಲಿಸಿದ್ದೇನೆ. ಮಾರ್ಗದರ್ಶಕರ ಸೂಕ್ತ ಮಾರ್ಗದರ್ಶನದಲ್ಲಿ ಅಧ್ಯಯನವು ಪ್ರಗತಿಯಲ್ಲಿದೆ.

## ಜಿಲ್ಲೆಯ ಶೈಕ್ಷಣಿಕ ಅಂಕಿ ಅಂಶಗಳು:-

ಬೀದರ ಜಿಲ್ಲೆಯ 5 ತಾಲ್ಲೂಕುಗಳು ಸೇರಿ ಅಂಗನವಾಡಿಗಳು 1479, ಕಿರಿಯ ಪ್ರಾಥಮಿಕ ಶಾಲೆಗಳು 721, ಹಿರಿಯ ಪ್ರಾಥಮಿಕ ಶಾಲೆಗಳು 1083, ಪ್ರೌಢ ಶಾಲೆಗಳು 295, ಪದವಿ ಪೂರ್ವ ಕಾಲೇಜುಗಳು 14 ಇವೆ. ಇಂಜಿನಿಯರಿಂಗ ಕಾಲೇಜುಗಳು 03, ಡಯಟ್ 01, ಡಿ.ಈಡಿ. ಕಾಲೇಜುಗಳು 46, ಆಯುರ್ವೇದಿಕ ಮೇಡಿಕಲ್ ಕಾಲೇಜು 03, ಡೆಂಟಲ್ ಕಾಲೇಜು 03, ಪಶು ವೈದ್ಯಕೀಯ ಕಾಲೇಜು 01, ಸ್ನಾತಕೊತ್ತರ ಕಾಲೇಜು03, ಬಿ.ಪಿ.ಈಡ್ ಕಾಲೇಜು 03, ಐ.ಟಿ.ಐ. ಕಾಲೇಜುಗಳು 07, ಸಕ್ಕರೆ ತಾಂತ್ರಿಕ ಕಾಲೇಜುಗಳು 01, ಪಶುವೈದ್ಯಕೀಯ ಕಾಲೇಜುಗಳು 01 ಜಿಲ್ಲೆಯಲ್ಲಿವೆ. ಜಿಲ್ಲೆಯಲ್ಲಿ ಒಟ್ಟು 1639 ಶಾಲೆಗಳಿದ್ದು ಅದರಲ್ಲಿ 1252 ಶಿಕ್ಷಣ ಇಲಾಖೆಯಿಂದ 369 ಶಾಲೆಗಳು ಖಾಸಗಿ ಸಂಸ್ಥೆಗಳಿಂದ. 277 ಪ್ರೌಢ ಶಾಲೆಗಳು ಇದ್ದು ಅವುಗಳ ವಿವರ ಈ ಕೆಳಗಿನಂತಿವೆ.

## ಸರ್ಕಾರಿ ಮತ್ತು ಅನುದಾನಿತ ಪ್ರಾಥಮಿಕ ಶಾಲೆಗಳ ವಿವರ

| ಬ್ಲಾಕ ಹೆಸರು | ಸರ್ಕಾರಿ ಶಾಲೆಗಳು | | ಅನುದಾನಿತ ಶಾಲೆಗಳು | | ಒಟ್ಟು ಶಾಲೆಗಳು | | ಇತರೆ ಇಲಾಖೆಯ ಶಾಲೆಗಳು | ಖಾಸಗಿ ಅನುದಾನ ರಹಿತ ಶಾಲೆಗಳು | ಒಟ್ಟು ಶಾಲೆಗಳು |
|---|---|---|---|---|---|---|---|---|---|
| ಔರಾದ | 163 | 154 | 1 | 20 | 164 | 174 | 5 | 12 | 355 |
| ಬಸವಕಲ್ಯಾಣ | 93 | 139 | 0 | 25 | 93 | 164 | 11 | 32 | 300 |
| ಭಾಲ್ಕಿ | 114 | 158 | 1 | 31 | 115 | 189 | 5 | 20 | 329 |
| ಬೀದರ | 104 | 147 | 0 | 58 | 104 | 205 | 6 | 76 | 391 |
| ಹುಮನಾಬಾದ | 50 | 130 | 0 | 26 | 50 | 156 | 2 | 55 | 263 |
| ಒಟ್ಟು | 524 | 728 | 2 | 160 | 526 | 888 | 29 | 195 | 1638 |

## ಸರ್ಕಾರಿ ಮತ್ತು ಅನುದಾನಿತ ಶಿಕ್ಷಕರ ವಿವರ

| . | ತಾಲ್ಲೂಕಾ ಹೆಸರು | ಮಂಜೂರಾದ ಶಿಕ್ಷಕರ ಹುದ್ದೆಗಳು | ಕೆಲಸ ಮಾಡುತ್ತಿದ್ದ ಶಿಕ್ಷಕರ ವಿವರ | | ಒಟ್ಟು | ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಖಾಲಿ ಹುದ್ದೆ | ಅನುದಾನಿತ ಪ್ರಾಥಮಿಕ ಶಾಲೆಯಲ್ಲಿ ಖಾಲಿ ಹುದ್ದೆಗಳು |
|---|---|---|---|---|---|---|---|
| | | | ಗಂಡು | ಹೆಣ್ಣು | | | |
| | ಔರಾದ | 1287 | 864 | 348 | 1212 | 75 | 171 |
| | ಬಸವಕಲ್ಯಾಣ | 1236 | 638 | 438 | 1076 | 160 | 169 |
| | ಭಾಲ್ಕಿ | 1235 | 652 | 412 | 1064 | 171 | 209 |
| | ಬೀದರ | 1392 | 495 | 789 | 1284 | 108 | 480 |
| | ಹುಮನಾಬಾದ | 1154 | 484 | 447 | 931 | 223 | 192 |
| | ಒಟ್ಟು | 6304 | 3133 | 2434 | 5567 | 737 | 1221 |

# ಬೀದರ ಜಿಲ್ಲೆಯ ಒಟ್ಟು ಪಂಚಾಯತ, ಶಾಲೆಗಳು ಹಾಗೂ ಜನಸಂಖ್ಯೆ ವಿವರ

| ಕ್ರ. ಸಂ. | ತಾಲ್ಲೂಕಿನ ಹೆಸರು | ಪಂಚಾಯತಗಳ ಸಂಖ್ಯೆ | ಶಾಲೆಯ ಸಂಖ್ಯೆ | ಜನಸಂಖ್ಯೆ |
|---|---|---|---|---|
| 1 | ಔರಾದ (ಬಿ) | 38 | 298 | 280800 |
| 2 | ಬಸವಕಲ್ಯಾಣ | 36 | 255 | 352400 |
| 3 | ಭಾಲ್ಕಿ | 35 | 241 | 298500 |
| 4 | ಬೀದರ | 33 | 310 | 497800 |
| 5 | ಹುಮನಾಬಾದ | 33 | 206 | 346800 |
| | ಒಟ್ಟು | 175 | 1310 | 1776300 |

ಬೀದರ ಜಿಲ್ಲೆಯ ಜನಸಂಖ್ಯೆ ಹಾಗೂ ಸಾಕ್ಷರತಾ ಪ್ರಮಾಣ ಜನಸಂಖ್ಯೆ (2001 ರ ಜನಗಣತಿಯಂತೆ)

| ಕ್ರ. ಸಂ. | ತಾಲ್ಲೂಕಿನ ಹೆಸರು | ಗಂಡು | ಹೆಣ್ಣು | ಒಟ್ಟು | ಸಾಕ್ಷರತಾ ಪ್ರಮಾಣ | | |
|---|---|---|---|---|---|---|---|
| | | | | | ಗಂಡು | ಹೆಣ್ಣು | ಒಟ್ಟು |
| 1 | ಔರಾದ (ಬಿ) | 125533 | 119563 | 245096 | 69.95% | 45.95% | 57.87% |
| 2 | ಬಸವಕಲ್ಯಾಣ | 152774 | 146747 | 299521 | 71.57% | 46.19% | 59.10% |
| 3 | ಭಾಲ್ಕಿ | 132112 | 124908 | 257020 | 75.31% | 48.85% | 62.43% |
| 4 | ಬೀದರ | 209094 | 195823 | 404917 | 74.45% | 54.83% | 64.96% |
| 5 | ಹುಮನಾಬಾದ | 151103 | 294819 | 445920 | 70.18% | 46.22% | 58.50% |
| | ಒಟ್ಟು | 770616 | 881860 | 1652474 | | | |

ಬೀದರ ಜಿಲ್ಲೆಯ ಮಕ್ಕಳ ಪಾಲಕರು ಶಿಕ್ಷಣದ ಮಹತ್ವ ತಿಳಿದುಕೊಳ್ಳುವುದರಲ್ಲಿ ಹಿಂದಿದ್ದಾರೆ. ಅವರಿಗೆ "ಗುಣಮಟ್ಟ ಶಿಕ್ಷಣ" ಕುರಿತು ತಿಳಿಸುವದು ಅತ್ಯವಶ್ಯಕವಾಗಿದೆ. ಶ್ರೀ ಎಸ್.ಎಂ.ಜನವಾಡಕರ್ ಹಿರಿಯ ಸಾಹಿತಿಗಳು ಹಾಗೂ ಸರ್ವ ಶಿಕ್ಷಣ ಅಭಿಯಾನ ಯೋಜನೆ ಕಛೇರಿ ಬೀದರದಲ್ಲಿ ಸಹಾಯಕ ಯೋಜನೆ ಕಾರ್ಯಕ್ರಮ ಅಧಿಕಾರಿಯಾಗಿದ್ದು, ಇವಾಗ ನಿವೃತ್ತರಾಗಿದ್ದಾರೆ. ಅವರ ಸೇವಾವಧಿಯಲ್ಲಿ ಗುಣಮಟ್ಟದ ಶಿಕ್ಷಣದ ಅರ್ಥ ಕುರಿತು ಹೀಗೆ ಹೇಳಿದ್ದಾರೆ.

ಗುಣಮಟ್ಟದ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ಗುಣಮಟ್ಟ ಶಿಕ್ಷಣವೇ ನಮ್ಮ ಇಲಾಖೆಯ ಪರಮಗುರಿ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವುದಕ್ಕೆ ಸರಕಾರದ ಮೊದಲ ಆದ್ಯತೆ ಶಿಕ್ಷಣದ ಗುಣಮಟ್ಟವನ್ನು ಖಾತ್ರಿಗೊಳಿಸುವುದಕ್ಕೆ ಇಲಾಖೆಯ ಕಾರ್ಯಕ್ರಮಗಳು ಹೀಗೆ ಮೊದಲಾದ ಬಹು ಅಪ್ಯಾಯಮಾನ ಘೋಷಣೆಗಳನ್ನು ಪ್ರತಿದಿನ ಎಂಬಂತೆ ಇತ್ತೀಚಿನ ವರ್ಷಗಳಲ್ಲಿ ನಾವು ಕೇಳುತ್ತಾ ಬಂದಿದ್ದೇವೆ. ಆಶ್ಚರ್ಯವೆಂದರೆ ಯಾರೂ ಕೂಡ ಶಿಕ್ಷಣದಲ್ಲಿ ಗುಣಮಟ್ಟ ಎಂದರೇನು ಅದರ ಮಾಪನಕ್ಕಿರುವ ಮಾನ ದಂಡಗಳೇನು ಎಂಬುದರ ಕುರಿತು ಎಲ್ಲೂ ಎಂದೂ ಪ್ರಶ್ನಿಸಿದಂತಿಲ್ಲ ಈ ಬಗ್ಗೆ ಇಂದು ಶಿಕ್ಷಕರಲ್ಲಿ ಮತ್ತು ಶಿಕ್ಷಣ ವಲಯದಲ್ಲಿ ಹಲವು ಸಂದೇಹಗಳಿವೆ ಗೊಂದಲಗಳಿವೆ.

ಪರೀಕ್ಷೆಗಳಲ್ಲಿ ಶೇಕಡಾ ನೂರು ಹಾಗೂ ಅದಕ್ಕೇ ಸಮೀಪದ ಉತ್ತಮ ಫಲಿತಾಂಶ ಬರುವ ಶಾಲೆಗಳಲ್ಲಿ ಕ್ರೀಡಾ ಸ್ಪರ್ದೆಗಳಲ್ಲಿ ಪ್ರತಿಭಾ ಕಾರಂಜಿಯಲ್ಲಿ ಹೆಚ್ಚು ಬಹುಮಾನ ಗಿಟ್ಟಿಸಿದ ಶಾಲೆಗಳಲ್ಲಿ ಗುಣಮಟ್ಟದ ಶಿಕ್ಷಣವಿದೆ ಎಂದು ಸಾಮಾನ್ಯವಾಗಿ ಪೋಷಕರು ಗ್ರಹಿಸಿಕೊಂಡಂತಿದೆ ಅಂತೆಯೇ ಪರೀಕ್ಷೆಗಳಲ್ಲಿ ಶೇ. 95% ರಿಂದ 98% ಅಂಕಳೊಂದಿಗೆ ಉತ್ತೀರ್ಣವಾದ ವಿದ್ಯಾರ್ಥಿಗೆ ಗುಣಮಟ್ಟ ಶಿಕ್ಷಣ ದೊರಕಿದೆ ಎಂದೂ ತಿಳಿದುಕೊಂಡಂತಿದೆ. ಹೀಗೆ ಶಾಲಾ ಫಲಿತಾಂಶದೊಂದಿಗೆ ವಿದ್ಯಾರ್ಥಿ ಪಡೆದ ಪರೀಕ್ಷಾ ಅಂಕಳೊಂದಿಗೆ ನಾನಾ ಸ್ಪರ್ದೆಗಳಲ್ಲಿ ಶಾಲೆ ಬಾಚಿಕೊಂಡ ಬಹುಮಾನಗಳ ಸಂಖ್ಯೆಯೊಂದಿಗೆ ಅಲ್ಲಿಯೆ ಶಿಕ್ಷಣದ ಗುಣಮಟ್ಟವನ್ನು ಸಮೀಕರಿಸಲಾಗಿದೆ.

ಇನ್ನೂ ಖಾಸಗಿ ಶಾಲೆಗಳಲ್ಲಿ ಅದರಲ್ಲೂ ಮುಖ್ಯವಾಗಿ ಇಂಗ್ಲೀಷ ಮಾಧ್ಯಮದ ಶಾಳೆಗಳಲ್ಲಿ ಶಿಕ್ಷಣದ ಗುಣಮಟ್ಟ ಅತ್ಯುತ್ತಮವಾಗಿದೆ ಎಂಬ ಪೋಷಕರ ಗ್ರಹಿಕೆಗೆ ಅವುಗಳ ಪರೀಕ್ಷಾ ಫಲಿತಾಂಶ ಮತ್ತು ಅಲ್ಲಿನ ಭೌತಿಕ ಅಂಶಗಳಾದ ಭವ್ಯ ಕಟ್ಟಡ ಸುಸಜ್ಜಿತ ತರಗತಿ ಕೊಣೆಗಳು, ಬಾಹ್ಯ ಪರಿಸರಗಳು, ಶಿಸ್ತು, ಹೋಮವರ್ಕ ಇತ್ಯಾದಿಗಳನ್ನಷ್ಟೆ ಪರಿಗಣಿಸಿದ್ದು ಮತ್ತು ಅಂತಿಮ ಉತ್ಪನ್ನವನ್ನಷ್ಟೆ ಮಾನದಂಡವಾಗಿ ಸ್ವೀಕರಿಸಿದ್ದು ಕಾರಣವಾಗಿದೆ. ಶಿಕ್ಷಣದ ಗುಣಮಟ್ಟವನ್ನು ಗುರುತಿಸುವಲ್ಲಿ ಈ ಮಾನ ದಂಡಗಳನ್ನು ಅಳವಡಿಸಿಕೊಳ್ಳಬಹುದೇ ಎಂಬುದು ಇಂದಿನ ಮುಖ್ಯ ಪ್ರಶ್ನೆ. ವಾಸ್ತವದಲ್ಲಿ ಶಾಲೆಯ ಫಲಿತಾಂಶ, ವಿದ್ಯಾರ್ಥಿ ಪಡೆದ ಅಂಕ, ಬಹುಮಾನ, ಬೌತಿಕ ಸೌಲಭ್ಯ ಇತ್ಯಾದಿಗಳಿಗೂ ಗುಣಮಟ್ಟ ಶಿಕ್ಷಣಕ್ಕೂ ಯಾವ ನೇರ ಸಂಬಂಧವನ್ನು ಕಲ್ಪಿಸಲಾಗದು.

ವಿಶ್ವ ಸಂಸ್ಥೆಯ ಅಂಗವಾಗಿ ಯುನಿಸೆಫ್ ಗುಣಮಟ್ಟದ ಶಿಕ್ಷಣದ ಬಗ್ಗೆ ಹೀಗೆ ಹೆಳಿದೆ 1997 ರಲ್ಲಿ ವಿಶ್ವ ಆರೋಗ್ಯ ಸಂಸ್ಥೆ ಪ್ರಸ್ತಾಪಿಸಿದ 10 ಜೀವನ ಕೌಶಲಗಳನ್ನು ಒಳಗೊಂಡ ಶಿಕ್ಷಣವನ್ನು ನೀಡುವದೇ ಗುಣಮಟ್ಟ ಶಿಕ್ಷಣ ಎಂದು ಅದು ವ್ಯಾಖ್ಯಾನಿಸಿದೆ. ಈ ಹತ್ತು ಜೀವನ ಕೌಶಲ್ಯಗಳನ್ನು ಮೂರು ವಿಭಾಗಗಳಲ್ಲಿ ಗುರುತಿಸಲಾಗಿದೆ. ಅವು ಇಂತಿವೆ.

1. ಭೌದ್ಧಿಕ ಕೌಶಲ್ಯಗಳು:- ವಿಮರ್ಶಾತ್ಮಕ ಚಿಂತನೆ ಸೃಜನಾತ್ಮಕ ಚಿಂತನೆ, ನಿರ್ಧಾರ ಕೈಗೊಳ್ಳುವಿಕೆ, ಸಮಸ್ಯ ಪರಿಹಾರ ಸ್ವ-ಅರಿವು.

2. ಭಾಸಂಬಂಧಿ ಕೌಶಲ್ಯ:- ಭಾವನೆಗಳ ನಿರ್ವಹಣೆ, ಪರಿಣಾಮಕಾರಿ ಸಂವಹನ, ಇತರರ ಭಾವನೆ ಮತ್ತು ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವು ಸಾಮರ್ಥ್ಯ.

3. ಸಮಸ್ಯ ನೆಲೆಗಳ ಯಶಸ್ವಿ ನಿರ್ವಹಣೆ ಕೌಶಲ್ಯ.

ಆಂತರಿಕ ಶಕ್ತಿ ಸಂಬಂಧಗಳು ಒತ್ತಡ ನಿರ್ವಹಣೆ ತಮ್ಮ ವ್ಯಾಸಂಗದಲ್ಲಿ ಮಕ್ಕಳು ಈ ಕೌಶಲ್ಯಗಳನ್ನು ಮೈಗೂಡಿಸಿಕೊಂಡರೆ ಅದನ್ನು ಗುಣಮಟ್ಟದ ಶಿಕ್ಷಣವೆಂದು ಹೇಳಬಹುದು ಎನ್ನುತ್ತದೆ ವಿಶ್ವ ಆರೋಗ್ಯ ಸಂಸ್ಥೆ.

ಎಂಬತ್ತರ ದಶಕದಲ್ಲಿ ಹಾರ್ವರ್ಡ ವಿಶ್ವವಿದ್ಯಾನಿಲಯದ ಪ್ರೋಫೆಸರ ಹಾರ್ವರ್ಡ ಗಾರ್ಡನರನ ಮಾನವ ಮೆದುಳಿನ ಕುರಿತಾದ ಸಂಶೋಧನೆಯಿಂದ ತಿಳಿದು ಬಂದಂತೆ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಬಹುವಿಧಿ ಬುದ್ಧಿಶಕ್ತಿಗಳಿವೆ. ಇವುಗಳಲ್ಲಿ ಆತ Analytic Interactive introspective ಎಂದು ಮೂರು ವಿಧಗಳಲ್ಲಿ

ಗುರುತಿಸಿದ್ದಾರೆ. ಇವನ್ನು ಆತ ಕಂಡುಕೊಂಡದ್ದು 6 ವಿಧದ ಬುದ್ಧಿ ಶಕ್ತಿಗಳಾಗಿ. ಆ ಎಲ್ಲ ಬುದ್ಧಿ ಶಕ್ತಿಗಳೂ ಒಬ್ಬ ವ್ಯಕ್ತಿಯ ಸಮ ಪರಮಾಣದಲ್ಲಿ ಇರುವುದಿಲ್ಲ ಹಾಗೂ ಇವು ವ್ಯಕ್ತಿಯಾದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ಹಾಗಾಗಿ ತರಗತಿಯ ಮಕ್ಕಳಲ್ಲಿರುವ ಈ ವಿವಿಧ ಬುದ್ಧಿಶಕ್ತಿಗಳ ಮೂಲ ಲಕ್ಷಣಗಳನ್ನು ಗುರುತಿಸಿ ಅವರಲ್ಲಿ ಪ್ರಬಲವಾಗಿರುವ ಬುದ್ಧಿಶಕ್ತಿಯನ್ನು ಉತ್ತೇಜಿಸಿ ಉದ್ಧೀಪನಗೊಳಿಸಿ ನೀಡುವ ಶಿಕ್ಷಣವೆ ಗುಣಮಟ್ಟ ಶಿಕ್ಷಣ ಎಂದು ಕೆಲವು ತಜ್ಞರು ನಿರ್ವಹಿಸಿದ್ದಾರೆ. ಈ ಹಿನ್ನಲೆಯಲ್ಲಿ ಭೋದನೆ ಕಲಿಕೆಯಲ್ಲಿ ಈಚೆಗೆ ಮಹತ್ವದ ಬದಲಾವಣೆಗಳಾಗಿರುವುದನ್ನು ನಾವು ಗಮನಿಸಬಹುದು. ತರಗತಿಯ ಒಳಗೆ ಮತ್ತು ಹೊರಗೆ ಶಿಕ್ಷಕರಿಂದ ಪಠ್ಯಪುಸ್ತಕಗಳಿಂದ ಬಾಹ್ಯ ಜಗತ್ತಿನಿಂದ ಪಡೆದ ಜ್ಞಾನವನ್ನು ತಮ್ಮ ಬದುಕಿನ ವಾಸ್ತವ ಸನ್ನಿವೇಶಗಳಿಗೆ ಅನ್ವಯಿಸಯವಂತೆ ಮಕ್ಕಳು ಪಡೆಯುವ ಶಿಕ್ಷಣವೇ ಗುಣಮಟ್ಟ ಶಿಕ್ಷಣ ಎಂದು ಹಲವು ಶಿಕ್ಷಣವೇತ್ತರ ಅಭಿಪ್ರಾಯವಾಗಿದೆ.

ಶಿಕ್ಷಣ ತಜ್ಞರು ಮಕ್ಕಳ ವಯಸ್ಸಿನ ವಿವಿಧ ಹಂತಗಳಲ್ಲಿ ವಿವಿಧ ತರಗತಿಗಳನ್ನು ಅವರಲ್ಲಿ ನಡೆಯಬೇಕಾದ ಅವಶ್ಯಕ ಮಟ್ಟದ ಕಲಿಕೆಯನ್ನು ಗುರುತಿಸಿದ್ದಾರೆ. ಮಕ್ಕಳು ಕಲಿಕೆಯಲ್ಲಿ ಈ ಮಟ್ಟವನ್ನು ತಲುಪಿ, ಇಲಾಖೆ ಹೇಳುವ ಈ ಸಾಮರ್ಥ್ಯಗಳನ್ನು ಗಳಿಸುವುದೇ ಗುಣಾತ್ಮಕ ಶಿಕ್ಷಣ ಎನ್ನುತ್ತದೆ. ಶಿಕ್ಷಣ ಇಲಾಖೆ 1989 ರಲ್ಲಿ ಬಂದ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ನಮೂದಿಸಿದ 84 ಸಾಮಾಜಿಕ, ನೈತಿಕ ಮತ್ತು ಅಧ್ಯಾತ್ಮಿಕ, ಮೌಲ್ಯಗಳನ್ನು ಮಕ್ಕಳು ರೂಡಿಸಿಕೊಳ್ಳುವಂತೆ ನೀಡುವ ಶಿಕ್ಷಣವೇ ಗುಣಾತ್ಮಕ ಶಿಕ್ಷಣ ಎಂದು ಹಲವು ಚಿಂತಕರು ವಿಶ್ಲೇಷಿಸಿದ್ದಾರೆ.

2005ರಲ್ಲಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹೊರತಂದ ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಂಕನ ಸಂಸ್ಥೆಯ ಶಾಲಾ ಕೈಪಿಡಿಯಲ್ಲಿ ಗುಣಮಟ್ಟದ ವ್ಯಾಖ್ಯಾನ ಹೀಗಿದೆ. ಅರ್ಹ ವಯಸ್ಸಿನ ಎಲ್ಲ ಮಕ್ಕಳು ಶಾಲೆಗೆ ನಿಯಮಿತವಾಗಿ ಹಾಜರಾಗಿ ತೃಪ್ತಿಕರ ಕಲಿಕೆಯನ್ನು ತೋರುವುದು ಹಾಗೂ ಪ್ರಗತಿ ಹೊಂದಿ ಮುಂದಿನ ತರಗತಿಗೆ ಉತ್ತೀರ್ಣತೆ ಪಡೆಯುವುದು ಇದು ಸಂವಿಧಾನಾತ್ಮಕವಾಗಿ ಇರಬೇಕಾದ ಕಲಿಕೆಯನ್ನು ಹೊಂದಿದೆ.

ಹೀಗಾಗಿ ಡಿ.ಪಿ.ಇ.ಪಿ. ಮತ್ತು ಸರ್ವ ಶಿಕ್ಷಣ ಅಭಿಯಾನ ಯೋಜನೆ ಹೀಗೆ ಅನೇಕ ಯೋಜನೆಗಳ ಮೂಲಕ ಬೀದರ ಜಿಲ್ಲೆಯಲ್ಲಿನ ಪ್ರಾಥಮಿಕ ಶಿಕ್ಷಣ ಸುಧಾರಿಸಲು ಇಲಾಖೆಯು ಬಹಳಷ್ಟು ಸಹಾಯ ಮಾಡುತ್ತಲಿದೆ. ಆದರೂ ಬೀದರ ಜಿಲ್ಲೆಯಲ್ಲಿ ಹೆಚ್ಚು ಗ್ರಾಮಗಳು, ಹಳ್ಳಿಗಳು ಇರುವುದರಿಂದ ಅನಕ್ಷರಸ್ತ ಪಾಲಕರಿರುವುದರಿಂದ ಶಿಕ್ಷಣದ ಬಗ್ಗೆ ಹೆಚ್ಚಿನ ಒಲವು ತೋರಿಸುತ್ತಿಲ್ಲ. ಅಲ್ಲದೆ ಶಿಕ್ಷಣ ತಜ್ಞರ ಹೇಳಿಕೆಯ ಬಗ್ಗೆ ಎಲ್ಲರಿಗೆ ತಿಳಿಸುವುದು ಅತ್ಯವಶ್ಯಕವಾಗಿದೆ.

ಅಲ್ಲದೆ ಬೀದರ ಜಿಲ್ಲೆಗೆ ಕೇಂದ್ರ ಸರ್ಕಾರದಿಂದ ಮತ್ತು ರಾಜ್ಯ ಸರ್ಕಾರದಿಂದ ಜಿಲ್ಲೆಗೆ ಶಿಕ್ಷಣಕ್ಕಾಗಿ ಒದಗಿಸಿದ ಹಣಕಾಸು ಹಾಗೂ ಇನ್ನಿತರ ಮೂಲಭೂತ ಸೌಲಭ್ಯಕ್ಕಾಗಿ ಬಿಡುಗಡೆಯಾದ ಬಡ್ಜೆಟ ಕುರಿತು ಎಷ್ಟರ ಮಟ್ಟಿಗೆ ಬಳಕೆಯಾಗಿ ಕೆಲಸ ಆಗಿರುವ ಕುರಿತು ಅಧ್ಯಯನ ಮಾಡಲಾಗಿದೆ. ಮತ್ತು ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಖಾಸಗಿ ಪ್ರಾಥಮಿಕ ಶಾಲೆಗಳಿಗೆ ಇಲಾಖೆಯಿಂದ ನೀಡಿದ ಸೌಲಭ್ಯ ಕುರಿತು ತಾಳೆ ನೋಡುವುದು ಹಾಗೂ ಸರ್ಕಾರಿ ಪ್ರಾಥಮಿಕ ಶಾಲೆಗಳ ಹಾಗೂ ಖಾಸಗಿ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಣದ ಗುಣಮಟ್ಟ ಮತ್ತು ಫಲಿತಾಂಶ ಬಗ್ಗೆಯು ಕಂಡುಕೊಳ್ಳಲಾಗುವುದು, ಮಕ್ಕಳ ಪ್ರಮಾಣ ರಾಜ್ಯದ ಸರಾಸರಿಗಿಂತ

ಹೆಚ್ಚಿರುವುದು ಗಮನಾರ್ಹ ಎನಿಸಿದೆ. ರಾಜ್ಯದ ಶೇ 13 ರಷ್ಟು ಕಡಿಮೆ ಇದೆ. ಶೇ 14.5 ರಷ್ಟಿದೆ ಎಂದು ಉಲ್ಲೇಖಿಸಲಾಗಿದೆ.

ಅಕ್ಷರ ಪದ ಮತ್ತು ಇನ್ನೂ ಹೆಚ್ಚಿನದನ್ನು ಓದುವವರ ಪ್ರಮಾಣ ಶೇ 20.1 ರಷ್ಟಿದೆ. ಇದು ರಾಜ್ಯದ ಸರಾಸರಿಗಿಂತ ಶೇ. 13.4 ರಷ್ಟು ಕಡಿಮೆ ಇದೆ 1 ರಿಂದ 9 ರವರೆಗೆ ಸಂಖ್ಯೆ ಗುರುತಿಸಬಲ್ಲವರ ಪ್ರಮಾಣ ಶೇ. 98.9 ಇದೆ. ಹಂತ 1 ರ ಪಠ್ಯವನ್ನು ಓದಬಲ್ಲವರ ಪ್ರಮಾಣ ಶೇ. 43 ರಷ್ಟಿದೆ. ಇದರ ಪ್ರಮಾಣ ರಾಜ್ಯದಲ್ಲಿ ಶೇ. 57.2 ರಷ್ಟಿದೆ. ಈ ವಿಷಯದಲ್ಲಿ ಜಿಲ್ಲೆಯಲ್ಲಿ ಸಾಕಷ್ಟು ಹಿನ್ನಡೆ ಕಂಡು ಬಂದಿದೆ.

ಕಳೆಯುವುದು ಅಥವಾ ಇದಕ್ಕಿಂತ ಹೆಚ್ಚು ಬಲ್ಲವರ ಪ್ರಮಾಣ ಬರಿ ಶೇ. 28.9 ರಷ್ಟಿದೆ. ರಾಜ್ಯದ ಸರಾಸರಿ ಶೇ. 44.5 ಇದೆ. ಆಂಗ್ಲ ಭಾಷೆ ವಾಕ್ಯಗಳನ್ನು ಓದಬಲ್ಲವರ ಪ್ರಮಾಣ ಕೇವಲ ಶೇ. 4.2 ರಷ್ಟಿದೆ. ಹೀಗೆ ಪ್ರತಿ ಅಂಶಗಳಲ್ಲೂ ಜಿಲ್ಲೆಯ ಶೇಕಡಾವಾರು ಪ್ರಮಾಣ ರಾಜ್ಯದ ಸರಾಸರಿಗಿಂತ ಕಡಿಮೆ ಇದೆ. 2007 ರಲ್ಲಿ ನಡೆಸಲಾದ "ಅಸರ" ಸಮೀಕ್ಷೆಯ ಜಿಲ್ಲೆವಾರು ವರದಿ ಹಂಚಿಕೆ ಸಭೆ ಶುಕ್ರವಾರ ಬೆಳಿಗ್ಗೆ 10ಕ್ಕೆ ನೌಬಾದ ಸಮೀಪದ ಸೌಹಾರ್ದ ತರಬೇತಿ ಸಂಸ್ಥೆಯಲ್ಲಿ ಈ ವಿಷಯಗಳ ಕುರಿತು ಸಮಗ್ರವಾಗಿ ಚರ್ಚೆ ಮಾಡಿದಾಗ ಈ ಕೆಳಗಿನಂತೆ ಪ್ರಗತಿ ಕಂಡು ಬಂದಿದೆ.

"ಅಸರ" 2007 ರ ನಮ್ಮ ಜಿಲ್ಲೆಯ ಶೈಕ್ಷಣಿಕ ಪ್ರಗತಿ ಸರ್ವಶಿಕ್ಷಣ ಅಭಿಯಾನ ಯೋಜನೆ ಅಡಿಯಲ್ಲಿ ಪ್ರಾಥಮಿಕ ಶಿಕ್ಷಣದ ಸರ್ವಾಂಗೀಣ ಅಭಿವೃದ್ಧಿಗಾಗಿ ಬೀದರ ಜಿಲ್ಲೆಗೆ 33ಕೋಟಿ ರೂಪಾಯಿ ಅನುದಾನ ಬಂದಿದೆ.

ಜಿಲ್ಲಾ ಪಂಚಾಯತ ಬೀದರದಲ್ಲಿ ನಡೆದ ಸಭೆಯಲ್ಲಿ ಜಿಲ್ಲಾ ಉಸ್ತುವಾರಿ ಸಚಿವ ರೇವುನಾಯಕ ಬೆಳಮಗಿ ಅವರು ಜಿಲ್ಲಾ ಪಂಚಾಯತ ಸಭೆಯಲ್ಲಿ ಸರ್ವಶಿಕ್ಷಣ ಅಭಿಯಾನ ಯೋಜನೆಯ ನಾನಾ ಕಾಮಗಾರಿ ಪ್ರಗತಿ ನಡೆಸಿದರು.

ಜಿಲ್ಲೆಯ ಎಸ್.ಎಸ್.ಎಲ್.ಸಿ. ಫಲಿತಾಂಶ ರಾಜ್ಯದಲ್ಲಿ ಕೊನೆಯ ಸ್ಥಾನದಲ್ಲಿದೆ. ಇದನ್ನು ಸುಧಾರಿಸಲು ಕಾರ್ಯಸೂಚಿ ಅಳವಡಿಸಿದಾಗ ಶೈಕ್ಷಣಿಕ ಗುಣಮಟ್ಟ ಸುಧಾರಿಸಲು ಸಾಧ್ಯ. ಈ ನಿಟ್ಟಿನಲ್ಲಿ ಸರ್ವಶಿಕ್ಷಣ ಅಭಿಯಾನ ಅನುದಾನ ಸಮರ್ಪಕ ಬಳಕೆ ಮಾಡಿಕೊಳ್ಳಬೇಕು ಎಂದರು.

ಮಕ್ಕಳಿಗೆ ಉತ್ತಮ ಶಿಕ್ಷಣ ಕಲ್ಪಿಸುವ ದಿಸೆಯಲ್ಲಿ ಸರ್ವಶಿಕ್ಷಣ ಅಭಿಯಾನದ ಅಡಿ ಸಾಕಷ್ಟು ಅನುದಾನ ಒದಗಿಸಲಾಗುತ್ತಿದೆ ಎಂದರು. ಶಿಕ್ಷಣ ಇಲಾಖೆ ಅಧಿಕಾರಿಗಳು ಜನಪ್ರತಿನಿಧಿಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಈ ಯೋಜನೆ ಅನುಷ್ಠಾನಗೊಳಿಸಬೇಕು ಎಂದು ಸೂಚಿಸಿದರು.

ಹೊಸ ಶಾಲೆ ಆರಂಭಿಸಲು ಸ್ಥಳ ನಿಗದಿ ಮಾಡುವ ಸಂದರ್ಭದಲ್ಲಿ ಸೂಕ್ತ ಮಾನದಂಡ ಅನುಸರಿಸಬೇಕು. ಶಾಲಾ ಕಟ್ಟಡಗಳನ್ನು ನಿಗದಿತ ಅವಧಿಯೊಳಗೆ ಉತ್ತಮ ಗುಣಮಟ್ಟದೊಂದಿಗೆ ನಿರ್ಮಿಸಬೇಕು. ಕಳಪೆ ಕಾಮಗಾರಿ ಕೈಗೊಳ್ಳುವವರ ವಿರುದ್ಧ ಕ್ರಮಕೈಗೊಳ್ಳಲಾಗುವುದು ಎಂದು ಎಚ್ಚರಿಸಿದರು. ಮಾನ್ಯ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ ಸರ್ವ ಶಿಕ್ಷಣ ಅಭಿಯಾನ ಯೋಜನೆ ಅಡಿಯಲ್ಲಿ ಜಿಲ್ಲೆಗೆ ಈ ಸಾಲಿನಲ್ಲಿ ಅಂದರೆ 2007-08ನೇ ಸಾಲಿನಲ್ಲಿ 33.18ಕೋಟಿ ರೂಪಾಯಿ ಅನುದಾನ

ಮಂಜೂರು ಆಗಿದೆ. ಈ ಪೈಕಿ ಇಲ್ಲಿಯವರೆಗೆ 8 ಕೋಟಿ ರೂಪಾಯಿ ಖರ್ಚಾಗಿದೆ. ಪ್ರಸಕ್ತ ಸಾಲಿನಲ್ಲಿ 20 ಹೊಸ ಶಾಲೆಗಳು ಆರಂಭವಾಗಿವೆ. 74 ಶಾಲೆಗೆ 5 ರಿಂದ 6 ನೇ ತರಗತಿಗೆ ಮೇಲ್ದರ್ಜೆಗೇರಿಸಲು ಮಂಜೂರಾತಿ ದೊರೆತಿದೆ. ಎಂದು ವಿವರಿಸಿದರು. ಈ ಜಿಲ್ಲೆಯಲ್ಲಿ 12 ತಿಂಗಳ ಸೇತುಬಂಧ ಚಿಣ್ಣರ ಅಂಗಳ ಕಾರ್ಯಕ್ರಮದಡಿ 1238 ಮಕ್ಕಳಿಗೆ 123 ಕೋಟಿ ರೂಪಾಯಿ ನಿಗದಿಪಡಿಸಲಾಗಿದೆ. ಈ ವರೆಗೆ 61 ಲಕ್ಷ ರೂಪಾಯಿ ವೆಚ್ಚ ಮಾಡಲಾಗಿದೆ ಎಂದರು. 12 ತಿಂಗಳ ಸೇತುಬಂಧ ಕಾರ್ಯಕ್ರಮಕ್ಕೆ 867 ಮಕ್ಕಳಿಗೆ 26 ಲಕ್ಷ ರೂಪಾಯಿ ನಿಗದಿಮಾಡಿರುವುದಾಗಿ ಹೇಳಿದರು. 13 ಲಕ್ಷ ರೂಪಾಯಿ ಖರ್ಚು ಮಾಡಿರುತ್ತಾರೆ. ಟೆಂಟ ಶಾಲೆಯಲ್ಲಿ 350 ಮಕ್ಕಳ ಗುರಿ ಇರಿಸಲಾಗಿದೆ. 10 ಲಕ್ಷ ರೂಪಾಯಿ ವೆಚ್ಚ ಮಾಡಲಾಗಿದೆ. ಬೇಸಿಗೆಯಲ್ಲಿ ಪರಿಹಾರ ಭೋದನೆ ಕಾರ್ಯಕ್ರಮಕ್ಕಾಗಿ ಕಲಿಕೆಯಲ್ಲಿ ಹಿಂದಿರುವ ಮಕ್ಕಳಿಗೆ 2750 ಮಕ್ಕಳಿಗೆ 8 ಲಕ್ಷ ರೂಪಾಯಿ ನಿಗದಿಪಡಿಸಿದ್ದು 4 ಲಕ್ಷ ರೂಪಾಯಿ ಖರ್ಚಾಗಿದೆ. ಶಾಲೆಯಿಂದ ಹೊರಗುಳಿದ ಮಕ್ಕಳಿಗೆ ಶೈಕ್ಷಣಿಕ ಕಾರ್ಯಕ್ರಮಕ್ಕೆ ಬಿಡುಗಡೆಯಾದ 1.80 ಕೋಟಿ ರೂಪಾಯಿ ಇದರಲ್ಲಿ 98 ಲಕ್ಷ ರೂಪಾಯಿ ಖರ್ಚು ಮಾಡಲಾಗಿದೆ. ಪರಿಹಾರ ಭೋದನೆಯಡಿ 14148 ಮಕ್ಕಳಿಗೆ 20 ಲಕ್ಷ ರೂಪಾಯಿ ಬಿಡುಗಡೆ ಮಾಡಲಾಗಿದೆ. 1 ರಿಂದ 8ನೇ ತರಗತಿಯ 20671 ಮಕ್ಕಳಿಗೆ ಉಚಿತ ಸ್ಟೇಷನರಿ ಮತ್ತು ಪಠ್ಯಪುಸ್ತಕಕ್ಕೆ 18 ಲಕ್ಷ ರೂಪಾಯಿ ನಿಗದಿಪಡಿಸಲಾಗಿದೆ. ವಿಕಲಚೇತನ 3971 ಮಕ್ಕಳ ಕಾರ್ಯಕ್ರಮಗಳಿಗೆ 47 ಲಕ್ಷ ರೂಪಾಯಿ ಬಿಡುಗಡೆಯಾಗಿದೆ. 20 ಶಾಲಾ ಕಟ್ಟಡ ನಿರ್ಮಿಸಲು 1.80 ಕೋಟಿ ರೂಪಾಯಿ ಕಲ್ಪಿಸಲಾಗಿದೆ. 223 ಹೆಚ್ಚುವರಿ ಶಾಲಾ ಕೊಠಡಿ ನಿರ್ಮಾಣಕ್ಕೆ 8.47 ಕೋಟಿ ರೂಪಾಯಿ ಮಂಜೂರು ಮಾಡಿರುತ್ತಾರೆ. ಪ್ರಸಕ್ತ ಸಾಲಿನಲ್ಲಿ ನಿರ್ಮಾಣ ಕಾಮಗಾರಿ ಗಳಿಗಾಗಿ 10.72 ಕೋಟಿ ರೂಪಾಯಿ ನಿಗದಿಯಾಗಿದ್ದು, 2.30 ಕೋಟಿ ರೂಪಾಯಿ ವೆಚ್ಚವಾಗಿದೆ. ನಿರ್ವಹಣೆ ಮತ್ತು ದುರಸ್ತಿಗಾಗಿ 1.37 ಕೋಟಿ ರೂಪಾಯಿ ನಿಗದಿಪಡಿಸಿರುತ್ತಾರೆ. 2007–08ನೇ ಸಾಲಿನಲ್ಲಿ ಸರ್ವಶಿಕ್ಷಣದ ಅಡಿ ಜಿಲ್ಲೆಗೆ 21.67 ಕೋಟಿ ರೂಪಾಯಿ ಮಂಜೂರಾಗಿದ್ದು, 20.90 ಕೋಟಿ ರೂಪಾಯಿ ವೆಚ್ಚ ಮಾಡಲಾಗಿದೆ. ಎಂದು ಮಾನ್ಯ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ ಅವರು ಸಭೆಯಲ್ಲಿ ಹೇಳಿದ್ದರು.

ಮಾರ್ಚ 2009 ರ ಮಾಹೆಯ ಟೀಚರ ಮಾಸ ಪತ್ರಿಕೆಯಲ್ಲಿ ಪ್ರಕಟಿಸಿದ ಪ್ರಕಾರ ಸರ್ವಶಿಕ್ಷಣ ಅಭಿಯಾನ ಯೋಜನೆ ಜಿಲ್ಲೆಗೆ ಒಂದು ವರದಾನ ಈ ಕುರಿತು ಪ್ರಕಟ ಬೀದರ ಜಿಲ್ಲೆಯಲ್ಲಿ ಡಿ.ಪಿ.ಇ.ಪಿ. ಯೋಜನೆ ಮುಗಿಯುತ್ತಲೆ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಸಹಯೋಗದಿಂದ ಸರ್ವಶಿಕ್ಷಣ ಅಭಿಯಾನ ಯೋಜನೆ 2002 ರಿಂದ ಪ್ರಾರಂಭವಾಗಿದ್ದು ಎಲ್ಲಾ ಮಕ್ಕಳನ್ನು ಶಾಲಾ ವ್ಯಾಪ್ತಿಗೆ ತರುವ ನಿಟ್ಟಿನಲ್ಲಿ ತುಂಬಾ ಫಲಪ್ರದವಾಗಿ ಹೊರಹೊಮ್ಮಿದೆ. ಇದರ ಪ್ರಮುಖ ಗುರಿ 9 ರಿಂದ 14 ವರ್ಷದ ಎಲ್ಲಾ ಮಕ್ಕಳನ್ನು ಶಾಲೆಗೆ ಸೇರಿಸುವುದು ಹಾಗೂ ಎಲ್ಲಾ ಮಕ್ಕಳನ್ನು ಶಾಲೆಯಲ್ಲಿ ಉಳಿಸುವುದು ನಂತರ ಆ ಮಕ್ಕಳಿಗೆ ಗುಣಾತ್ಮಕ ಶಿಕ್ಷಣ ನೀಡುವುದಾಗಿ ಸದರಿ ಕಾರ್ಯಕ್ರಮದಿಂದ 2003 ರ ವರೆಗೆ ಪ್ರತಿ ಮಗುವಿಗೆ 5 ವರ್ಷದ ಶಿಕ್ಷಣ ನೀಡಿದ್ದು ಹಾಗೂ 2010 ರವರೆಗೆ ಎಲ್ಲರಿಗೂ 8 ವರ್ಷದ ಶಿಕ್ಷಣ ನೀಡುವ ಗುರಿಯಿದೆ. ಜಿಲ್ಲೆಯಲ್ಲಿ ಮಕ್ಕಳ ಗಣತಿ ಸಮೀಕ್ಷೆಯ ಆಧಾರದ ಮೇಲೆ ವರ್ಷದಿಂದ ವರ್ಷಕ್ಕೆ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿದ್ದು, ಜಿಲ್ಲೆಗೆ ಇದೊಂದು ಆಶಾದಾಯಕ ಪ್ರಗತಿ ಮೈಲುಗಲ್ಲು ನಿರ್ಮಿಸಿದಂತಾಗಿದೆ. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಅಲ್ಪ ಸಂಖ್ಯಾತರ ಮಕ್ಕಳು ವಿಶೇಷವಾಗಿ ಹೆಣ್ಣು

ಮಕ್ಕಳು ಅಂಗವಿಕಲ ಮಕ್ಕಳಿಗಾಗಿ ವಿವಿಧ ಕಾರ್ಯಕ್ರಮಗಳಿಂದ ಈ ಎಲ್ಲಾ ಮಕ್ಕಳಿಗೆ ವಿಶೇಷ ಸೌಲಭ್ಯ ನೀಡಿರುವುದರಿಂದ ಇದೊಂದು ಸಂಜೀವಿನಿಯಾಗಿದೆ.

**ಸರ್ವ ಶಿಕ್ಷಣ ಅಭಿಯಾನದ ಮಧ್ಯವರ್ತನೆಗಳ ನಿಬಂಧನೆಗಳ ವಿವರ ಈ ಕೆಳಗಿನಂತಿದೆ.**

ಪ್ರತಿ 40 ಮಕ್ಕಳಿಗೆ ಒಬ್ಬ ಶಿಕ್ಷಕ. ಒಂದು ಪ್ರಾಥಮಿಕ ಶಾಲೆಯಲ್ಲಿ ಕನಿಷ್ಠ ಇಬ್ಬರು ಶಿಕ್ಷಕರು.

1 ಕಿ.ಮೀ. ವ್ಯಾಪ್ತಿಯೊಳಗೆ ಒಂದು ಶಾಲಾ ಸೌಲಭ್ಯ. ಶಾಲೆ ಇಲ್ಲದಿರುವ ಜನವಸತಿ ಪ್ರದೇಶಗಳಲ್ಲಿ

ಇ.ಜಿ.ಎಸ್.ಪೂರಕ ಶಾಲೆಗಳು.

ಮಕ್ಕಳ ಸಂಖ್ಯೆ ಆಧರಿಸಿ ಹಿರಿಯ ಪ್ರಾಥಮಿಕ ಶಾಲೆ.

ತರಗತಿಗನುಗುಣವಾಗಿ ಕೊಠಡಿಗಳು ಹಾಗೂ ಮುಖ್ಯ ಅಧ್ಯಾಪಕರ ಕೊಠಡಿ.

ಎಲ್ಲಾ ಪ್ರಾಥಮಿಕ ಶಾಲಾ ಮಕ್ಕಳಿಗೆ ಉಚಿತ ಪಠ್ಯ ಪುಸ್ತಕ ವಿತರಣೆ.

ಶಾಲಾ ಕಟ್ಟಡಗಳು ನಿರ್ವಹಣೆ ಮತ್ತು ದುರಸ್ತಿ.

ಶಾಲಾ ಕಟ್ಟಡಗಳ ವರ್ಗಕೊಠಡಿಗಳು ಸಿ.ಆರ್.ಸಿ/ಬಿ.ಆರ್.ಸಿ. ಕಟ್ಟಡ ನಿರ್ಮಾಣ.

ಶಿಕ್ಷಣ ಖಾತರಿ ಯೋಜನೆಯ ಅಡಿಯಲ್ಲಿನ ಕೇಂದ್ರಗಳನ್ನು ಔಪಚಾರಿಕ ಶಾಲೆಗಳಾಗಿ ಉನ್ನತಿಕರಿಸುವುದು.

ಹಿರಿಯ ಪ್ರಾಥಮಿಕ ಶಾಲೆಗಳಿಗೆ ಭೋದನೆ ಮತ್ತು ಕಲಿಕಾ ಸಾಮಗ್ರಿ.

ಶಾಲಾ ಅನುದಾನ.

ಶಿಕ್ಷಕರ ಅನುದಾನ

ಶಿಕ್ಷಕರ ತರಬೇತಿ

ಶೈಕ್ಷಣಿಕ ತರಬೇತಿ

ಶೈಕ್ಷಣಿಕ ರಾಜ್ಯ ನಿರ್ವಹಣೆ ಆಧಾರಿತ ಮತ್ತು ತರಬೇತಿ ಸಂಸ್ಥೆ.

ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ತಪಾಸಣೆ ಸಲಕರಣೆ ಹಾಗೂ ಹಣಕಾಸಿನ ಸೌಲಭ್ಯ.

ಸಂಶೋಧನೆ ಮೌಲ್ಯಮಾಪನ, ಮೇಲುಸ್ತುವಾರಿಯಲ್ಲಿ, ಮೇಲ್ವಿಚಾರಣೆ.

ಜಿಲ್ಲಾ ನಿರ್ವಹಣೆ.

ಹೆಣ್ಣು ಮಕ್ಕಳ ಶಿಕ್ಷಣ ಶೈಶಾವಸ್ಥೆಯಲ್ಲಿ ಆರೈಕೆ ಶಿಕ್ಷಣ ಪ.ಜಾ/ಪ.ಪಂ. ಹೆಣ್ಣು ಮಕ್ಕಳಿಗೆ ವಿಶೇಷ ಸೌಲಭ್ಯ

ಹಿರಿಯ ಪ್ರಾಥಮಿಕ ಶಾಲೆಗಳಿಗೆ ಕಂಪ್ಯೂಟರ ಸೌಲಭ್ಯ.

ಕ್ಷೇತ್ರ ಸಂಪನ್ಮೂಲ ಕೇಂದ್ರಗಳು ಸಮೂಹ ಸಂಪನ್ಮೂಲ ಕೇಂದ್ರಗಳು.

ಶಾಲೆಯಿಂದ ಹೊರಗುಳಿದ ಮಕ್ಕಳಿಗಾಗಿ ಸಂಬಂಧಿಸಿದಂತೆ ವಿವಿಧ ಮಧ್ಯವರ್ತನೆಗಳು.

ಕುಟುಂಬ ಸಮೀಕ್ಷೆ ಸಮುದಾಯವನ್ನು ಸಜ್ಜುಗೊಳಿಸುವುದು ಎಲ್ಲಾ ಹಂತಗಳು ತರಬೇತಿಗಳು.

## ಬೀದರ ಐತಿಹಾಸಿಕ ಬೆಡಗು (ಬೀದರಿನ ಭೌಗೋಳಿಕ ಬೆಡಗು) ಬೀದರ

ಬೀದರ ಜಿಲ್ಲೆಯು ರಾಜ್ಯದ ಉತ್ತರ ಭಾಗದಲ್ಲಿ ಸ್ಥಾಪಿತವಾಗಿದೆ. ಜಿಲ್ಲೆಯ ವಾಯುವ್ಯಕ್ಕೆ ಮಹಾರಾಷ್ಟ್ರ ರಾಜ್ಯ ಮತ್ತು ನೈರುತ್ಯಕ್ಕೆ ಆಂಧ್ರಪ್ರದೇಶ ರಾಜ್ಯಗಳು ಮತ್ತು ದಕ್ಷಿಣಕ್ಕೆ ಗುಲಬರ್ಗಾ ಜಿಲ್ಲೆಯು ಗಡಿಭಾಗಗಳಾಗಿದೆ. ಜಿಲ್ಲೆಯು ಸಮುದ್ರ ಪಾತಳಿಯಿಂದ 2330 ಅಡಿಗಳಷ್ಟು ಮೇಲಿದೆ. ಜಿಲ್ಲೆಯ ಸುಮಾರು 5458 ಚ.ಕಿ.ಮೀ. ಭೂ ಪ್ರದೇಶದಲ್ಲಿ 2001 ರ ಜನಗಣತಿಯಂತೆ ಒಟ್ಟು 1502996 ಜನಸಂಖ್ಯೆಯನ್ನು ಹೊಂದಿದೆ. ಶೇಕಡಾ 19.55 ದರದಲ್ಲಿ ಜನಸಂಖ್ಯೆ ಬೆಳವಣಿಗೆಯಾಗಿದೆ. ಜಿಲ್ಲೆಯಲ್ಲಿ ಲಿಂಗ ಅಂತರದಲ್ಲಿ 1000 ಪುರುಷರಿಗೆ 989 ಸ್ತ್ರೀಯರಿದ್ದಾರೆ. ಜಿಲ್ಲೆಯಲ್ಲಿ ಸಾಕ್ಷರತಾ ಪ್ರಮಾಣವು ರಾಷ್ಟ್ರ ಮತ್ತು ರಾಜ್ಯದ ಪ್ರಮಾಣಕ್ಕಿಂತಲೂ ಕಡಿಮೆ ಅಂದರೆ ಶೇ. 61.98 ಇದೆ. ಔರಾದ, ಬಸವಕಲ್ಯಾಣ, ಭಾಲ್ಕಿ, ಬೀದರ, ಹುಮನಾಬಾದ ಎಂಬ 5 ಕಂದಾಯ ಪ್ರಕಾರ 30 ಹೋಬಳಿಗಳನ್ನು, 900 ಜನವಸತಿ ಹಳ್ಳಿಗಳನ್ನು, 14 ಜನವಸತಿ ರಹಿತ ಗ್ರಾಮಗಳನ್ನು 5 ಪಟ್ಟಣ ಪ್ರದೇಶಗಳನ್ನು ಹೊಂದಿದೆ. ಜಿಲ್ಲೆಯು ವರ್ಷದಾದ್ಯಂತ ಸಮತೋಲಿತ ಒಣ ಮತ್ತು ತಂಪು ಮಿಶ್ರಿತ ಹವೆಯನ್ನು ಹೊಂದಿರುತ್ತದೆ. ಜಿಲ್ಲೆಯಲ್ಲಿ ಸರಾಸರಿಯಾಗಿ 907 ಮೀ. ರಷ್ಟು ಮಳೆಯಾಗುತ್ತದೆ. ಮಾಂಜರಾ ಮತ್ತು ಕಾರಂಜಾಗಳು ಜಿಲ್ಲೆಯ ಪ್ರಮುಖ ನದಿಗಳು, ಮಹಾರಾಷ್ಟ್ರ, ಆಂಧ್ರಪ್ರದೇಶ ರಾಜ್ಯಗಳ ಮೇರೆಯಲ್ಲಿರುವರು ಉರ್ದು, ತೆಲುಗು ಮತ್ತು ಮರಾಠಿ ಭಾಷೆಯನ್ನು ಜಿಲ್ಲೆಯಲ್ಲಿ ಮಾತನಾಡುತ್ತಾರೆ. ಉಳಿದ ಬಹುಸಂಖ್ಯಾತ ಜನರು ಕನ್ನಡ ಮಾತನಾಡುತ್ತಿದ್ದು, ಅವರ ಮಾತೃ ಭಾಷೆ ಕನ್ನಡವಾಗಿದೆ. ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿ ನಂ. 9 ಹಾದು ಹೋಗುತ್ತದೆ. ಸುಮಾರು 90 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿಯಿದೆ. ಜಿಲ್ಲೆಯಲ್ಲಿ ಶೇ. 70 ರಷ್ಟು ವ್ಯವಸಾಯವನ್ನೇ ಅವಲಂಭಿಸಿದ್ದಾರೆ. ಉತ್ತಮ ಫಲವತ್ತಾದ ಕೆಂಪು ಬಣ್ಣ ಮಿಶ್ರಿತ ಭೂಮಿ ಇದೆ. ರಾಜ್ಯ ಆದಾಯಕ್ಕೆ ಅತಿ ಕಡಿಮೆ ಪ್ರಮಾಣದ ಆದಾಯವನ್ನು ಜಿಲ್ಲೆ ಹೊಂದಿದೆ.

ಆಧುನಿಕರಣದ ನೀರಿನ ಸೌಲಭ್ಯವನ್ನು ಬಳಸಿಕೊಂಡು ಉದ್ದು, ಸಜ್ಜೆ, ತೋಗರಿ, ಶೇಂಗಾ, ಕಬ್ಬು, ಸೂರ್ಯಕಾಂತಿ, ಜೋಳ, ಗೋಧಿ ಪ್ರಮುಖ ಬೆಳೆಗಳನ್ನು ಜಿಲ್ಲೆಯಲ್ಲಿ ಬೆಳೆಯುತ್ತಾರೆ.

ಜಿಲ್ಲೆಯ ಶೈಕ್ಷಣಿಕ ಅಂಕಿ ಅಂಶಗಳು:

ಅಂಗನವಾಡಿಗಳು 1479, ಕಿರಿಯ ಪ್ರಾಥಮಿಕ ಶಾಲೆಗಳು 721, ಹಿರಿಯ ಪ್ರಾಥಮಿಕ ಶಾಲೆಗಳು 1083, ಪ್ರೌಢ ಶಾಲೆಗಳು 295, ಪದವಿ ಪೂರ್ವ ಕಾಲೇಜುಗಳು 14, ಇಂಜಿನಿಯರಿಂಗ ಕಾಲೇಜು 03, ಡಯಟ್ 1, ಡಿ.ಇ.ಡಿ. ಕಾಲೇಜುಗಳು 16, ಆಯುರ್ವೆದಿಕ ಮೆಡಿಕಲ್ ಕಾಲೇಜು 03, ಡೆಂಟಲ್ ಕಾಲೇಜು 03, ಪಶುವೈದ್ಯಕೀಯ ಕಾಲೇಜು 01, ಸ್ನಾತ್ತಕೋತ್ತರ ಕಾಲೇಜು 03, ಬಿ.ಪಿ.ಇಡಿ. ಕಾಲೇಜು 03, ಐ.ಟಿ.ಐ. ಕಾಲೇಜುಗಳು 07, ಸಕ್ಕರೆ ತಾಂತ್ರಿಕ ಕಾಲೇಜುಗಳು 01, ಸರಕಾರಿ ವೈದ್ಯಕೀಯ ಕಾಲೇಜು 01 ಈ ಜಿಲ್ಲೆಯಲ್ಲಿವೆ. ಜಿಲ್ಲೆಯಲ್ಲಿ ಒಟ್ಟು 1639 ಶಾಲೆಗಳಿದ್ದು, ಅದರಲ್ಲಿ 1252 ಶಿಕ್ಷಣ ಇಲಾಖೆಯಿಂದ 369 ಶಾಲೆಗಳು ಇವೆ.

# Table 8 (G) Class wise Enrollment - All

| Sl. No. | Block | Management | Class I | | | Class II | | | Class III | | | Class IV | | | Class V | | | Class VI | | | Class VII | | | Class VIII | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | Boys | Girls | Total | Boys | Girls | Total | Boys | Girls | Total | Boys | Girls | Total | Boys | Girls | Total | Boys | Girls | Total | Boys | Girls | Total | Boys | Girls | Total |
| 1 | Aurad | Govt | 2402 | 2537 | 4939 | 2310 | 2475 | 4785 | 2528 | 2658 | 5186 | 2395 | 2489 | 4884 | 2263 | 2372 | 4635 | 1893 | 2093 | 3986 | 1763 | 1795 | 3558 | 1469 | 1405 | 2874 |
| 2 | | Aided | 661 | 558 | 1219 | 673 | 571 | 1244 | 694 | 597 | 1291 | 711 | 553 | 1264 | 683 | 511 | 1194 | 671 | 569 | 1240 | 717 | 529 | 1246 | 611 | 493 | 1104 |
| 3 | | U | 703 | 442 | 1145 | 648 | 347 | 995 | 578 | 337 | 915 | 527 | 307 | 834 | 395 | 285 | 680 | 353 | 175 | 528 | 311 | 136 | 447 | 249 | 149 | 398 |
| 4 | | Others | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| | Total | | 3766 | 3537 | 7303 | 3631 | 3393 | 7024 | 3800 | 3592 | 7392 | 3633 | 3349 | 6982 | 3341 | 3168 | 6509 | 2917 | 2837 | 5754 | 2791 | 2460 | 5251 | 2329 | 2047 | 4376 |
| 1 | B. Kalyan | Govt | 2774 | 2720 | 5494 | 2616 | 2738 | 5354 | 2616 | 2731 | 5347 | 2527 | 2609 | 5136 | 2506 | 2594 | 5100 | 2142 | 2123 | 4265 | 2008 | 2172 | 4180 | 1978 | 2369 | 4347 |
| 2 | | Aided | 747 | 667 | 1414 | 734 | 652 | 1386 | 660 | 653 | 1313 | 733 | 614 | 1347 | 732 | 601 | 1333 | 767 | 642 | 1409 | 733 | 587 | 1320 | 444 | 359 | 803 |
| 3 | | U | 1488 | 950 | 2438 | 1383 | 874 | 2257 | 1282 | 822 | 2104 | 1106 | 716 | 1822 | 1110 | 682 | 1792 | 809 | 510 | 1319 | 741 | 475 | 1216 | 891 | 592 | 1483 |
| 4 | | Others | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 52 | 26 | 78 | 49 | 30 | 79 | 51 | 27 | 78 |
| | Total | | 5009 | 4337 | 9346 | 4733 | 4264 | 8997 | 4558 | 4206 | 8764 | 4366 | 3939 | 8305 | 4348 | 3877 | 8225 | 3770 | 3301 | 7071 | 3531 | 3264 | 6795 | 3364 | 3347 | 6711 |
| 1 | Bhalki | Govt | 2150 | 2159 | 4309 | 2133 | 2264 | 4397 | 2267 | 2340 | 4607 | 2190 | 2251 | 4441 | 2133 | 2248 | 4381 | 1800 | 2004 | 3804 | 1708 | 1916 | 3624 | 1353 | 1564 | 2917 |
| 2 | | Aided | 876 | 795 | 1671 | 807 | 662 | 1469 | 769 | 721 | 1490 | 752 | 712 | 1464 | 682 | 612 | 1294 | 725 | 565 | 1290 | 710 | 554 | 1264 | 498 | 547 | 1045 |
| 3 | | U | 956 | 602 | 1558 | 835 | 520 | 1355 | 833 | 480 | 1313 | 758 | 414 | 1172 | 647 | 335 | 982 | 594 | 299 | 893 | 524 | 267 | 791 | 684 | 396 | 1080 |
| 4 | | Others | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 39 | 27 | 66 |
| | Total | | 3982 | 3556 | 7538 | 3775 | 3446 | 7221 | 3869 | 3541 | 7410 | 3700 | 3377 | 7077 | 3462 | 3195 | 6657 | 3119 | 2868 | 5987 | 2942 | 2737 | 5679 | 2574 | 2534 | 5108 |
| 1 | Bidar | Govt | 2718 | 2771 | 5489 | 2801 | 2898 | 5699 | 2879 | 3307 | 6186 | 2898 | 3173 | 6071 | 2792 | 3114 | 5906 | 2408 | 2719 | 5127 | 2174 | 2549 | 4723 | 1638 | 2045 | 3683 |
| 2 | | Aided | 1511 | 1427 | 2938 | 1561 | 1494 | 3055 | 1612 | 1554 | 3166 | 1557 | 1488 | 3045 | 1578 | 1558 | 3136 | 1582 | 1519 | 3101 | 1613 | 1601 | 3214 | 1074 | 1262 | 2336 |
| 3 | | U | 3060 | 2535 | 5595 | 2938 | 2478 | 5416 | 2705 | 2368 | 5073 | 2575 | 2258 | 4833 | 2325 | 2035 | 4360 | 2033 | 1617 | 3650 | 1758 | 1548 | 3306 | 1411 | 1179 | 2590 |
| 4 | | Others | 65 | 60 | 125 | 72 | 67 | 139 | 69 | 64 | 133 | 73 | 68 | 141 | 68 | 62 | 130 | 75 | 69 | 144 | 73 | 63 | 136 | 68 | 62 | 130 |
| | Total | | 7354 | 6793 | 14147 | 7372 | 6937 | 14309 | 7265 | 7293 | 14558 | 7103 | 6987 | 14090 | 6763 | 6769 | 13532 | 6098 | 5924 | 12022 | 5618 | 5761 | 11379 | 4191 | 4548 | 8739 |
| 1 | Humanabad | Govt | 2092 | 2321 | 4413 | 2083 | 2276 | 4359 | 2428 | 2649 | 5077 | 2037 | 2271 | 4308 | 2062 | 2373 | 4435 | 1781 | 2117 | 3898 | 1789 | 2020 | 3809 | 1515 | 1749 | 3264 |
| 2 | | Aided | 746 | 720 | 1466 | 724 | 688 | 1412 | 822 | 721 | 1543 | 722 | 728 | 1450 | 729 | 699 | 1428 | 730 | 670 | 1400 | 798 | 620 | 1418 | 658 | 580 | 1238 |
| 3 | | U | 1913 | 1357 | 3270 | 1577 | 1070 | 2647 | 1572 | 1046 | 2618 | 1570 | 971 | 2541 | 1383 | 922 | 2305 | 1280 | 769 | 2049 | 1146 | 699 | 1845 | 1047 | 882 | 1929 |
| 4 | | Others | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| | Total | | 4751 | 4398 | 9149 | 4384 | 4034 | 8418 | 4822 | 4416 | 9238 | 4329 | 3970 | 8299 | 4174 | 3994 | 8168 | 3791 | 3556 | 7347 | 3733 | 3339 | 7072 | 3220 | 3211 | 6431 |
| 1 | District total | Govt | 12136 | 12508 | 24644 | 11943 | 12651 | 24594 | 12718 | 13685 | 26403 | 12047 | 12793 | 24840 | 11756 | 12701 | 24457 | 10024 | 11056 | 21080 | 9442 | 10452 | 19894 | 7953 | 9132 | 17085 |
| 2 | | Aided | 4541 | 4167 | 8708 | 4499 | 4067 | 8566 | 4557 | 4246 | 8803 | 4475 | 4095 | 8570 | 4404 | 3981 | 8385 | 4475 | 3965 | 8440 | 4571 | 3891 | 8462 | 3285 | 3241 | 6526 |
| 3 | | U | 8120 | 5886 | 14006 | 7381 | 5289 | 12670 | 6970 | 5053 | 12023 | 6536 | 4666 | 11202 | 5860 | 4259 | 10119 | 5069 | 3370 | 8439 | 4480 | 3125 | 7605 | 4282 | 3198 | 7480 |
| 4 | | Others | 65 | 60 | 125 | 72 | 67 | 139 | 69 | 64 | 133 | 73 | 68 | 141 | 68 | 62 | 130 | 127 | 95 | 222 | 122 | 93 | 215 | 158 | 116 | 274 |
| | Grand Total | | 24862 | 22621 | 47483 | 23895 | 22074 | 45969 | 24314 | 23048 | 47362 | 23131 | 21622 | 44753 | 22088 | 21003 | 43091 | 19695 | 18486 | 38181 | 18615 | 17561 | 36176 | 15678 | 15687 | 31365 |

## ಅಧ್ಯಯ –೬ "ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಗುಣಮಟ್ಟ ಒಂದು ಅಧ್ಯಯನ"

"ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಗುಣಮಟ್ಟ ಒಂದು ಅಧ್ಯಯನ" ಕುರಿತಾದ ಸಂಶೋಧನೆ ಅಧ್ಯಯನವು ಮುಂದುವರೆದಿರುತ್ತದೆ. ಈ ಅವಧಿಯಲ್ಲಿ ಬೀದರ ಜಿಲ್ಲೆಯಲ್ಲಿ 5 ತಾಲ್ಲೂಕಗಳಾದ ಬೀದರ, ಭಾಲ್ಕಿ, ಬಸವಕಲ್ಯಾಣ, ಹುಮನಾಬಾದ, ಔರಾದ ಈ ಐದು ತಾಲ್ಲೂಕುಗಳನ್ನು ಆಯ್ದು ಕೊಳ್ಳಲಾಗಿದೆ. ಒಂದೊಂದು ತಾಲ್ಲೂಕುದಿಂದ 10 ಪ್ರಾಥಮಿಕ ಶಾಲೆಗಳನ್ನು, 5 ಸರ್ಕಾರಿ ಕಿರಿಯ, ಹಿರಿಯ ಪ್ರಾಥಮಿಕ ಶಾಲೆಗಳನ್ನು ಆರಿಸಿಕೊಳ್ಳಲಾಗಿದೆ. ಮತ್ತು 5 ಖಾಸಗಿ ಅನುದಾನಿತ, ಅನುದಾನರಹಿತ ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಶಾಲೆಗಳು ಹೀಗೆ ಜಿಲ್ಲೆಯಲ್ಲಿನ ಒಟ್ಟು 50 ಪ್ರಾಥಮಿಕ ಶಾಲೆಗಳನ್ನು ಮಾದರಿಯಾಗಿ ತೆಗೆದುಕೊಂಡು ಜಿಲ್ಲೆಯಲ್ಲಿನ ಆಯಾ ತಾಲ್ಲೂಕಿನ ಶಿಕ್ಷಕರು ಹಾಜರಾತಿ, ಸಮಯ ಪಾಲನೆ, ಪಾಠ ಬೋಧನೆ, ಪಿಠೋಪಕರಣಗಳ ಬಳಕೆ, ಮಕ್ಕಳ ಕಲಿಕೆ, ಮೂಲಭೂತ ಸೌಲಭ್ಯ ಇತ್ಯಾದಿ ಹಾಗೂ ಖಾಸಗಿ ಪ್ರಾಥಮಿಕ ಶಾಲೆಗಳಿಗೂ ಮತ್ತು ಸರ್ಕಾರಿ ಪ್ರಾಥಮಿಕ ಶಾಲೆಗಳಿಗೂ ಇರುವ ವ್ಯತ್ಯಾಸ ಶಿಕ್ಷಣದ ಗುಣಮಟ್ಟ ತೌಲನೀಕ ಅಧ್ಯಯನ ಇತ್ಯಾದಿ ಸಮಗ್ರವಾದ ಮಾಹಿತಿಯನ್ನು ಸಂಗ್ರಹಿಸಿ ಬರೆಯಲಾಗಿದೆ. ಇಲಾಖೆಯಿಂದ ಸಿಗುವ ಸೌಲಭ್ಯದ ಬಳಕೆ ದುರ್ಬಳಕೆ, ಶಾಲೆಗೆ ದಾಖಲಾಗದ ಮಕ್ಕಳ ಬಗ್ಗೆ, ಶಾಲೆಗೆ ದಾಖಲಾಗಿ ಸತತ ಗೈರು ಹಾಜರಿ ಇರುವುದು, ಮಧ್ಯದಲ್ಲಿ ಶಾಲೆ ಬಿಡುವ ಕಾರಣ ಪಾಲಕರ ಆಸಕ್ತಿ ಇತ್ಯಾದಿ ವಿಷಯಗಳನ್ನು ಸಂಗ್ರಹಿಸಿ ಬರೆಯಲಾಗಿದೆ.

**ಭಾಲ್ಕಿ ತಾಲ್ಲೂಕು:–**

1) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಭೀಮನಗರ ಭಾಲ್ಕಿ.
2) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಗೋರಚಿಂಚೋಳಿ.
3) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಮೇಹಕರ.
4) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಅಂಬೇಸಾಂಗವಿ.
5) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಭಾತಂಬ್ರಾ.

**ಖಾಸಗಿ ಪ್ರಾಥಮಿಕ ಶಾಲೆಗಳು:–**

1) ಭಾಲ್ಕೇಶ್ವರ ಹಿರಿಯ ಪ್ರಾಥಮಿಕ ಶಾಲೆ (ಅನುದಾನರಹಿತ)
2) ಶ್ರೀಮತಿ ಗಂಗಮ್ಮಾ ಭೂರಾಳೆ ಹಿರಿಯ ಪ್ರಾಥಮಿಕ ಶಾಲೆ (ಅನುದಾನಿತ)
3) ವಿದ್ಯಾಭಾರತಿ ಹಿರಿಯ ಪ್ರಾಥಮಿಕ ಶಾಲೆ ದಾಡಗಿ (ಅನುದಾನಿತ)
4) ಮಥುರಾಬಾಯಿ ಹಿರಿಯ ಪ್ರಾಥಮಿಕ ಶಾಲೆ ಹಲ್ಸಿ ತುಗಾಂವ (ಅನುದಾನಿತ)
5) ದಿವ್ಯಜ್ಯೋತಿ ಹಿರಿಯ ಪ್ರಾಥಮಿಕ ಶಾಲೆ ಭಾಲ್ಕಿ. (ಅನುದಾನರಹಿತ)

## 2) ಬಸವಕಲ್ಯಾಣ ತಾಲ್ಲೂಕು:-

**ಸರ್ಕಾರಿ ಪ್ರಾಥಮಿಕ ಶಾಲೆಗಳು**

1) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಹುಲಸೂರ
2) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಗೋರ್ಟಾ (ಬಿ)
3) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮುಚಳಂಬ
4) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಧನ್ನೂರ (ವಾಡಿ)
5) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬೇಲೂರು

**ಖಾಸಗಿ ಪ್ರಾಥಮಿಕ ಶಾಲೆಗಳು**

1) ಶಾಂತಿನೀಕೇತನ ಹಿರಿಯ ಪ್ರಾಥಮಿಕ ಶಾಲೆ ಬಸವಕಲ್ಯಾಣ (ಅನುದಾನಿತ)
2) ವಿವೇಕಾನಂದ ಹಿರಿಯ ಪ್ರಾಥಮಿಕ ಶಾಲೆ ಬಸವಕಲ್ಯಾಣ (ಅನುದಾನಿತ)
3) ಕರ್ನಾಟಕ ಹಿರಿಯ ಪ್ರಾಥಮಿಕ ಶಾಲೆ ರಾಜೇಶ್ವರ. (ಅನುದಾನಿತ)
4) ಸಿದ್ಧರಾಜ ಪ್ರಾಥಮಿಕ ಶಾಲೆ ಬಸವಕಲ್ಯಾಣ (ಅನುದಾನರಹಿತ)
5) ಮಹಾತ್ಮಾಗಾಂಧಿ ಹಿರಿಯ ಪ್ರಾಥಮಿಕ ಶಾಲೆ ಮುಡಬಿ (ಅನುದಾನಿತ)

## 3) ಬೀದರ ತಾಲ್ಲೂಕು:-

**ಸರ್ಕಾರಿ ಪ್ರಾಥಮಿಕ ಶಾಲೆಗಳು**

1) ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಲಾಲಬಾಗ್
2) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ನೌಬಾದ
3) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಆನಂದನಗರ
4) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಚೌಳಿ
5) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಶಹಾಗಂಜ ಬೀದರ

**ಖಾಸಗಿ ಪ್ರಾಥಮಿಕ ಶಾಲೆಗಳು**

1) ಸರಸ್ವತಿ ಹಿರಿಯ ಪ್ರಾಥಮಿಕ ಶಾಲೆ ಶಹಾಗಂಜ ಬೀದರ. (ಅನುದಾನಿತ)
2) ಶ್ರೀ ಸಾಯಿ ಪಬ್ಲೀಕ್ ಶಾಲೆ ಬೀದರ (ಅನುದಾನಿತ)
3) ಹಿಮಾಲಯ ಪ್ರಾಥಮಿಕ ಶಾಲೆ ನೌಬಾದ (ಅನುದಾನರಹಿತ)
4) ಬುದ್ಧ ಪ್ರೀಯಾ ಪ್ರಾಥಮಿಕ ಶಾಲೆ ಪ್ರತಾಪನಗರ ಬೀದರ (ಅನುದಾನಿತ)
5) ಶ್ರೀ ರಾಘವೇಂದ್ರ ಹಿರಿಯ ಪ್ರಾಥಮಿಕ ಶಾಲೆ ಬೀದರ (ಅನುದಾನಿತ)

**4) ಹುಮನಾಬಾದ ತಾಲ್ಲೂಕು:–**

**ಸರ್ಕಾರಿ ಪ್ರಾಥಮಿಕ ಶಾಲೆಗಳು**

1) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ದುಬಲಗುಂಡಿ.
2) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ವರವಟ್ಟಿ (ಕೆ)
3) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಜಲಸಂಗಿ
4) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಹುಮನಾಬಾದ
5) ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಕಲ್ಲೂರ ತಾಂಡಾ

**ಖಾಸಗಿ ಪ್ರಾಥಮಿಕ ಶಾಲೆಗಳು**

1) ನಗರೇಶ್ವರ ಹಿರಿಯ ಪ್ರಾಥಮಿಕ ಶಾಲೆ ಹುಮನಾಬಾದ (ಅನುದಾನರಹಿತ)
2) ಲಕ್ಷ್ಮಿವೇಂಕಟೇಶ ಪ್ರಾಥಮಿಕ ಶಾಲೆ ಹುಮನಾಬಾದ (ಅನುದಾನಿತ)
3) ಮೌನೇಶ್ವರ ಹಿರಿಯ ಪ್ರಾಥಮಿಕ ಶಾಲೆ ಹುಮನಾಬಾದ (ಅನುದಾನಿತ)
4) ಕಿನ್ನರಿ ಪ್ರಾಥಮಿಕ ಶಾಲೆ ಹಳ್ಳಿಕೇಡ (ಕೆ) (ಅನುದಾನರಹಿತ)
5) ಕರಿಬಸವೇಶ್ವರ ಪ್ರಾಥಮಿಕ ಶಾಲೆ ಹುಡುಗಿ(ಅನುದಾನಿತ)

**5) ಔರಾದ ತಾಲ್ಲೂಕು:–**

**ಸರ್ಕಾರಿ ಪ್ರಾಥಮಿಕ ಶಾಲೆಗಳು**

1) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಔರಾದ
2) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಸಂಗಮ.
3) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಳತ (ಕೆ)
4) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಳತ (ಬಿ)
5) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ನಿಟ್ಟೂರ (ಕೆ)

**ಖಾಸಗಿ ಪ್ರಾಥಮಿಕ ಶಾಲೆಗಳು**

1) ನಾಲಂದಾ ಹಿರಿಯ ಪ್ರಾಥಮಿಕ ಶಾಲೆ ಔರಾದ (ಅನುದಾನಿತ)
2) ತಿರುಮಲಾ ಹಿರಯ ಪ್ರಾಥಮಿಕ ಶಾಲೆ ಔರಾದ (ಬಿ) (ಅನುದಾನಿತ)
3) ಮಹಾತ್ಮಾಗಾಂಧಿ ಹಿರಿಯ ಪ್ರಾಥಮಿಕ ಶಾಲೆ ಔರಾದ (ಅನುದಾನಿತ)
4) ನವಚೇತನ ಕಿರಿಯ ಪ್ರಾಥಮಿಕ ಶಾಲೆ ಔರಾದ (ಅನುದಾನರಹಿತ)
5) ಲಿಟ್ಲ ಫ್ಲಾವರ್ ಪ್ರಾಥಮಿಕ ಶಾಲೆ ಔರಾದ (ಅನುದಾನರಹಿತ)

ಅಧ್ಯಯ:– 5

## ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳು

(ಕಟ್ಟಡ, ಕಟ್ಟಡದ ವ್ಯವಸ್ಥೆ, ಗ್ರಂಥಾಲಯ, ಕಂಪೌಂಡು, ಶಾಲೆ ಕೋಣೆಗಳು ವ್ಯವಸ್ಥೆ, ವಿದ್ಯುಚ್ಛಕ್ತಿ, ರಸ್ತೆ, ಕುಡಿಯುವ ನೀರು, ಪಾಠೋಪಕರಣ, ಪಿಠೋಪಕರಣ, ಆಟದ ಮೈದಾನ, ಪ್ರಯೋಗಾಲಯ, ಕಂಪ್ಯೂಟರ್, ನೈರ್ಮಲ್ಯ, ಶೌಚಾಲಯ, ಮಧ್ಯಾಹ್ನ, ಬಿಸಿಊಟದ ವ್ಯವಸ್ಥೆ)

ಬೀದರ ಜಿಲ್ಲೆಯಲ್ಲಿ 5 ತಾಲ್ಲೂಕುಗಳು ಇವೆ ಅವುಗಳು ಬೀದರ, ಭಾಲ್ಕಿ, ಬಸವಕಲ್ಯಾಣ, ಹುಮನಾಬಾದ, ಔರಾದ ಈ ತಾಲ್ಲೂಕುಗಳಲ್ಲಿ ಒಂದೊಂದು ತಾಲ್ಲೂಕುದಿಂದ 5 ಸರ್ಕಾರಿ ಪ್ರಾಥಮಿಕ ಶಾಲೆಗಳು, 5 ಖಾಸಗಿ ಅನುದಾನಿತ, ಅನುದಾನರಹಿತ ಪ್ರಾಥಮಿಕ ಶಾಲೆಗಳನ್ನು ಆಯ್ದುಕೊಂಡಿದ್ದು, ಹೀಗೆ ಒಂದೊಂದು ತಾಲ್ಲೂಕುದಿಂದ ಒಟ್ಟು 10 ಪ್ರಾಥಮಿಕ ಶಾಲೆಗಳನ್ನು ಆಯ್ದುಕೊಳ್ಳಲಾಗಿದೆ.

ಭಾಲ್ಕಿ ತಾಲ್ಲೂಕುದಿಂದ 5 ಸರ್ಕಾರಿ ಪ್ರಾಥಮಿಕ ಶಾಲೆಗಳನ್ನು ಆರಿಸಿಕೊಂಡಿದ್ದು ಈ ಕೆಳಗಿನಂತಿವೆ.

**1) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಭೀಮನಗರ ಭಾಲ್ಕಿ.**

ಈ ಶಾಲೆಯು 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲಿದ್ದು, ದಲಿತ ಮತ್ತು ಇತರೆ ಹಿಂದುಳಿದ ಓಣಿಯಲ್ಲಿ ಇದೆ. ಇಲ್ಲಿ ಶ್ರೀಮತಿ ನಿರ್ಮಲಾ ಕೆ. ಚೆಲ್ವಾ ಮುಖ್ಯ ಗುರುಗಳು ಇದ್ದಾರೆ. ಒಬ್ಬರು ದೈಹಿಕ ಶಿಕ್ಷಕಿ, 6 ಜನ ಸಹ ಶಿಕ್ಷಕಿಯರಿದ್ದಾರೆ. ಭಾಲ್ಕಿ ಪಟ್ಟಣದಲ್ಲಿ ಒಂದು ಮಾದರಿ ಪ್ರಾಥಮಿಕ ಶಾಲೆ ಇದೆ. ಗಂಡು ಮಕ್ಕಳು 120 ಮತ್ತು ಹೆಣ್ಣು ಮಕ್ಕಳು 145 ಒಟ್ಟು 265 ಮಕ್ಕಳು ದಾಖಲಾಗಿದ್ದು. ದಿನಾಲು 250 ರವರೆಗೆ ಹಾಜರೀರುತ್ತಾರೆ. ಶಿಕ್ಷಕರು ದಿನಾಲು ವೇಳಾ ಪಟ್ಟಿಯಂತೆ ಹಾಜರಿದ್ದು, ಸಮಯಪಾಲನೆಯಿದೆ. ಅಲ್ಲದೆ ಪಾಠಕ್ಕೆ ಸಂಬಂಧಪಟ್ಟಂತೆ ಪಾಠೋಪಕರಣಗಳ ಬಳಕೆ ಮಾಡುತ್ತಾರೆ. ವಿಷಯವಾರು ಶಿಕ್ಷಕಿಯರ ಪಾಠೋಪಕರಣಗಳು ಇವೆ. ಕೆಲವು ಇಲಾಖೆಯಿಂದ ಸರಬರಾಜು ಮಾಡಿದ ಪಾಠೋಪಕರಣಗಳಿವೆ. ಒಟ್ಟು 11 ಕೋಣೆಗಳಿವೆ ಸಿಬ್ಬಂದಿಗೆ ಮತ್ತು ಮಕ್ಕಳಿಗಾಗಿ ಪ್ರತ್ಯೇಕವಾಗಿ ಹೆಣ್ಣು ಹಾಗೂ ಗಂಡು ಮಕ್ಕಳಿಗೆ ಪ್ರತ್ಯೇಕವಾಗಿ ಶೌಚಾಲಯ, ಮೂತ್ರಾಲಯ ಇವೆ, ಕುಡಿಯುವ ನೀರಿನ ಸಲುವಾಗಿ ಬೋರವೆಲ್ ಇದೆ, ವಿದ್ಯುತ್ ಇದೆ, ಆಟದ ಮೈದಾನ ಇಲ್ಲ, ಗ್ರಂಥಾಲಯ ಪುಸ್ತಕಗಳು ಇವೆ, ವಿಜ್ಞಾನ ಕಿಟ್ ಇದೆ, ಶಾಲಾ ಕೈತೋಟ ಇಲ್ಲ. ಈ ವರ್ಷದಲ್ಲಿ ಪಠ್ಯ ಪುಸ್ತಕ, ಸಮವಸ್ತ್ರ, ಬ್ಯಾಗ, ನೋಟ ಬುಕ್ ಹಂಚಿರುತ್ತಾರೆ. ಮಧ್ಯಾಹ್ನ ಬಿಸಿಯೂಟ ದಿನಾಲೂ ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿ ಬಡಿಸುತ್ತಾರೆ. ಶಾಲಾ ಅನುದಾನ, ಶಿಕ್ಷಕರ ಅನುದಾನ ಹಾಗೂ ನಿರ್ವಹಣೆಗಾಗಿ ಹಣ ಬಂದಿದ್ದು, ಶಿಕ್ಷಕರ ಅನುದಾನ ತಲಾ 500/– ರೂಪಾಯಿ ಹಂಚಿರುತ್ತಾರೆ.

ಮಕ್ಕಳಿಗೆ ಪಾಠ ಓದಿಸಿಕೊಂಡಿದಾಗ ಉತ್ತಮ ರೀತಿಯಿಂದ ಓದಿದ್ದರು, ಕಲಿಕೆಯು ಚೆನ್ನಾಗಿದ್ದದ್ದು ಕಂಡು ಬಂದಿದೆ. ಆಟ, ಪಾಠಗಳಲ್ಲಿ ತಾಲ್ಲೂಕಿನಲ್ಲಿಯೇ ಉತ್ತಮ ಸಾಧನೆಗೈಯುತ್ತಿದ್ದಾರೆ. ಕಿರಿಯ ತರಗತಿಗಳಿಗೆ ನಲಿ–ಕಲಿ ಆಧಾರಿತ ಚಟುವಟಿಕೆಕೆ ಮೂಲಕ ಕಾರ್ಡಗಳ ಬಳಕೆ ಮಾಡುತ್ತ ಆಸಕ್ತಿಯಿಂದ

ಕಲಿಯುತ್ತಿದ್ದರು, ತಟ್ಟೆ, ಛಪ್ಪರ, ಬ್ಯಾಗ, ಗೋಡೆಗೆ ಕಪ್ಪು ಹಲಗೆ, ಶೃಂಗಾರ ಇತ್ಯಾದಿ ಮಾಡಿರುತ್ತಾರೆ. ಮಕ್ಕಳ ಕಲಿ ಚೆನ್ನಾಗಿದೆ, ಬಡ ಮಕ್ಕಳಿರುವುದರಿಂದ ಮೇಲಿಂದ ಮೇಲೆ ಶಾಲೆ ತಪ್ಪಿಸುತ್ತಿರುವುದ ಕಂಡು ಬಂದಿದೆ.

**2) ಸರ್ಕಾರಿ ಪ್ರಾಥಮಿಕ ಶಾಲೆ ಗೋರಚಿಂಚೋಳಿ:-**

ಸದರಿ ಶಾಲೆಯು ಕನ್ನಡ ಮತ್ತು ಮರಾಠಿ ಮಾಧ್ಯಮದಲ್ಲಿ 1 ರಿಂದ 8ನೇ ತರಗತಿವರೆಗೆ ನಡೆಯುತ್ತಲಿದ್ದು, ಇಲ್ಲಿ ಶ್ರೀಮತಿ ಗಂಗಮ್ಮಾ ಮುಖ್ಯ ಗುರುಗಳಾಗಿ ಕೆಲಸ ಮಾಡುತ್ತಲಿದ್ದಾರೆ. ಮಕ್ಕಳ ಸಂಖ್ಯೆ ಗನುಗುಣವಾಗಿ ಶಿಕ್ಷಕರ ಸಂಖ್ಯೆ ಇದೆ. 4 ಕೋಣೆಗಳು ಬೀಳುವ ಸ್ಥಿತಿಯಲ್ಲಿವೆ, ಶಿಕ್ಷಕರಲ್ಲಿ ಸಮಯ ಪಾಲನೆಯಿದೆ. ಮಕ್ಕಳ ಕಲಿಕೆ ಕಿರಿಯ ತರಗತಿಯ ಮಕ್ಕಳ ಕಲಿಕೆ ಸಾಧಾರಣವಾಗಿದೆ, ಹಿರಿಯ ಪ್ರಾಥಮಿಕ ಶಾಲೆ ಮಕ್ಕಳ ಕಲಿಕೆ ಚೆನ್ನಾಗಿರುತ್ತದೆ. ಈ ಗ್ರಾಮದಲ್ಲಿ ಇನ್ನೊಂದು ಅನುದಾನಿತ ಪ್ರಾಥಮಿಕ ಶಾಲೆ ಇದೆ. ಆದರೆ ಈ ಶಾಲೆಯಲ್ಲಿ ಮಕ್ಕಳ ಸಂಖ್ಯೆ ಕಡಿಮೆ ಇದೆ ಮಕ್ಕಳ ಕಲಿಕೆಯು ಸಾಧಾರಣವಾಗಿದೆ ಹೀಗಾಗಿ ಖಾಸಗಿ ಶಾಲೆಗಿಂತಲೂ ಸರ್ಕಾರಿ ಶಾಲೆಯಲ್ಲಿ ಮಕ್ಕಳ ಸಂಖ್ಯೆ ಹೆಚ್ಚಾಗಿದೆ. ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಮಕ್ಕಳ ದಾಖಲೆಯಂತೆ ಹಾಜರಾತಿ ಇರುವುದಿಲ್ಲ. ಕಾರಣ ಗ್ರಾಮೀಣ ಭಾಗದ ಊರಲ್ಲಿ ಪಾಲಕರು ತಮ್ಮ ಸಹಾಯಕ್ಕಾಗಿ ಮಕ್ಕಳನ್ನು ಕೆಲಸಕ್ಕಾಗಿ ತೆಗೆದುಕೊಂಡು ಹೋಗುತ್ತಾರೆ. ಪಾಲಕರು ಬಡತನ ಇರುವುದರಿಂದ ಓದುವ ಮಕ್ಕಳಿಗೆ ಕೆಲಸಕ್ಕೆ ನೌಕರಿ ಇಡುತ್ತಾರೆ. ಹೀಗಾಗಿ ಗೈರು ಹಾಜರಿ ಸಂಖ್ಯೆ ಹೆಚ್ಚಾಗಿರುವುದು ಕಂಡು ಬಂದಿದೆ.

ಸರ್ಕಾರದಿಂದ ಕೊಡುತ್ತಿರುವ ಸೌಲಭ್ಯಗಳು ಅಂದರೆ ಪಠ್ಯ ಪುಸ್ತಕಗಳು, ಸಮವಸ್ತ್ರ, ಮಧ್ಯಾಹ್ನ ಬಿಸಿಊಟ, ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡದ ಮಕ್ಕಳಿಗೆ ನೋಟ ಬುಕ್, ಬ್ಯಾಗ ವಿತರಿಸುತ್ತಾರೆ. ಅಲ್ಲದೆ ಶಿಷ್ಯ ವೇತನ ಹಂಚಿರುತ್ತಾರೆ. ಶೌಚಾಲಯವಿದೆ, ಕುಡಿಯುವ ನೀರಿನ ವ್ಯವಸ್ಥೆ ಇದೆ, ವಿದ್ಯುತ್ ಇದೆ, ಶಾಲೆಗೆ ಭಾಗಶ: ಸುತ್ತು ಗೋಡೆ ಇದೆ. ಆಟಿಕೆ ಸಾಮಗ್ರಿಗಳು ಕಡಿಮೆ ಇವೆ. ಶಿಕ್ಷಕರು ತಯಾರಿಸಿದ ಪಾಠೋಪಕರಣಗಳಿವೆ, ಕೆಲವು ತರಗತಿಗಳಿಗೆ ಮಾತ್ರ ಬೆಂಚೆಸಗಳಿವೆ. ಶಾಲೆಯಲ್ಲಿ ತೋಟವಿಲ್ಲ. ಈ ಶಾಲೆಯು ಗ್ರಾಮದ ಹೊರಗಡೆ ಪಶ್ಚಿಮ ದಿಕ್ಕಿನ ಕಡೆ ಇದೆ. ಮಕ್ಕಳ ಕಲಿಕೆಯು ಸುಧಾರಿಸಬೇಕಾಗಿದೆ.

**3) ಸ.ಮಾ.ಪ್ರಾಥಮಿಕ ಶಾಲೆ ಮೇಹಕರ**

ಈ ಶಾಲೆಯು ಕನ್ನಡ ಮತ್ತು ಮರಾಠಿ ಮಾಧ್ಯಮದಲ್ಲಿದೆ. 1 ರಿಂದ 7 ಕನ್ನಡ ಮತ್ತು ಮರಾಠಿ ಮಾಧ್ಯಮದಲ್ಲಿ ಶಾಲೆ ನಡೆಯುತ್ತಲಿದೆ. ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿ ಭಾಗದ ಗ್ರಾಮವಾಗಿದೆ. ಇಲ್ಲಿ ಶ್ರೀ ಶಿವರಾಯ ಬಡಿಗೇರ್ ಮುಖ್ಯ ಗುರುಗಳಾಗಿದ್ದಾರೆ. 1 ರಿಂದ 7ನೇ ತರಗತಿ ಮರಾಠಿ ಮಾಧ್ಯಮದಲ್ಲಿ 349 ಮಕ್ಕಳಿದ್ದಾರೆ. 7 ಜನ ಶಿಕ್ಷಕರಿದ್ದಾರೆ. ಕನ್ನಡ ಮಾಧ್ಯಮದಲ್ಲಿ 1 ರಿಂದ 7ನೇ ತರಗತಿಗೆ 135 ಮಕ್ಕಳಿದ್ದಾರೆ. 4 ಜನ ಶಿಕ್ಷಕರಿದ್ದಾರೆ. ಎರಡು ತರಗತಿಗೆ ಒಟ್ಟು 23 ಕೋಣೆಗಳಿವೆ. ದುರಸ್ತಿ ಮಾಡಬೇಕಾದ ಕೋಣೆಗಳು 12 ಇವೆ. ಶೌಚಾಲಯವಿದೆ, ಕುಡಿಯುವ ನೀರಿನ ವ್ಯವಸ್ಥೆ ಇದೆ, ವಿದ್ಯುತ್ ಇದೆ, ಆಟದ ಮೈದಾನವಿದೆ, ಪಾಠೋಪಕರಣಗಳಿವೆ, ಮಕ್ಕಳಿಗೆ ಕೊಡಲು ಬೆಂಚೆಸಗಳು ಕೆಲವು ತರಗತಿಗಳಿಗೆ ಮಾತ್ರ ಇವೆ. ಗ್ರಂಥಾಲಯ ಪುಸ್ತಕಗಳಿವೆ, ಆಟಿಕೆ ಸಾಮಗ್ರಿಗಳಿವೆ, ಶಾಲಾ ತೋಟ ಇಲ್ಲ, ಇಂದು ಮಧ್ಯಾಹ್ನ ಬಿಸಿಊಟ

ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿದ್ದರು, ತರಕಾರಿ ಹಾಕಿದ್ದರು, ಶಾಲಾ ಅನುದಾನ ಮತ್ತು ಶಿಕ್ಷಕರ ಅನುದಾನ ಬಂದಿದೆ, ಶಿಕ್ಷಕರ ಅನುದಾನ ಹಂಚಿರುತ್ತಾರೆ.

ಶಿಕ್ಷಕರು ಸಮಯಕ್ಕೆ ಸರಿಯಾಗಿ ಶಾಲೆಗೆ ಬರುತ್ತಾರೆ, ಸಮಯಪಾಲನೆಯಿದೆ, ಮಕ್ಕಳಿಗೆ ಪಠ್ಯ ಪುಸ್ತಕ, ಸಮವಸ್ತ್ರ ಹಂಚಿರುತ್ತಾರೆ. ಪ.ಜಾ/ಪ.ಪಂ. ಮಕ್ಕಳಿಗೆ ನೋಟ ಬುಕ್, ಬ್ಯಾಗ್, ಶಿಷ್ಯವೇತನ ಹಂಚಿರುತ್ತಾರೆ, ದಾಖಲಾತಿಯಂತೆ ಹಾಜರಾತಿಯು ಕಡಿಮೆ ಇದೆ, ಮಕ್ಕಳ ಕಲಿಕೆಯು ಸಾಧಾರಣವಾಗಿದೆ, ಶಾಲೆಯ ಬಯಲಲ್ಲಿ ಸುಮಾರು 200 ಸಸಿಗಳನ್ನು ನೆಟ್ಟಿರುತ್ತಾರೆ, ಶಾಲೆಯ ವಾತಾವರಣ ಸ್ವಚ್ಛ ಹಾಗೂ ಸುಂದರ ವಾತಾವರಣ ಇರುವುದು ಕಂಡು ಬಂದಿದೆ.

ಶಿಕ್ಷಕರಲ್ಲಿ ಸಮಯಪಾಲನೆಯಿದ್ದು, ಜವಾಬ್ದಾರಿಯಿಂದ ತಮ್ಮ ತಮ್ಮ ಕೆಲಸ ಮಾಡುತ್ತಾರೆ, ಪಾಠಬೋಧನೆ ಮಾಡುವಾಗ ಪಾಠಕ್ಕೆ ಸಂಬಂಧಿಸಿದ ಪಾಠೋಪಕರಣಗಳನ್ನು ಬಳಸುತ್ತಾರೆ. ಮಕ್ಕಳ ಕಲಿಕೆ ಉತ್ತಮವಾಗಿರುವುದು ಕಂಡು ಬಂದಿದೆ. ಮಕ್ಕಳು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿಯು ಮುಂಚೂಣಿಯಲ್ಲಿದ್ದಾರೆ. ಈ ಶಾಲೆಯು ಸ್ಥಳಿಯ ಶಾಸಕರ ಕ್ಷೇತ್ರದ ಶಾಲೆಯಾಗಿದೆ. ಇಲಾಖೆಯು ಪ್ರತಿ ಶಾಸಕರ ಕ್ಷೇತ್ರಕ್ಕೆ ಒಂದು ಮಾದರಿ ಶಾಲೆ ಎಂದು ನಿಗದಿಪಡೆದಿದೆ.

**4) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಅಂಬೆಸಾಂಗವಿ.**

ಈ ಶಾಲೆಯು ಕನ್ನಡ ಮತ್ತು ಮರಾಠಿ 1 ರಿಂದ 7ನೇ ತರಗತಿಯವರೆಗೆ ನಡೆಯುತ್ತಲಿದ್ದು, ಶ್ರೀ ವಿಠಲರಾವ ಗಾಯಕವಾಡ ಶಾಲೆಯ ಖಾಯಂ ಮುಖ್ಯ ಗುರುಗಳಾಗಿದ್ದಾರೆ. ಕನ್ನಡ ಮಾಧ್ಯಮದ 6 ಜನ ಶಿಕ್ಷಕರಿದ್ದಾರೆ, ಮರಾಠಿ ಮಾಧ್ಯಮದ 6ಜನ ಶಿಕ್ಷಕರಿದ್ದಾರೆ, ಮಕ್ಕಳ ಸಂಖ್ಯೆ ಕನ್ನಡ 192, ಮರಾಠಿ ಮಾಧ್ಯಮದ 96 ಮಕ್ಕಳಿದ್ದಾರೆ, ಇಂದು 190 ಕನ್ನಡ ಮಾಧ್ಯಮದ ಮಕ್ಕಳು ತರಗತಿಯಲ್ಲಿ ಹಾಜರಿದ್ದರು, 92 ಮಕ್ಕಳು ಮರಾಠಿ ಮಾಧ್ಯಮದಲ್ಲಿ ಹಾಜರಿದ್ದರು, ಒಟ್ಟು 10 ತರಗತಿ ಕೋಣೆಗಳಿವೆ. 7 ಪಕ್ಕಾ, 3 ಕಚ್ಚಾವಿದ್ದು ಮೇಲೆ ಟೀನ್‌ಗಳು ಇವೆ, ಶೌಚಾಲಯವಿದೆ, ಕುಡಿಯುವ ನೀರಿನ ವ್ಯವಸ್ಥೆ ಇದೆ, ವಿದ್ಯುತ್ ಇದೆ, ಆಟದ ಮೈದಾನವಿದೆ, ವಿಜ್ಞಾನ ಕಿಟ್ ಇದೆ, ಶಾಲಾ ತೋಟ ಇಲ್ಲ.

ಶಿಕ್ಷಕರು ವೇಳಾಪಟ್ಟಿಯಂತೆ ಶಾಲೆಗೆ ಹಾಜರಿರುತ್ತಾರೆ, ಮಕ್ಕಳ ಕಲಿಕೆ ಸಾಧಾರಣವಾಗಿದೆ, ಪಾಠೋಪಕರಣಗಳಿವೆ, ಮಕ್ಕಳಿಗೆ ಕೊಡಲು ಆಸನದ ವ್ಯವಸ್ಥೆ ಇರುವುದಿಲ್ಲ, ಫರ್ಸಿ ಮೇಲೆ ಕೂಡುತ್ತಾರೆ, ಆಟಿಕೆ ಸಾಮಗ್ರಿಗಳು ಇವೆ, ಗ್ರಂಥಾಲಯ ಪುಸ್ತಕಗಳಿವೆ, ಶಾಲಾ ತೋಟ ಇಲ್ಲ, ಇಂದು 150 ಮಕ್ಕಳು ಮಧ್ಯಾಹ್ನ ಬಿಸಿ ಊಟ ಮಾಡಿದ್ದರು, ಆಡುಗೆ ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿದ್ದರು, ಶಾಲಾ ಅನುದಾನ ಶಿಕ್ಷಕರ ಅನುದಾನ ಬಂದಿದ್ದು ಶಿಕ್ಷಕರಿಗೆ ಹಂಚಿರುತ್ತಾರೆ, ಮಕ್ಕಳಿಗೆ ಸಮವಸ್ತ್ರ ಪಠ್ಯ ಪುಸ್ತಕ ಹಂಚಿರುತ್ತಾರೆ, ಬ್ಯಾಗ್, ನೋಟ ಬುಕ್ ಹಂಚಿರುತ್ತಾರೆ, ಈ ಶಾಲೆಯಲ್ಲಿ ದೀನ ದಲಿತ, ಬಡ ಕುಟುಂಬದ ಜನರ ಮಾತ್ರ ಸರ್ಕಾರಿ ಶಾಲೆಯಲ್ಲಿ ಮಕ್ಕಳಿಗೆ ಪ್ರವೇಶ ಮಾಡಿರುತ್ತಾರೆ, ದಿನ ನಿತ್ಯ ಮಕ್ಕಳು ಶಾಲೆಗೆ ಬಾರದ ಕಾರಣ ಕಲಿಕೆಯಲ್ಲಿ ಸಾಧಾರಣವಾಗಿದ್ದಾರೆ ಎಂದು ಮುಖ್ಯ ಗುರುಗಳು ಹೇಳುತ್ತಾರೆ.

## 5) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಭಾತಂಬ್ರಾ

ಸದರಿ ಸಾಲೆಯು 1 ರಿಂದ 7ನೇ ತರಗತಿವರೆಗೆ ಕನ್ನಡ ಹಾಗೂ 1 ರಿಂದ 8ನೇ ತರಗತಿ ವರೆಗೆ ಉರ್ದು ಮಾಧ್ಯಮದಲ್ಲಿ ನಡೆಯುತ್ತಲಿದ್ದು, ಮುಖ್ಯ ಗುರುಗಳಾದ ಶ್ರೀ ಕಾಶಿನಾಥರಾವ ಎಂ. ಚೆಲ್ವಾ ಎಂ.ಎ.ಎಂ.ಈಡ್ ಪದವಿಧರರಾಗಿದ್ದಾರೆ. ಕನ್ನಡ ಒಟ್ಟು ಮಕ್ಕಳ ಸಂಖ್ಯೆ 496, ಉರ್ದು ಮಾಧ್ಯಮದಲ್ಲಿ 274 ಮಕ್ಕಳ ದಾಖಲೆಯಾಗಿದೆ, ಕನ್ನಡ ಸಹ ಶಿಕ್ಷಕರು 13, ಮುಖ್ಯ ಗುರುಗಳು–1, ಒಟ್ಟು –14ಜನ ಕನ್ನಡ ಶಿಕ್ಷಕರಿದ್ದಾರೆ. ಉರ್ದು–7 ಜನ ಮತ್ತು 1–ಟಿಜಿಟಿ ಪದವಿಧರ ಶಿಕ್ಷಕರಿದ್ದಾರೆ, ಹೀಗೆ ಉರ್ದು ಒಟ್ಟು–8 ಜನ ಶಿಕ್ಷಕರಿದ್ದಾರೆ. ಒಟ್ಟು 12 ಕನ್ನಡ ತರಗತಿ ಕೊಣೆಗಳಿವೆ. ಉರ್ದು–8 ಕೋಣೆಗಳಿವೆ ಕುಡಿಯುವ ನೀರಿನ ಸೌಲಭ್ಯವಿದೆ, ಶೌಚಾಲಯವಿದೆ, ವಿದ್ಯುತ ಸೌಲಭ್ಯ, ಕಂಪ್ಯೂಟರಗಳಿವೆ, ಆಟಿಕೆ ಸಾಮಗ್ರಿಗಳಿವೆ, ವಿಜ್ಞಾನ ಸಾಮಗ್ರಿಗಳಿವೆ, ಗ್ರಂಥಾಲಯ ಪುಸ್ತಕಗಳಿವೆ, ಹಿರಿಯ ತರಗತಿ ಮಕ್ಕಳಿಗೆ ಕೂಡಲು ಬೆಂಚುಗಳಿವೆ, ಆಟದ ಮೈದಾನವಿದೆ, ಮಕ್ಕಳಿಗೆ ಸಿಗುವ ಸೌಲಭ್ಯದಲ್ಲಿ ಪುಠ್ಯ ಪುಸ್ತಕ, ನೋಟಬುಕ್, ಬ್ಯಾಗ, ಶಿಷ್ಯವೇತನ ಹಂಚಿರುತ್ತಾರೆ, ಮಧ್ಯಹ್ನ ಬಿಸಿಊಟ ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿದ್ದರು, ದಿನಾಲೂ ತರಕಾರಿ ಹಾಕುತ್ತಾರೆಂದು ಮಕ್ಕಳ ಹೇಳಿದ್ದರು, ಶಿಕ್ಷಕರ ಅನುದಾನ, ಶಿಕ್ಷಕರಿಗೆ ಹಂಚಿರುತ್ತಾರೆ, ಶಾಲಾ ಅನುದಾನ, ನಿರ್ವಹಣೆ ಶಾಲೆಗಾಗಿ ಅತಿ ಅವಶ್ಯಕತೆಯಾಗಿದ್ದು, ಸಾಮಗ್ರಿ ತಂದಿರುತ್ತಾರೆ. ಅದರಲ್ಲಿ ಶಾಲೆಯ ಮುಖ್ಯ ದ್ವಾರದ ಬಾಗಿಲು (ಗೇಟ್) ಕೂಡಿಸಿರುತ್ತಾರೆ.

## 6) ಶ್ರೀ ಭಾಲ್ಕೇಶ್ವರ ಹಿರಿಯ ಪ್ರಾಥಮಿಕ ಶಾಲೆ ಗಂಜ ಭಾಲ್ಕಿ

ಈ ಶಾಲೆಯು ಸ್ಥಳಿಯ ಭಾಲ್ಕಿಯ ಗಂಜ ಭಾಗದಲ್ಲಿ ನಡೆಯುತ್ತಲ್ಲಿದ್ದು, ಅನುದಾನ ರಹಿತ ಪ್ರಾಥಮಿಕ ಶಾಲೆ ಇದೆ, ಸದರಿ ಶಾಲೆಯ ಮುಖ್ಯ ಗುರುಗಳಾದ ಶ್ರೀ ಬಾಲಾಜಿ ಬಿರಾದಾರ ಇವರು, ಉತ್ತಮ ಗುಣಮಟ್ಟದ ಶಿಕ್ಷಣ ನೀಡುತ್ತಲಿದ್ದಾರೆ, ಈ ಶಾಲೆಯು 1 ರಿಂದ 7ನೇ ತರಗತಿಗೆ ಅನುಮತಿ ಪಡೆದಿರುತ್ತಾರೆ, ಒಟ್ಟು ಮಕ್ಕಳ ಸಂಖ್ಯೆ 322 ದಾಖಲಾಗಿ ಹೆಚ್ಚಿನ ಸಂಖ್ಯೆಯಲ್ಲಿ ಹಾಜರಾಗಿರುತ್ತಾರೆ, ಕಾರಣ ಪಟ್ಟಣ ಹಾಗೂ ನಗರ ಪ್ರದೇಶದಲ್ಲಿ ಪಾಲಕರು ಸುಶಿಕ್ಷಿತರಾಗಿದ್ದು, ಆರ್ಥಿಕವಾಗಿ ಶ್ರೀಮಂತರಾಗಿರುತ್ತಾರೆ, ಹೀಗಾಗಿ ಮಕ್ಕಳ ಕಲಿಕೆ ಬಗ್ಗೆ ಹೆಚ್ಚಿನ ಆಸಕ್ತಿವಹಿಸಿರುತ್ತಾರೆ. ಅಲ್ಲದೆ ಶಿಕ್ಷಕರು ಹೆಚ್ಚಿನ ಶ್ರಮ ಪಡುತ್ತಾರೆ, ಆದರೆ ಹೆಚ್ಚಿನ ತರಗತಿ ಕೋಣೆಗಳು ಟೀನ್ ಶೆಡ್‌ದಲ್ಲಿ ತರಗತಿ ನಡೆಸುತ್ತಾರೆ, ಹೆಚ್ಚಿನ ಸಂಖ್ಯೆಯಲ್ಲಿ ತರಬೇತಿ ಹೊಂದಿದ ಶಿಕ್ಷಕರು ಇಲ್ಲವೆಂಬುದು ಕಂಡು ಬಂದಿದೆ, ಆದರೆ ಮಕ್ಕಳ ಕಲಿಕೆ ಚೆನ್ನಾಗಿದೆ, ಶಿಕ್ಷಕರ ಸತತ ಪ್ರಯತ್ನವಿದೆ, ಅಲ್ಲದೆ ಆಡಳಿತ ಮಂಡಳಿಯ ಸದಸ್ಯರು ನಿಸ್ವಾರ್ಥ ಭಾವನೆಯಿಂದ ದುಡಿಯುತ್ತ ಹೆಚ್ಚಿನ ಪ್ರಗತಿಯ ದಾರಿಯಲ್ಲಿದ್ದಾರೆ, ಸರ್ಕಾರ ಮಾಡುವ ಕೆಲಸ ಖಾಸಗಿಯವರು ಪ್ರಗತಿಯ ಹಂತದಲ್ಲಿ ಗುಣಮಟ್ಟದ ಶಿಕ್ಷಣ ನೀಡುತ್ತಲಿದ್ದಾರೆ.

ಶಿಕ್ಷಕರ ಹಾಜರಾತಿ, ಸಮಯಪಾಲನೆ ವೇಳಾಪಟ್ಟಿಯಂತೆ ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬರುತ್ತಾರೆ, ಮಕ್ಕಳ ದಾಖಲಾತಿಯ ಪ್ರಕಾರ ಹಾಜರಾತಿಗಾಗಿ ಶಿಕ್ಷಕರು ಶ್ರಮ ಪಡುತ್ತಾರೆ, ಅಲ್ಲದೆ ಮಕ್ಕಳ ಕಲಿಕೆಗಾಗಿ ಹೆಚ್ಚಿನ ಗಮನಹರಿಸಿರುತ್ತಾರೆ, ಹೀಗಾಗಿ ಈ ಶಾಲೆಯಲ್ಲಿ ಮಕ್ಕಳ ಕಲಿಕೆ ಚೆನ್ನಾಗಿರುತ್ತದೆ, ಇಲಾಖೆಯಿಂದ ಯಾವುದೇ ಸೌಲಭ್ಯವಿಲ್ಲದಿದ್ದರೂ ಕಲಿಕೆ ಸುಧಾರಿಸಿದೆ.

## 7) ಶ್ರೀಮತಿ ಗಂಗಮ್ಮಾ ಭುರಾಳೆ ಹಿರಿಯ ಪ್ರಾಥಮಿಕ ಶಾಲೆ ಹಲಬರ್ಗಾ

ಈ ಶಾಲೆಯು ಅನುದಾನಿತ ಪ್ರಾಥಮಿಕ ಶಾಲೆಯಾಗಿದ್ದು, ಒಬ್ಬ ಮುಖ್ಯ ಗುರುಗಳು ಹಾಗೂ 8 ಜನ ಸಹ ಶಿಕ್ಷಕರಾಗಿದ್ದಾರೆ, ಎಲ್ಲರು ನೇಮಕಾತಿ ಅನುಮೋದನೆಯಾಗಿ ಮಾಸಿಕ ವೇತನ ಪಡೆಯುತ್ತಲ್ಲಿದ್ದಾರೆ, ಈ ಶಾಲೆಗಾಗಿ ಸ್ವಂತ ನಿವೇಶನವಿದ್ದು, ಸ್ವಂತ ಕಟ್ಟಡವಿರುತ್ತದೆ. 1 ರಿಂದ 7ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತ್ತಿದೆ. ಇತರೆ ಜಾತಿಗೆ ಸೇರಿದ ಆಡಳಿತ ಮಂಡಳಿಯಾಗಿರುತ್ತದೆ. ಒಟ್ಟು ಮಕ್ಕಳ ದಾಖಲಾತಿ 358 ಇರುತ್ತದೆ. ಇಂದಿನ ಮಕ್ಕಳ ಹಾಜರಾತಿ 344 ಇರುತ್ತದೆ. 1 ರಿಂದ 4ನೇ ತರಗತಿವರೆಗೆ ಮಕ್ಕಳ ಕಲಿಕೆ ಸಾಧಾರಣವಾಗಿರುತ್ತದೆ. 5 ರಿಂದ 7 ನೇ ತರಗತಿವರೆಗೆ ಮಕ್ಕಳ ಕಲಿಕೆ ಉತ್ತಮವಾಗಿರುತ್ತದೆ. ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ ಹಾಗೂ ಪಾಠಕ್ಕೆ ಸಂಬಂಧಿಸಿದ ಪಾಠೋಪಕರಣಗಳು ಬಳಸುತ್ತಾರೆ.

ಸದರಿ ಶಾಲೆ ಮೂಲಭೂತ ಸೌಲಭ್ಯ ಹೊಂದಿದ್ದು, ಶಾಲೆಯು ಉತ್ತಮ ವಾತಾವರಣ ಹೊಂದಿದೆ, ಮಕ್ಕಳ ಕಲಿಕೆಯ ಉತ್ತಮವಾಗಿರುತ್ತದೆ, ಮಕ್ಕಳಿಗೆ ಕೂಡಲು ಬೆಂಚಗಳ ವ್ಯವಸ್ಥೆ ಹಿರಿಯ ತರಗತಿಗಳಿಗೆ ಮಾತ್ರ ಇದೆ, ಕಿರಿಯ ತರಗತಿಯ ಮಕ್ಕಳು ಫರ್ಸಿ ಮೇಲೆ ಕೂಡುತ್ತಾರೆ.

## 8) ವಿಧ್ಯಾಭಾರತಿ ಹಿರಿಯ ಪ್ರಾಥಮಿಕ ಶಾಲೆ ದಾಡಗಿ:-

ಸದರಿ ಶಾಲೆಯು ಅನುದಾನಿತ ಪ್ರಾಥಮಿಕ ಶಾಲೆಯಾಗಿದ್ದು, 1ರಿಂದ 7ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಿದೆ. 7 ಜನ ಶಿಕ್ಷಕರ ನೇಮಕಾತಿ ಅನುಮೋದನೆಯಾಗಿದ್ದು, 6ಜನ ಶಿಕ್ಷಕರು ಮಾಸಿಕ ವೇತನ ಪಡೆಯುತ್ತಿದ್ದಾರೆ, ಒಬ್ಬ ಶಿಕ್ಷಕರು ವೇತನ ಪಡೆಯುತ್ತಿರಲಿಲ್ಲವೆಂದು ಕಂಡು ಬಂದಿದೆ, ಶಿಶುವಿಹಾರ ಸಹ ನಡೆಯುತ್ತಿದೆ, ಈ ಪ್ರಾಥಮಿಕ ಶಾಲೆಯಲ್ಲಿ ಒಟ್ಟು 301 ಮಕ್ಕಳ ದಾಖಲಾತಿಯಾಗಿದ್ದು, ಇಂದು 265 ಮಕ್ಕಳು ತರಗತಿಯಲ್ಲಿ ಹಾಜರಿದ್ದರು, ಶಾಲೆಗಾಗಿ ಸ್ವಂತ ನಿವೇಶನವಿದ್ದು, 8 ಕೋಣೆಗಳು ತರಗತಿ ಕೋಣೆಗಳು ಆರ್.ಸಿ.ಸಿ. ಇವೆ. ಶಿಕ್ಷಕರು ಶಾಲೆಯ ವೇಳಾಪಟ್ಟಿಯಂತೆ ಸರಿಯಾಗಿ ಪಾಠ ಬೋಧನೆ ಮಾಡುತ್ತಾರೆ, ಪಾಠಕ್ಕೆ ಸಂಬಂಧಿಸಿದ ಪಾಠೋಪಕರಣಗಳು ಬಳಸುತ್ತಾರೆ. ಕುಡಿಯುವ ನೀರು, ಶೌಚಾಲಯ ಇದೆ, ವಿದ್ಯುತ್ ಇದೆ, ಆಟದ ಮೈದಾನವಿದೆ, ಶಾಲೆಗಾಗಿ ಮೂಲಭೂತ ಸೌಲಭ್ಯವಿದ್ದು, ಪಾಠೋಪಕರಣ, ಪಿಠೋಪಕರಣಗಳು ಇವೆ, ಆಟಿಕೆ ಸಾಮಗ್ರಿಗಳಿವೆ, ಇಲಾಖೆಯ ನಿಯಮಗಳನ್ನು ಚಾಚು ತಪ್ಪದೆ ಪಾಲಿಸುತ್ತಿದ್ದಾರೆ. ಈ ಶಾಲೆಯು ಪರಿಶಿಷ್ಟ ಜಾತಿ ಆಡಳಿತ ಮಂಡಳಿಗೆ ಸೇರಿದೆ.

ಮಕ್ಕಳ ಕಲಿಕೆ ಚೆನ್ನಾಗಿದೆ, ಶಾಲಾ ಮಕ್ಕಳಿಗೆ ಸಂಸ್ಥೆಯಿಂದ ಸಮವಸ್ತ್ರ ಕೊಟ್ಟಿರುವುದಾಗಿ ಕಂಡು ಬಂದಿದೆ, ಆಡಳಿತ ಮಂಡಳಿಯ ಹಾಗೂ ಗ್ರಾಮಸ್ಥರ ಉತ್ತಮ ರೀತಿಯಿಂದ ಸಹಕಾರವಿದೆ, ತಾಲ್ಲೂಕಿನಲ್ಲಿ ಗ್ರಾಮೀಣ ಭಾಗದಲ್ಲಿ ಒಂದು ಮಾದರಿ ಪ್ರಾಥಮಿಕ ಶಾಲೆಯಾಗಿರುವುದು ಕಂಡು ಬಂದಿದೆ. ಶ್ರೀ ಶಿವಕುಮಾರ ಹೊನ್ನಾಳೆ ಮುಖ್ಯ ಗುರುಗಳಾಗಿ ಉತ್ತಮ ರೀತಿಯಿಂದ ಶಾಲೆ ನಡೆಸುತಲ್ಲಿದ್ದಾರೆ. ತಾಲ್ಲೂಕಿನಲ್ಲಿ ಪ್ರಸಿದ್ಧಿಯಾಗಿದ್ದ ಪ್ರಾಥಮಿಕ ಶಾಲೆಯಾಗಿದೆ, ಮಕ್ಕಳು ಆಸಕ್ತಿಯಿಂದ ದಿನಾಲೂ ಶಾಲೆಗೆ ಬರುತ್ತಿದ್ದಾರೆ, ಸಾಂಸ್ಕೃತಿಕ ಕಾರ್ಯಕ್ರಮದಲ್ಲಿಯು ಮಂಚೂಣಿಯಲ್ಲಿದ್ದಾರೆ.

## 9) ಮಥುರಾಬಾಯಿ ಮೆಮೋರಿಯಲ್ ಹಿರಿಯ ಪ್ರಾಥಮಿಕ ಶಾಲೆ ತೂಗಾಂವ (ಹೆಚ್)

ಈ ಶಾಲೆಯು 1 ರಿಂದ 7ನೇ ತರಗತಿಗೆ ಕನ್ನಡ ಮತ್ತು ಮರಾಠಿ ಮಾಧ್ಯಮದಲ್ಲಿ ನಡೆಯುತ್ತಲ್ಲಿದ್ದು, ಅನುದಾನಿತ ಪ್ರಾಥಮಿಕ ಶಾಲೆಯಾಗಿದೆ, ಈ ಶಾಲೆಯು ಗಡಿ ಭಾಗದಲ್ಲಿದ್ದು, ಮರಾಠಿ ಭಾಷೆ ಮಾತನಾಡುವ ಜನರಿದ್ದಾರೆ, ಅಲ್ಲದೆ ಮಕ್ಕಳಿಗೂ ಸಹ ಮರಾಠಿ ಮಾಧ್ಯಮದಲ್ಲಿ ಶಾಲೆಗೆ ದಾಖಲಾತಿ ಮಾಡಿಸಿರುತ್ತಾರೆ, ಹೀಗಾಗಿ ಈ ಭಾಗದ ಬಹುತೇಕ ಶಾಲೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವಿರಳವಾಗಿ ಪ್ರವೇಶ ಮಾಡಿಸಿರುತ್ತಾರೆ. ಕನ್ನಡ ಮಾಧ್ಯಮಕ್ಕೆ 1ರಿಂದ 7ನೇ ತರಗತಿಗೆ 171 ಮಕ್ಕಳು ದಾಖಲಾಗಿದ್ದು, 25 ಮಕ್ಕಳು ಸಹ ಹಾಜರಿರುವುದಿಲ್ಲ. ಮರಾಠಿ ಮಾಧ್ಯಮಕ್ಕೆ 1ರಿಂದ 7ನೇ ತರಗತಿಗೆ 257 ಮಕ್ಕಳು ದಾಖಲಾಗಿದ್ದು, 100 ಮಕ್ಕಳು ಹಾಜರಿದ್ದು ಕಂಡು ಬಂದಿದೆ. ಈ ಶಾಲೆಗೆ ಮೂಲಭೂತ ಸೌಕರ್ಯ ಇರುವುದಿಲ್ಲ. ಟೀನ್ ಶೇಡ್‌ದಲ್ಲಿ ತರಗತಿ ಕೋಣೆಗಳು ನಡೆಸುತಿದ್ದಾರೆ, ಕುಡಿಯುವ ನೀರು ಪಾತ್ರೆಯಲ್ಲಿ ತುಂಬಿರುತ್ತಾರೆ, ಶೌಚಾಲಯವಿಲ್ಲ, ವಿದ್ಯುತ ಇಲ್ಲ, ಪಾಠೋಪಕರಣ ಮತ್ತು ಪಿಠೋಪಕರಣಗಳಿಲ್ಲದೆ ಮಕ್ಕಳಿಗೆ ನೆಲದ ಮೇಲೆ ಕೂಡಿಸಿರುತ್ತಾರೆ, ಪರಿಶಿಷ್ಟ ಜಾತಿ ಆಡಳಿತ ಮಂಡಳಿಯಾಗಿದ್ದು, ಈ ಶಾಲೆಯ ಕಡೆ ಗಮನ ಹರಿಸದಿರುವುದರಿಂದ ಶಾಲೆಯಲ್ಲಿ ಸೌಲಭ್ಯದ ಕೊರತೆ ಇದೆ, ಇಲ್ಲಿ ಕನ್ನಡ ಮಾಧ್ಯಮಕ್ಕಾಗಿ 4 ಶಿಕ್ಷಕರಿದ್ದಾರೆ, ಮರಾಠಿ ಮಾಧ್ಯಮಕ್ಕಾಗಿ 07 ಶಿಕ್ಷಕರು ನೇಮಕಾತಿ ಅನುಮೋದನೆಯಾಗಿ ಮಾಸಿಕ ವೇತನ ಪಡೆಯುತ್ತಲ್ಲಿದ್ದಾರೆ.

ತರಬೇತಿ ಪಡೆದ ಶಿಕ್ಷಕರಿದ್ದಾರೆ, ಆದರೆ ಪಾಠದ ಪೂರ್ವ ಸಿದ್ಧತೆಯಿಲ್ಲದೆ, ಪಾಠೋಪಕರಣ ಬಳಸದೆ ಪಾಠ ಬೋಧನೆ ಮಾಡುತ್ತಿರುವುದು ಕಂಡು ಬಂದಿದೆ, ಮಕ್ಕಳ ದಾಖಲಾತಿಯಂತೆ ಹಾಜರಾತಿಗಾಗಿ ಶಿಕ್ಷಕರು ಪ್ರಯತ್ನಿಸದೆ ಇರುವುದರಿಂದ ಮಕ್ಕಳ ಹಾಜರಾತಿ ಕಡಿಮೆಯಾಗಿರುತ್ತದೆ, ಮಕ್ಕಳ ಕಲಿಕೆ ಸಾಧಾರಣವಿರುತ್ತದೆ, ಇಲಾಖೆಯಿಂದ ಪಠ್ಯ ಪುಸ್ತಕ ಸರಬರಾಜು ಆಗಿದ್ದು ಹಂಚಿರುತ್ತಾರೆ, ಮಧ್ಯಾಹ್ನ ಬಿಸಿಊಟ ಸರಿಯಾಗಿ ಮಾಡಿಸುತ್ತಿರುವುದು ಕಂಡು ಬಂದಿದೆ, ಈ ಗಡಿ ಭಾಗದ ಗ್ರಾಮಗಳಲ್ಲಿ ಪಾಲಕರು ಮರಾಠಿ ಭಾಷೆಯ ಕಡೆ ಹೆಚ್ಚಿನ ಆಸಕ್ತಿವಹಿಸುತ್ತಾರೆ ಅಲ್ಲದೆ ವ್ಯವಹಾರ, ವಹಿವಾಟು ಮಹಾರಾಷ್ಟ್ರದಲ್ಲಿ ನಡೆಯುತ್ತದೆ, ಮರಾಠಿ ಭಾಷೆಯ ಬಗ್ಗೆ ಬಹಳಷ್ಟು ಸ್ವಾಭಿಮಾನವಿರುತ್ತದೆ. ಕರ್ನಾಟಕ ಸರ್ಕಾರ ಸಾಕಷ್ಟು ಸೌಲಭ್ಯ ಕೊಟ್ಟರು ಸಹ ಇವರು ತೃಪ್ತರಾಗದೆ ಮಹಾರಾಷ್ಟ್ರ ರಾಜ್ಯದ ಕಡೆ ಹೆಚ್ಚಿನ ಒಲವು ತೋರುತ್ತಾರೆ.

## 10) ದಿವ್ಯಜ್ಯೋತಿ ಪ್ರಾಥಮಿಕ ಶಾಲೆ ಭಾಲ್ಕಿ:

ಈ ಶಾಲೆಯು ಅನುದಾನರಹಿತ ಶಾಲೆಯಾಗಿದ್ದು, ವಸತಿ ಸಹಿತವಿರುತ್ತದೆ. ಕ್ರೈಸ್ತ ಧರ್ಮದ ಟ್ರಸ್ಟ ಆಗಿದ್ದು, ಮೂಲಭೂತ ಸೌಲಭ್ಯ ಹೊಂದಿರುತ್ತದೆ. ವಿಶಾಲವಾದ ಮೈದಾನದಲ್ಲಿ ಉತ್ತಮವಾದ ಕಟ್ಟಡದಲ್ಲಿ ಶಾಲೆ ನಡೆಯುತಲ್ಲಿದೆ. ಶಿಕ್ಷಕರು ಬಹಳ ಆಸಕ್ತಿಯಿಂದ ಪಾಠ ಬೋಧನೆ ಮಾಡುತ್ತಾರೆ, ಅನುದಾನರಹಿತ ಶಾಲೆಯಿರುವುದರಿಂದ ಶಿಕ್ಷಕರಿಗೆ ಗೌರವಧನ ಕೊಡುತ್ತಾರೆ. ಕಡಿಮೆ ಹಣ ಪಡೆದರೂ ಸಹ ಉತ್ತಮ ರೀತಿಯಿಂದ ಕೆಲಸ ಮಾಡುತ್ತಿದ್ದಾರೆ, ಮಕ್ಕಳ ಕಲಿಕೆಯು ಚೆನ್ನಾಗಿರುತ್ತದೆ, ಸ್ವಂತ ಕಟ್ಟಡವಿದ್ದು, ಆರ್.ಸಿ.ಸಿ. ಕೋಣೆಗಳಿವೆ, ಮಕ್ಕಳಿಗೆ ಹಾಗೂ ಸಿಬ್ಬಂದಿಯವರಿಗೆ ಪ್ರತೇಕವಾಗಿ ಶೌಚಾಲಯ, ಮೂತ್ರಾಲಯಗಳಿವೆ,

ಕುಡಿಯುವ ನೀರಿನ ವ್ಯವಸ್ಥೆ ಇದೆ, ವಿದ್ಯುತ್ ಇದೆ, ಮಕ್ಕಳಿಗೆ ಕೂಡಲು ಬೆಂಚಗಳಿವೆ, ಟ್ರಸ್ಟ ಸದಸ್ಯರು ಘಾದರವರು ಬಹಳಷ್ಟು ಕಾಳಜಿ ವಹಿಸಿ ಶಾಲೆಯ ಕಡೆ ಗಮನಹರಿಸುತ್ತಾರೆ, ಸರ್ಕಾರದಿಂದಾಗಲಿ, ಇಲಾಖೆಯಿಂದಾಗಲಿ ಯಾವುದೇ ರೀತಿಯ ಸೌಲಭ್ಯ ನೀಡಿರುವುದಿಲ್ಲ, ಈ ಶಾಲೆಯು ಭಾಲ್ಕಿಯಿಂದ ಸುಮಾರು 2 ಕಿ.ಮೀ. ದೂರ ಇದ್ದು, ಉತ್ತಮ ವಾತಾವರಣದಲ್ಲಿದೆ, ಶಾಲಾ ಕೈತೋಟವಿದೆ, ಹೀಗಾಗಿ ಈ ಶಾಲೆಯು ಉತ್ತಮ ಶಾಲೆಯಾಗಿದ್ದು, ಶಿಕ್ಷಕರು ಗುಣಮಟ್ಟ ಶಿಕ್ಷಣ ನೀಡುತ್ತಿರುವುದರಿಂದ ಮಕ್ಕಳ ಕಲಿ ಚೆನ್ನಾಗಿರುತ್ತದೆ. ಇದೊಂದು ಮಾದರಿ ಶಾಲೆಯಾಗಿರುತ್ತದೆ.

# ಬಸವಕಲ್ಯಾಣ ತಾಲ್ಲೂಕು

ಸರ್ಕಾರಿ ಪ್ರಾಥಮಿಕ ಶಾಲೆಗಳು

**1) ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ ಹುಲಸೂರ:-**

ಈ ಶಾಲೆಯಲ್ಲಿ ಶ್ರೀ ಸೂರ್ಯಕಾಂತ ಖಾಯಂ ಮುಖ್ಯ ಗುರುಗಳಾಗಿದ್ದು, ಇದು ಕನ್ನಡ ಮತ್ತು ಮರಾಠಿ ಮಾಧ್ಯಮದ ಶಾಲೆಯಾಗಿರುತ್ತದೆ, ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು, ಪಾಠಕ್ಕೆ ಸಂಬಂಧಿಸಿದ ಪಾಠೋಪಕರಣಗಳು ಬಳಸಲಿಲ್ಲ, ಶಾಲಾ ಕಟ್ಟಡ ಹಾಗೂ ಕೋಣೆಗಳು ಚೆನ್ನಾಗಿದ್ದು, ಮೂಲಭೂತ ಸೌಲಭ್ಯ ಹೊಂದಿದೆ, ನಲಿ-ಕಲಿ ಆಧಾರಿತ ಕಲಿಕೆ ಮಾಡುತ್ತಿದ್ದರು, ಕೋಣೆಯಲ್ಲಿ ತಟ್ಟೆ, ಚಪ್ಪರ, ಬ್ಯಾಗ, ಶೃಜನ ಶೀಲತೆಗೆ ಸಂಬಂಧಿಸಿದ ವಿವಿಧ ಚಿತ್ರಗಳು ಮಾಡಿದ್ದರು, ಚಟುವಟಿಕೆಯಿಂದ ಶಿಕ್ಷಕರು ಭೋದಿಸುತ್ತಿದ್ದರು. 1, 2, 3ನೇ ತರಗತಿಯ ಮಕ್ಕಳು ಆಸಕ್ತಿಯಿಂದ ಕಲಿಯುತ್ತಿದ್ದರು.

ಇಲಾಖೆಯಿಂದ ಸರಬರಾಜು ಮಾಡಿದ ಪಠ್ಯ ಪುಸ್ತಕ, ಸಮವಸ್ತ್ರ, ಶಿಷ್ಯವೇತನ, ನೋಟ್ ಬುಕ್, ಬ್ಯಾಗ್ ಹಂಚಿದ್ದರು, ಇಂದು ಮಧ್ಯಾಹ್ನ ಬಿಸಿಊಟ ಅನ್ನ, ಸಾಂಬಾರ, ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿದ್ದರು. ದಿನಾಲೂ ತರಕಾರಿ ಹಾಕಿರುವುದಾಗಿ ಕಂಡು ಬಂದಿತು. ದಾಖಲಾತಿಯಾದ ಮಕ್ಕಳು ದಿನಾಲೂ ಹಾಜರಾತಿ ಕಡಿಮೆ ಇರುತ್ತದೆಂದು ಮುಖ್ಯ ಗುರುಗಳು ಹೇಳಿದ್ದರು. ಕೂಲಿಕಾರ್ಮಿಕರ ಮಕ್ಕಳು ಇರುವುದರಿಂದ ಪಾಲಕರು ತಮ್ಮ ಸಹಾಯಕ್ಕಾಗಿ ಹಾಗು ಚಿಕ್ಕ ಮಕ್ಕಳಿಗೆ ಜೋಪಾನ ಮಾಡಲು ಶಾಲಾ ಮಕ್ಕಳಿಗೆ ತೆಗೆದುಕೊಂಡು ಹೋಗುತ್ತಾರೆಂದು ಹೇಳಿದ್ದರು. ಶಾಲಾ ವಾತಾವರಣ ಚೆನ್ನಾಗಿದೆ, ಹಿರಿಯ ತರಗತಿ ಮಕ್ಕಳ ಕಲಿಕೆ ಭಾಗಶ: ಸರಿಯಾಗಿದೆ.

**2) ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ ಗೋರ್ಟಾ (ಬಿ):-**

ಈ ಶಾಲೆಯು ಕನ್ನಡ ಮಾಧ್ಯಮದಲ್ಲಿ 1 ರಿಂದ 7ನೇ ತರಗತಿವರೆಗೆ ನಡೆಯುತ್ತದೆ. ಒಟ್ಟು 219 ಮಕ್ಕಳು ದಾಖಲಾತಿಯಾಗಿದ್ದು, ಇಂದು 203 ಮಕ್ಕಳು ಹಾಜರಿರುತ್ತಾರೆ, ಮುಖ್ಯ ಗುರುಗಳ ಸಹಿತ ಒಟ್ಟು 12 ಶಿಕ್ಷಕರಿರುತ್ತಾರೆ. ಗ್ರಾಮದ ಹೊರಗಡೆಯಿದ್ದು ಉತ್ತಮ ವಾತಾವರಣದಲ್ಲಿ ಶಾಲೆ ನಡೆಯುತಲ್ಲಿದೆ ಒಟ್ಟು 18 ಕೋಣೆಗಳಿರುತ್ತವೆ, ಕುಡಿಯುವ ನೀರಿನ ವ್ಯವಸ್ಥೆ, ಪ್ರತೇಕವಾದ ಶೌಚಾಲಯವಿದೆ, ವಿದ್ಯುತ್ ಇದೆ, ಆಟದ ಮೈದಾನವಿದೆ, ಶಾಲಾ ತೋಟವಿಲ್ಲ, ಪಾಠೋಪಕರಣ, ಪಿಠೋಪಕರಣಗಳು ಇವೆ, ಮಧ್ಯಾಹ್ನನ ಬಿಸಿಊಟ ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿರುತ್ತಾರೆ, ಅಡುಗೆ ಕೋಣೆ ಸ್ವಚ್ಛವಾಗಿತ್ತು, ಇಲಾಖೆಯಿಂದ ಸರಬರಾಜಾದ, ಪಠ್ಯ ಪುಸ್ತಕ, ಸಮವಸ್ತ್ರ, ಶಿಷ್ಯ ವೇತನ ಹಂಚಿರುತ್ತಾರೆ.

ಶಿಕ್ಷಕರು ಶಾಲಾ ವೇಳಾ ಪಟ್ಟಿಯಂತೆ ದಿನಾಲು ಶಾಲೆಗೆ ಬಂದು, ಶಾಲಾ ಅವಧಿಯವರೆಗೆ ಶಾಲೆಯಲ್ಲಿದ್ದು, ಪಾಠ ಬೋಧನೆ ಮಾಡುತ್ತಾರೆ ಹಾಗೂ ಪಾಠೋಪಕರಣಗಳ ಬಳಕೆ ಮಾಡುತ್ತಾರೆ. ಕಿರಿಯ ತರಗತಿ ಹೊರತು ಪಡಿಸಿದರೆ ಹಿರಿಯ ತರಗತಿಯ ಬಹುಸಂಖ್ಯೆ ಮಕ್ಕಳಿಗೆ ಓದಲು ಬರೆಯಲು ಬರುತ್ತದೆ.

ಮಕ್ಕಳ ಕಲಿಕೆ ಚೆನ್ನಾಗಿರುತ್ತದೆ. ಎಸ್.ಡಿ.ಎಂ.ಸಿ. ಹಾಗೂ ಗ್ರಾಮಸ್ಥರ ಸಹಕಾರವಿರುತ್ತದೆ. ಶಾಲೆಯು ಉತ್ತಮವಾದ ವಾತಾವರಣದಲ್ಲಿರುತ್ತದೆ.

**3) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮುಚಳಂಬ:–**

ಈ ಶಾಲೆಯು ಕನ್ನಡ ಮಾಧ್ಯಮದಲ್ಲಿ 1ರಿಂದ 7ನೇ ತರಗತಿವರೆಗೆ ನಡೆಯುತ್ತಿದೆ. ಒಟ್ಟು 376 ಮಕ್ಕಳ ದಾಖಲೆಯಾಗಿರುತ್ತದೆ. ಇಂದು 340 ಮಕ್ಕಳು ಶಾಲೆಗೆ ಹಾಜರಿರುತ್ತಾರೆ. ಮುಖ್ಯ ಗುರುಗಳ ಸಹಿತ ಒಟ್ಟು 10 ಶಿಕ್ಷಕರಿದ್ದು, ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ. ಶಿಕ್ಷಕರಲ್ಲಿ ಸಮಯ ಪಾಲನೆಯಿದೆ. ಒಟ್ಟು 14 ಕೋಣೆಗಳಿವೆ, ಶಾಲೆಗೆ ಸುತ್ತುಗೋಡೆ ಭಾಗಶವಿದೆ, ಶೌಚಾಲಯವಿದೆ, ಕುಡಿಯುವ ನೀರಿನ ವ್ಯವಸ್ಥೆ ಇದೆ, ವಿದ್ಯುತ್ ಇದೆ, ಆಟದ ಮೈದಾನವಿದೆ, ಎಲ್ಲಾ ಮಕ್ಕಳಿಗೆ ಕೂಡಲು ಬೆಂಚುಗಳಿಲ್ಲ, ಮಕ್ಕಳಿಗೆ ಓದಲು ಗ್ರಂಥಾಲಯವಿದೆ, ವಿಜ್ಞಾನ ಸಾಮಗ್ರಿಗಳಿವೆ, ಇಂದು ಅನ್ನ, ಸಾಂಬಾರ, ಚೆನ್ನಾಗಿ ರುಚಿಕರವಾಗಿ ಮಾಡಿದ್ದರು, ಒಟ್ಟು 155 ಮಕ್ಕಳು ಊಟ ಮಾಡಿದ್ದರು. ಇಲಾಖೆಯಿಂದ ಬಂದಿರುವ ಪಠ್ಯ ಪುಸ್ತಕ, ಸಮವಸ್ತ್ರ, ಶಿಷ್ಯವೇತನ, ಇತ್ಯಾದಿ ಹಂಚಿರುತ್ತಾರೆ.

ಕಿರಿಯ ತರಗತಿ ಹೊರತು ಪಡಿಸಿದ್ದರೆ ಹಿರಿಯ ತರಗತಿಯ ಮಕ್ಕಳಿಗೆ ಓದಲು ಬರೆಯಲು ಬರುತ್ತದೆ, ನಲಿ–ಕಲಿಯು ಯಶಸ್ವಿಯಾಗಿ ನಡೆಯುತ್ತಲಿದೆ, ಮಕ್ಕಳ ಕಲಿಕೆ ಚೆನ್ನಾಗಿರುತ್ತದೆ, ಶಾಲೆಯ ವಾತಾವರಣ ಉತ್ತಮವಾಗಿರುತ್ತದೆ.

**4) ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಧನ್ನೂರಾ(ಕೆ) ವಾಡಿ:–**

ಈ ಶಾಲೆಯು 1 ರಿಂದ 5ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲಿದೆ, ಒಟ್ಟು ಮಕ್ಕಳ ದಾಖಲಾತಿ 87 ಇರುತ್ತದೆ, ಇಂದು 86 ಮಕ್ಕಳು ಶಾಲೆಗೆ ಹಾಜರಿರುತ್ತಾರೆ. ಶಿಕ್ಷಕರ ಸಂಖ್ಯೆ ಮೂರು, ತರಗತಿ ಕೋಣೆಗಳು 4 ಇದ್ದು, ಒಂದು ಕೋಣೆ ಬೀಳುವ ಹಂತದಲ್ಲಿದೆ, ಈ ಶಾಲೆಗೆ ಸುತ್ತುಗೋಡೆ ಇಲ್ಲ, ಶೌಚಾಲಯವಿದೆ, ವಿದ್ಯುತ್ ಇದೆ, ಮಕ್ಕಳಿಗೆ, ಕೂಡಲು ಬೆಂಚುಗಳು ಇಲ್ಲ, ಶಿಕ್ಷಕರಿಂದ ತಯಾರಿಸಲ್ಪಟ್ಟ ಪಾಠೋಪಕರಣಗಳಿವೆ, ಶಾಲಾ ತೋಟವಿಲ್ಲ, ಇಲಾಖೆಯಿಂದ ಸರಬರಾಜು ಆದ ಪಠ್ಯ ಪುಸ್ತಕ ಸಮವಸ್ತ್ರ ಶಿಷ್ಯವೇತನ, ನೋಟಬುಕ್, ಬ್ಯಾಗ್ ಹಂಚಿರುತ್ತಾರೆ, ಮಧ್ಯಾಹ್ನ ಬಿಸಿಊಟ ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿರುವುದು ನೋಡಲಾಯಿತು. ಇಂದು 30 ಮಕ್ಕಳು ಬಿಸಿಊಟ ಮಾಡಿದ್ದರು.

ಶಿಕ್ಷಕರಲ್ಲಿ ಸಮಯಪಾಲನೆ ವೇಳಾಪಟ್ಟಿಯಂತೆ ದಿನಾಲು ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ, ನಲಿ–ಕಲಿ ಪದ್ಧತಿಯಿಂದ ಮಕ್ಕಳ ಕಲಿಕೆ ಹಾಗೂ ಹಾಜರಾತಿ ಹೆಚ್ಚಿಸಿದೆ, ಮಕ್ಕಳ ಕಲಿಕೆ ಉತ್ತಮವಾಗಿದೆ.

**5) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬೇಲೂರು:-**

ಈ ಶಾಲೆಯು 1 ರಿಂದ 7 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲಿದೆ. ಶಿಕ್ಷಕರು ಶಾಲಾ ವೇಳಾಪಟ್ಟಿಯಂತೆ ದಿನಾಲೂ ಶಾಲೆಗೆ ಬಂದು ಪಾಠಬೋಧನೆ ಮಾಡುತ್ತಿದ್ದರು, ತರಗತಿಯಲ್ಲಿ ಕಪ್ಪುಹಲಗೆ, ಪಾಠೋಪಕರಣಗಳು ಬಳಸದೇ ಇರುವುದು ಕಂಡು ಬಂದಿತ್ತು. 1, 2, ಮತ್ತು 3ನೇ ತರಗತಿಗೆ ನಲಿ-ಕಲಿ ಆಧಾರಿತ ಬೋಧನೆಯಾಗಿತ್ತು. ಕೋಣೆಯಲ್ಲಿ ಚಪ್ಪರ, ತಟ್ಟೆ, ಬ್ಯಾಗ, ಗೋಡೆಗೆ ಕಪ್ಪು ಬಣ್ಣ ಬರೆದು ಮಕ್ಕಳ ಹೆಸರು ಬರೆದಿದ್ದರು, ಕಾರ್ಡಗಳ ಬಳಕೆ ಮಾಡುತ್ತ, ಚಟುವಟಿಕೆ ಮೂಲಕ ಆಸಕ್ತಿಯಿಂದ ಕಲಿಯುತ್ತಿದ್ದರು, ಶಾಲಾ ವಾತಾವರಣ ಚೆನ್ನಾಗಿದ್ದು, ಮೂಲಭೂತ ಸೌಲಭ್ಯ ಹೊಂದಿದೆ, ಶೌಚಾಲಯ, ಕುಡಿಯುವ ನೀರು, ವಿದ್ಯುತ್, ಗ್ರಂಥಾಲಯ ಪುಸ್ತಕಗಳು, ಇತ್ಯಾದಿ ಸೌಲಭ್ಯ ಹೊಂದಿದೆ. ಎಲ್ಲಾ ಮಕ್ಕಳಿಗೆ ಕೂಡಲು ಬೆಂಚುಗಳು ಇರುವುದಿಲ್ಲ, ಇಲಾಖೆಯಿಂದ ಸರಬರಾಜು ಆದ ಪಠ್ಯ ಪುಸ್ತಕ, ಸಮವಸ್ತ್ರ, ಶಿಷ್ಯವೇತನ, ನೋಟ್‌ಬುಕ್, ಬ್ಯಾಗ್ ಹಂಚಿದ್ದರು, ಕಿರಿಯ ತರಗತಿಯ ಮಕ್ಕಳನ್ನು ಹೊರತುಪಡಿಸಿದ್ದರೆ, ಹಿರಿಯ ತರಗತಿಗಳ ಮಕ್ಕಳು ಭಾಗಶ: ಚೆನ್ನಾಗಿ ಓದಿದ್ದರು.

ದಾಖಲಾಗಿದ್ದ ಮಕ್ಕಳು ಸತತವಾಗಿ ಶಾಲೆಗೆ ಹಾಜರಿರುವುದಿಲ್ಲವೆಂದು ಮುಖ್ಯ ಗುರುಗಳು ಹೇಳಿದ್ದರು, ಪಾಲಕರಿಗೆ, ಸಾರ್ವಜನಿಕರಿಗೆ ವಿಚಾರಣೆ ಮಾಡಿದಾಗ ಬಡತನದಿಂದ ಇದ್ದ ಕೂಲಿ ಕಾರ್ಮಿಕರು, ರೈತರು, ದೀನದಲಿತರು ತಮ್ಮ ಕೆಲಸಕ್ಕಾಗಿ ಬಳಸಿಕೊಳ್ಳುತ್ತಾರೆ. ಚಿಕ್ಕಮಕ್ಕಳನ್ನು ಎತ್ತಿಕೊಳ್ಳಲು ದೊಡ್ಡ ಮಕ್ಕಳನ್ನು ಕರೆದುಕೊಂಡು ಹೋಗುವುದರಿಂದ ದಿನಾಲೂ ಶಾಲೆಗೆ ಬರುವುದಿಲ್ಲವೆಂದು ಹೇಳಿದ್ದರು, ಗ್ರಾಮೀಣ ಭಾಗದಲ್ಲಿ ಇಂತಹ ಸಮಸ್ಯೆಗಳು ಕಂಡು ಬಂದಿದೆ.

**1) ಶಾಂತಿನಿಕೇತನ ಹಿರಿಯ ಪ್ರಾಥಮಿಕ ಶಾಲೆ ಬಸವಕಲ್ಯಾಣ (ಅನುದಾನಿತ)**

ಈ ಶಾಲೆಯು ಅನುದಾನಿತ ಶಾಲೆಯಾಗಿದ್ದು, 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದೆ, ಪಟ್ಟಣದ ಮಧ್ಯಭಾಗದಲ್ಲಿದೆ. 7ಜನ ಶಿಕ್ಷಕರಿದ್ದು, ವೇಳೆಗೆ ಸರಿಯಾಗಿ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು, ಆದರೆ ಪಾಠಕ್ಕೆ ಸಂಬಂಧಿಸಿದಂತೆ ಪಾಠೋಪಕರಣಗಳ ಬಳಕೆ ಕಂಡು ಬರಲಿಲ್ಲ, ಅಲ್ಲದೆ ಕೆಲವು ಶಿಕ್ಷಕರು ಕಪ್ಪು ಹಲಗೆ ಬಳಸದೆ ಇರುವುದು ಕಂಡು ಬಂದಿತ್ತು, ನಲಿ-ಕಲಿ ಪದ್ಧತಿ ಬೋಧನೆ ಕಂಡು ಬರಲಿಲ್ಲ, ತಟ್ಟೆ, ಗೋಡೆಗೆ ಬೋರ್ಡ, ಕಾರ್ಡಗಳು, ಚೀಲ ಇವುಗಳು ಮಾಡಿರಲಿಲ್ಲ. ಕುಡಿಯುವ ನೀರಿನ ವ್ಯವಸ್ಥೆ ಇದೆ, ಮೂಲಭೂತ ಸೌಲಭ್ಯದ ಕೊರತೆ ಇದೆ, ಕಿರಿಯ ತರಗತಿಯ ಮಕ್ಕಳ ಕಲಿಕೆ ಸಾಧಾರಣವಾಗಿರುತ್ತದೆ. ಹಿರಿಯ ತರಗತಿಯಲ್ಲಿ ಅರ್ಧಕ್ಕಿಂತ ಹೆಚ್ಚು ಮಕ್ಕಳಿಗೆ ಓದಲು ಬರೆಯಲು ಬಾರದಿರುವುದು ಕಂಡು ಬಂದಿತ್ತು, ಪಟ್ಟಣದಲ್ಲಿ ಬೇರೆ ಶಾಲೆಗಳಿರುವುದರಿಂದ ಮಕ್ಕಳ ದಾಖಲಾತಿ ಕಡಿಮೆಯಾಗಿದೆ ಎಂದು ಮುಖ್ಯ ಗುರುಗಳು ಹೇಳಿರುತ್ತಾರೆ. ಸಂಸ್ಥೆಯ ಆಡಳಿತ ಮಂಡಳಿಯ ಸದಸ್ಯರ ಸಹಕಾರವಿದೆಯೆಂದು ಹೇಳಿದ್ದರು, ಮಧ್ಯಾಹ್ನ ಬಿಸಿಊಟ ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿದ್ದರು, ತರಕಾರಿ ಹಾಕಿದ್ದರು.

## 2) ವಿವೇಕಾನಂದ ಹಿರಿಯ ಪ್ರಾಥಮಿಕ ಶಾಲೆ ಬಸವಕಲ್ಯಾಣ (ಅನುದಾನಿತ)

ಈ ಶಾಲೆಯು 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲ್ಲಿದ್ದು, 7ಜನ ಶಿಕ್ಷಕರು ವೇತನ ಪಡೆಯುತಲ್ಲಿದ್ದಾರೆ, ಶಿಕ್ಷಕರು ವೇಳೆಗೆ ಸರಿಯಾಗಿ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು, ಪಾಠೋಪಕರಣ ಬಳಕೆ ಮಾಡುವುದು ಕಂಡು ಬರಲಿಲ್ಲ, ಆದರೆ ಚಟುವಟಿಕೆ ಆಧಾರಿತ ಪಾಠ ಬೋಧನೆಯಾಗಿತ್ತು. ನಲಿ-ಕಲಿ ಪದ್ಧತಿ ಬೋಧನೆ ಮಾಡುವುದು ಕಂಡು ಬರಲಿಲ್ಲ, ಕೋಣೆಯಲ್ಲಿ ನಲಿ-ಕಲಿಗೆ ಬೇಕಾಗುವ ವ್ಯವಸ್ಥೆ ಮಾಡಿರಲಿಲ್ಲ. ಕಿರಿಯ ತರಗತಿಯ ಮಕ್ಕಳಿಗೆ ಚಟುವಟಿಕೆ ಮೂಲಕ ಬೋಧನೆ ನಡೆಯುತ್ತಿತ್ತು, ಈ ಶಾಲೆಗೆ ಕುಡಿಯುವ ನೀರಿನ ವ್ಯವಸ್ಥೆ ಇದ್ದು, ಮೂಲಭೂತ ಸೌಲಭ್ಯದ ಕೊರತೆಯಿದೆ. ದಾಖಲೆಯಾಗಿದ್ದಷ್ಟು ಮಕ್ಕಳು ದಿನಾಲು ಶಾಲೆಗೆ ಹಾಜರಿರುವುದಿಲ್ಲವೆಂದು ಮುಖ್ಯ ಗುರುಗಳು ಹೇಳಿದ್ದರು. ಹಿರಿಯ ತರಗತಿಯ ಅರ್ಧದಷ್ಟು ಮಕ್ಕಳಿಗೆ ಓದಲು ಬರೆಯಲು ಬಾರದ್ದನ್ನು ಕಂಡು ಬಂದಿತ್ತು. ಮಧ್ಯಾಹ್ನ ಬಿಸಿ ಊಟದಲ್ಲಿ ತರಕಾರಿ ಹಾಕಿ ಸ್ವಚ್ಛ ಹಾಗು ರುಚಿಕರವಾಗಿ ಮಾಡಿ ಮಕ್ಕಳಿಗೆ ಊಟ ಬಡಿಸಿದ್ದರು. ಶಾಲಾ ವಾತಾವರಣ ಸಾಧಾರಣವಾಗಿ ಕಂಡು ಬಂದಿತ್ತು, ಶಿಕ್ಷಕರ ಹಾಗೂ ಮಕ್ಕಳ ಸಮವಸ್ತ್ರ ಪಾಲಕರು ಮತ್ತು ಸಂಸ್ಥೆಯವರು ಕೊಡಿಸುತ್ತಾರೆಂದು ಹೇಳಿದ್ದರು.

## 3) ಕರ್ನಾಟಕ ಹಿರಿಯ ಪ್ರಾಥಮಿಕ ಶಾಲೆ ರಾಜೇಶ್ವರ (ಅನುದಾನಿತ)

ಈ ಶಾಲೆಯು ತಾಲ್ಲೂಕಿನ ಕೊನೆಭಾಗದಲ್ಲಿದ್ದು, 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲಿದೆ, ಈ ಶಾಲೆ ಅನುದಾನಿತ ಶಾಲೆಯಾಗಿದೆ. 7ಜನ ಶಿಕ್ಷಕರು ವೇತನ ಪಡೆಯುತ್ತಲ್ಲಿದ್ದಾರೆ, ಶಿಕ್ಷಕರು ದಿನಾಲೂ ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ, ಆದರೆ ಪಾಠೋಪಕರಣಗಳ ಬಳಕೆ ಮಾಡುವುದು ಕಂಡು ಬರಲಿಲ್ಲ, ಚಟುವಟಿಕೆ ಆಧಾರಿತ ಬೋಧನೆಯಾಗಿತ್ತು, ಮಕ್ಕಳ ಕಲಿಕೆ ಚೆನ್ನಾಗಿತ್ತು, ಮಕ್ಕಳಲ್ಲಿ ಶಿಸ್ತು ಕಂಡು ಬಂದಿತ್ತು, ಶಿಕ್ಷಕರಿಗೆ ಹಾಗೂ ಮಕ್ಕಳಿಗೆ ಸಮವಸ್ತ್ರ ಧರಿಸಿಕೊಂಡು ಶಿಸ್ತಾಗಿ ಶಾಲೆಗೆ ಬಂದಿದ್ದರು, ಕೆಲವು ಮಕ್ಕಳಿಗೆ ಕೂಡಲೂ ಬೆಂಚುಳಿದ್ದವು, ಇಂದು ಅನ್ನ ಸಾಂಬಾರ ತರಕಾರಿ ಹಾಕಿ ರುಚಿಕರವಾಗಿ ಮಾಡಿದ್ದರು, ಇಲಾಖೆಯಿಂದ ಅನುದಾನ ಬಳಕೆಯಾಗಿರುತ್ತದೆ, ಪಠ್ಯ ಪುಸ್ತಕ, ಶಿಷ್ಯವೇತನ ಹಂಚಿರುತ್ತಾರೆ, ದಾಖಲೆಗಳು ನೋಡಲಾಯಿತು.

## 4) ಸಿದ್ಧರಾಜ ಹಿರಿಯ ಪ್ರಾಥಮಿಕ ಶಾಲೆ ರಾಜೇಶ್ವರ (ಅನುದಾನರಹಿತ)

ಈ ಶಾಲೆಯು ಅನುದಾನರಹಿತ ಶಾಲೆಯಾಗಿದ್ದು, 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲ್ಲಿದ್ದು, 7 ಜನ ಶಿಕ್ಷಕರಿಗೆ ಸಂಸ್ಥೆಯವರು ವೇತನ ಕೊಟ್ಟಿರುತ್ತಾರೆ, ಮಕ್ಕಳಿಂದ ಫಿಸ್ ತೆಗೆದುಕೊಳ್ಳುತ್ತಾರೆ, ಈ ಶಾಲೆಗೆ ಇಲಾಖೆಯಿಂದ ಸೌಲಭ್ಯ ದೊರೆಯುವುದಿಲ್ಲವೆಂದು ಮುಖ್ಯ ಗುರುಗಳು ಹೇಳಿರುತ್ತಾರೆ, ಶಿಕ್ಷಕರ ಪಾಠ ಬೋಧನೆ ಚಟುವಟಿಕೆ ಆಧಾರಿತ ಬೋಧನೆಯಾಗಿತ್ತು, ಶಿಕ್ಷಕರಲ್ಲಿ ಹಾಗೂ ಮಕ್ಕಳಲ್ಲಿ ಶಿಸ್ತು ಕಂಡು ಬಂದಿತು. ಅಲ್ಲದೆ ಗುಣಮಟ್ಟದ ಶಿಕ್ಷಣ ಕೊಡುತಲ್ಲಿದ್ದಾರೆಂದು ಮಕ್ಕಳು ಹೇಳಿದ್ದರು, ಮೂಲಭೂತ ಸೌಲಭ್ಯವಿದೆ, ಕಿರಿಯ ತರಗತಿಯ ಮಕ್ಕಳಿಗೆ ಓದು ಬರಹ ನೋಡಿದಾಗ ಸಾಧಾರಣವಿರುವುದು

ಕಂಡು ಬಂದಿತ್ತು, ಹಿರಿಯ ತರಗತಿಯ ಮಕ್ಕಳಿಗೆ ಓದಿಸಿಕೊಂಡಿದ್ದಾಗ ಚೆನ್ನಾಗಿ ಓದಿದ್ದರು, ಆಡಳಿತ ಮಂಡಳಿಯ ಸಹಕಾರವಿದ್ದು, ಅವರುಗಳೇ ಮೇಲುಸ್ತುವಾರಿ ನೋಡಿಕೊಳ್ಳುತ್ತಿರುವುದು ಕಂಡು ಬಂದಿತ್ತು.

### 5) ಮಹಾತ್ಮಾಗಾಂಧಿ ಹಿರಿಯ ಪ್ರಾಥಮಿಕ ಶಾಲೆ ಮುಡಬಿ (ಅನುದಾನಿತ)

ಈ ಶಾಲೆಯು ತಾಲ್ಲೂಕಿನ ಕೊನೆ ಭಾಗದಲ್ಲಿದ್ದು, 1 ರಿಂದ 7ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದೆ, ಅನುದಾನಿತ ಶಾಲೆಯಾಗಿರುವುದರಿಂದ 7ಜನ ಶಿಕ್ಷಕರಿಗೆ ಇಲಾಖೆಯಿಂದ ವೇತನ ದೊರೆಯುತ್ತದೆ. ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ. ಚುಟುವಟಿಕೆ ಆಧಾರಿತ ಪಾಠ ಬೋಧನೆಯಾಗಿತ್ತು. ಮಕ್ಕಳು ಆಸಕ್ತಿಯಿಂದ ಶಾಲೆಗೆ ಬಂದು ಓದು, ಬರಹ ಲೆಕ್ಕ ಕಲಿಯುತ್ತಿದ್ದಾರೆ, ಇಲಾಖೆಯಿಂದ ಪಠ್ಯಪುಸ್ತಕ ಹಂಚಿರುತ್ತಾರೆ, ಶಿಷ್ಯ ವೇತನ ಹಂಚಿರುತ್ತಾರೆ, ಈ ಶಾಲೆಗೆ ಮೂಲಭೂತ ಸೌಲಭ್ಯ ಇರುತ್ತದೆ, ಸಂಸ್ಥೆಯ ಆಡಳಿತ ಮಂಡಳಿಯ ಸದಸ್ಯರು ಶಾಲೆಗೆ ಕಾಳಜಿವಹಿಸಿರುತ್ತಾರೆ, ಹೀಗಾಗಿ ಮಕ್ಕಳ ಉತ್ತಮ ಕಲಿಕೆ ಹಾಗೂ ಶಿಸ್ತು ಕಂಡು ಬಂದಿತ್ತು.

# ಬೀದರ ತಾಲ್ಲೂಕು

## ಸರ್ಕಾರಿ ಪ್ರಾಥಮಿಕ ಶಾಲೆಗಳು

### 1) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು ಲಾಲ್‌ಬಾಗ್:-

ಈ ಶಾಲೆಯು ಬೀದರ ತಾಲ್ಲೂಕಿನ ಕೊನೆಭಾಗದಲ್ಲಿದ್ದು, 1 ರಿಂದ 5ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತ್ತಲ್ಲಿದೆ, 2ಜನ ಶಿಕ್ಷಕಿಯರಿರುತ್ತಾರೆ, ಶಾಲಾ ವೇಳಾಪಟ್ಟಿಯಂತೆ ದಿನಾಲೂ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು, 1, 2, ಮತ್ತು 3ನೇ ತರಗತಿಯ ಮಕ್ಕಳಿಗೆ ನಲಿ-ಕಲಿ ಆಧಾರಿತ ಬೋಧನೆ ಚಟುವಟಿಕೆ ಮೂಲಕ ಕಾರ್ಡುಗಳ ಬಳಕೆ ಮೂಲಕ ಮಕ್ಕಳು ಆಸಕ್ತಿಯಿಂದ ಕಲಿಯುತ್ತಿರುವುದು ಕಂಡು ಬಂದಿತ್ತು, ತಟ್ಟೆ, ಚಪ್ಪರ, ಚೀಲ ಇತ್ಯಾದಿ ಸುಂದರವಾಗಿ ಮಾಡಿದ್ದರು, ಕುಡಿಯುವ ನೀರು, ಶೌಚಾಲಯ, ವಿದ್ಯುತ್ ವ್ಯವಸ್ಥೆ ಇದೆ, ಮಕ್ಕಳಿಗೆ ಕೂಡಲು ಬೆಂಚುಗಳು ಇರುವುದಿಲ್ಲ, ಗ್ರಂಥಾಲಯದಲ್ಲಿ ಪುಸ್ತಕಗಳಿವೆ, ಇಲಾಖೆಯಿಂದ ಶಾಲೆಗೆ ಬಂದಿರುವ ಪಠ್ಯಪುಸ್ತಕ, ಸಮವಸ್ತ್ರ, ನೋಟಬುಕ್, ಬ್ಯಾಗ್ ಶಿಷ್ಯವೇತನ, ಹಂಚಿದ್ದರು, ಅಲ್ಲದೆ ಶಾಲೆಗೆ ಬಂದಿರುವ ಅನುದಾನ ಚೆನ್ನಾಗಿ ಬಳಕೆ ಮಾಡಿ ಕೆಲಸ ಮಾಡಿರುತ್ತಾರೆ.

ಮಕ್ಕಳ ಕಲಿಕೆ ಓದು ಬರಹ ಚೆನ್ನಾಗಿದ್ದು ಕಂಡು ಬಂದಿದೆ. ಈ ಗ್ರಾಮವು ಚಿಕ್ಕ ಗ್ರಾಮವಾಗಿರುವುದರಿಂದ ಜನಸಂಖ್ಯೆ ಕಡಿಮೆ ಇರುವುದರಿಂದ ಮಕ್ಕಳ ದಾಖಲಾತಿ ಕಡಿಮೆಯಾಗಿರುತ್ತದೆ.

### 2) ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ ನೌಬಾದ:-

ಈ ಶಾಲೆಯು ತಾಲ್ಲುಕಿನಲ್ಲಿ ಮಾದರಿ ಶಾಲೆಯಾಗಿದ್ದು, ಪದವಿಧರ ಮುಖ್ಯ ಗುರುಗಳಾಗಿರುತ್ತಾರೆ, 1 ರಿಂದ 7ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದ್ದು, ಮಕ್ಕಳ ಅನುಪಾತದಂತೆ ಶಿಕ್ಷಕರ ಸಂಖ್ಯೆಯಿದೆ, ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುವುದು ಕಂಡು ಬಂದಿದೆ, ತರಗತಿಯಲ್ಲಿ ಪಾಠೋಪಕರಣಗಳ ಬಳಕೆ ಮಾಡಿರುವುದಿಲ್ಲ, ಮಕ್ಕಳ ದಾಖಲಾತಿಯಂತೆ ಹಾಜರಾತಿ ಕಡಿಮೆ ಇತ್ತು, ನಲಿ-ಕಲಿ ಆಧಾರಿತ ಬೋಧನೆ ಇದ್ದು, ತಟ್ಟೆ, ಛಪ್ಪರ, ಬ್ಯಾಗ್, ಇತ್ಯಾದಿಗಳಿದ್ದು ಕಾರ್ಡುಗಳ ಬಳಕೆ ಮೂಲಕ ಮಕ್ಕಳು ಆಸಕ್ತಿಯಿಂದ ಕಲಿಯುತ್ತಿದ್ದರು, ಹಿರಿಯ ತರಗತಿಯ ಮಕ್ಕಳ ಕಲಿಕೆ ಓದು-ಬರಹ ಸಾಧಾರಣವಾಗಿತ್ತು, ಇಂದು ಅನ್ನ, ಸಾಂಬಾರ, ಸ್ವಚ್ಛ ಹಾಗು ರುಚಿಕರವಾಗಿ ಮಾಡಿದ್ದರು, ತರಕಾರಿ ಹಾಕಿದ್ದರು, ಮೂಲಭೂತ ಸೌಲಭ್ಯವಿದೆ, ಇಲಾಖೆಯಿಂದ ಸರಬರಾಜು ಆದ ಅನುದಾನ ಸೌಲಭ್ಯ ಮಕ್ಕಳಿಗೆ ಮುಟ್ಟಿಸಿರುತ್ತಾರೆ.

### 3) ಸರ್ಕಾರಿ ಕಿರಿಯ ಪ್ರಾಥಮಿಕ ಶಾಳೆ ಆನಂದನಗರ ಬೀದರ:-

ಈ ಶಾಲೆಯು 1 ರಿಂದ 5ನೇ ತರಗತಿ ಕನ್ನಡ ಮಾಧ್ಯಮದಲ್ಲಿದ್ದು, 4ಜನ ಶಿಕ್ಷಕರಿರುತ್ತಾರೆ. ಶಾಲಾ ವೇಳೆಯಂತೆ ದಿನಾಲು ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು. ಕಿರಿಯ ತರಗತಿ ಮಕ್ಕಳಿಗೆ ನಲಿ-ಕಲಿ ಆಧಾರಿತವಿದ್ದು, ತಟ್ಟೆ, ಛಪ್ಪರ, ಬ್ಯಾಗ್, ಗೋಡೆಗೆ ಕಪ್ಪು ಬಣ್ಣದ ಹಲಗೆ ಮಾಡಿರುತ್ತಾರೆ. ಕಾರ್ಡುಗಳು ಬಳಸುವ ಮೂಲಕ ಮಕ್ಕಳು ಬಹಳ ಆಸಕ್ತಿಯಿಂದ ಹರ್ಷ ಉಲ್ಲಾಸದಿಂದ ಕಲಿಯುತ್ತಿದ್ದರು. ಚಟುವಟಿಕೆ ಆಧಾರಿತ ಬೋಧನೆಯಾಗಿತ್ತು. ಮೂಲಭೂತ ಸೌಲಭ್ಯ ಹೊಂದಿದೆ. ಕುಡಿಯುವ ನೀರು ಇದೆ, ಶೌಚಾಲಯ, ವಿದ್ಯುತ್ ಇದೆ, ಗ್ರಂಥಾಲಯ ಪುಸ್ತಕಗಳ ಕೊರತೆಯಿದೆ, ಮಕ್ಕಳಿಗೆ ಕೂಡಲು ಬೆಂಚಗಳಿಲ್ಲ, ಮಧ್ಯಾಹ್ನ ಬಿಸಿಊಟ ಇದೆ. ಇಲಾಖೆಯಿಂದ ಬಂದಿರುವ ಅನುದಾನ ದುರ್ಬಳಕೆ ಯಾಗಿರುವುದಿಲ್ಲ. ಪಠ್ಯಪುಸ್ತಕ, ಸಮವಸ್ತ್ರ ಹಂಚಿರುತ್ತಾರೆ. ಶಿಷ್ಯವೇತನ, ನೋಟಬುಕ್, ಬ್ಯಾಗ್, ಮಕ್ಕಳಿಗೆ ಕೊಟ್ಟಿದ್ದರು. ಮಕ್ಕಳು ಕಲಿಕೆ ಓದುಬರಹ ಚೆನ್ನಾಗಿತ್ತು.

### 4) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಚೌಳಿ:-

ಈ ಶಾಲೆಯು 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲಿದ್ದು, ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡಿರುತ್ತಾರೆ. ಪಾಠಕ್ಕೆ ಸಂಬಂಧಿಸಿದ ಪಾಠೋಪಕರಣಗಳು ಬಳಸದೇ ಇರುವುದ ಕಂಡು ಬಂದಿತ್ತು. ನಲಿ-ಕಲಿ ಪದ್ಧತಿಯ ಮೂಲಕ ಬೋಧನೆವಿದ್ದು, ತಟ್ಟೆ, ಛಪ್ಪರ, ಬ್ಯಾಗ್, ಗೋಡೆಗೆ ಕಪ್ಪು ಹಲಗೆ ಇತ್ಯಾದಿ ನಲಿ-ಕಲಿಗೆ ಸಂಬಂಧಿಸಿದವುಗಳೆಲ್ಲಾ ಮಾಡಿದ್ದರು. ಮಕ್ಕಳು ಕಾರ್ಡಗಳಲ್ಲಿನ ಕಥೆಗಳು ಹಾಡುತ್ತಾ ಚಟುವಟಿಕೆಯಲ್ಲಿ ತೊಡಗಿ ಆಸಕ್ತಿಯಿಂದ ಕಲಿಯುತ್ತಿರುವುದು ಕಂಡು ಬಂದಿತ್ತು. ಮಕ್ಕಳಿಗೆ ಕೂಡಲು ಬೆಂಚುಗಳಿರುವುದಿಲ್ಲ, ಕುಡಿಯುವ ನೀರು, ಶೌಚಾಲಯ, ವಿದ್ಯುತ್ ಇದೆ, ಇಂದು ಅನ್ನ ಸಾಂಬಾರ ಮಾಡಿದ್ದರು, ಸಾಂಬಾರದಲ್ಲಿ ತರಕಾರಿ ಹಾಕಿ ಚೆನ್ನಾಗಿ ಮಾಡಿದ್ದರು. ಮಕ್ಕಳ ಸಮವಸ್ತ್ರ ಧರಿಸಿಕೊಂಡು ಶಿಸ್ತಿನಿಂದ ಬಂದಿದ್ದರು. ಮಕ್ಕಳ ಕಲಿಕೆ ಚೆನ್ನಾಗಿತ್ತು.

### 5) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಶಹಾಗಂಜ ಬೀದರ:-

ಈ ಶಾಲೆಯು ಬೀದರ ಪಟ್ಟಣದ ಮಧ್ಯಭಾಗದಲ್ಲಿದೆ. ಇಲ್ಲಿ ಕನ್ನಡ ಮತ್ತು ಮರಾಠಿ 1 ರಿಂದ 7ನೇ ತರಗತಿವರೆಗೆ ನಡೆಯುತಲ್ಲಿದ್ದು, ಮರಾಠಿ ಮಾಧ್ಯಮದಲ್ಲಿ ಮಕ್ಕಳ ಸಂಖ್ಯೆ ಕಡಿಮೆ ಇದೆ. ಶಿಕ್ಷಕರು ಶಾಲೆಯ ವೇಳಾಪಟ್ಟಿಯಂತೆ ದಿನಾಲು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ. ಕಿರಿಯ ತರಗತಿಗಳಿಗೆ ನಲಿ-ಕಲಿ ಆಧಾರಿತ ಕಲಿಕೆ ಇದ್ದು, ತಟ್ಟೆ, ಛಪ್ಪರ, ಬ್ಯಾಗ್, ಗೋಡೆಗೆ, ಕಪ್ಪುಹಲಗೆಯಲ್ಲಿ ಆಯಾ ಮಕ್ಕಳ ಹೆಸರು ಬರೆದಿದ್ದರು. ಬ್ಯಾಗನಲ್ಲಿ ಕಾರ್ಡುಗಳು ಇದ್ದು, ಕಾರ್ಡ ತೆಗೆದುಕೊಂಡು ಮಕ್ಕಳು ಓದುತ್ತಿರುವುದು, ಚಟುವಟಿಕೆ ಮೂಲಕ ಕಾರ್ಡಗಳಲ್ಲಿನ ಹಾಡುಗಳು ಹಾಡುತ್ತಿರುವುದು ನೋಡಿದೆ. ಮಕ್ಕಳು ಆಸಕ್ತಿಯಿಂದ ಕಲಿಕೆಯಲ್ಲಿ ತೊಡಗಿದ್ದರು. ಶಿಕ್ಷಕರು ಪಾಠ ಬೋಧನೆ ಮಾಡುವಾಗ ಪಾಠಕ್ಕೆ ಸಂಬಂಧಿಸಿದ ಪಾಠೋಪಕರಣಗಳು ಬಳಸದೇ ಇರುವುದ ಕಂಡು ಬಂದಿತ್ತು. ಹಿರಿಯ ತರಗತಿಯ ಮಕ್ಕಳಿಗೆ ಓದಿಸಿಕೊಂಡಾಗ ಕೆಲವು ಮಕ್ಕಳು ಮಾತ್ರ ಓದಿ ತೋರಿಸಿದ್ದರು. ಕಲಿಕೆಯು ಸಾಧಾರಣವಿರುವುದು ಕಂಡು

ಬಂದಿತ್ತು. ಇಂದು ಮಧ್ಯಾಹ್ನ ಬಿಸಿ ಊಟ ಅನ್ನ, ಸಾಂಬಾರ ಮಾಡಿದ್ದರು. ತರಕಾರಿ ಹಾಕಿ ಸ್ವಚ್ಛ ಹಾಗು ರುಚಿಕರವಾಗಿ ಮಾಡಿ ಮಕ್ಕಳಿಗೆ ಊಟ ಬಡಿಸಿದ್ದರು. ಇಲಾಖೆಯಿಂದ ಬಂದ ಅನುದಾನ ಬಳಕೆಯಾಗಿದೆ. ಸಮಯಕ್ಕೆ ಸರಿಯಾಗಿ ಪಠ್ಯ ಪುಸ್ತಕ ಸಮವಸ್ತ್ರ ಹಂಚಿದ್ದರು. ಶಿಷ್ಯ ವೇತನ, ನೋಟ ಬುಕ್, ಬ್ಯಾಗ್, ಹಂಚಿದ್ದರು. ದಾಖಲಾತಿಯಂತೆ ಹಾಜರಾತಿ ಇರಲಿಲ್ಲ. ಮಕ್ಕಳ ಕಲಿಕೆ ಸಾಧಾರಣವಾಗಿತ್ತು. ಶಾಲಾ ಕಟ್ಟಡ ಹಳೆದಾಯಗಿದೆ ಮೂಲಭೂತ ಸೌಕರ್ಯ ಕೊರತೆಯಿದೆಯೆಂದು ಹೇಳಿದರು.

**1) ಸರಸ್ವತಿ ಹಿರಿಯ ಪ್ರಾಥಮಿಕ ಶಾಲೆ ಶಹಾಗಂಜ ಬೀದರ (ಅನುದಾನಿತ)**

ಈ ಶಾಲೆಯು ಖಾಸಗಿ ಅನುದಾನಿತ ಶಾಲೆಯಾಗಿದ್ದು, ಕನ್ನಡ ಮಾಧ್ಯಮದಲ್ಲಿ 1 ರಿಂದ 7ನೇ ತರಗತಿವರೆಗೆ ನಡೆಯುತ್ತಲಿದ್ದು ಅದೇ ಆವರಣದಲ್ಲಿ ಪ್ರೌಢ ಶಾಲೆಯು ನಡೆಯುತಲಿದೆ. ಸದರಿ ಶಾಲೆಯ ಶಿಕ್ಷಕರು ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ. ಹಾಗೂ ದಿನನಿತ್ಯ ಲೆಸನ್ ನೋಟ್ ಬರೆಯುತ್ತಾರೆ. ಹಾಗೂ ಪಾಠಕ್ಕೆ ಸಂಬಂಧಪಟ್ಟಂತೆ ಪಾಠೋಪಕರಣಗಳು ಬಳಸುತ್ತಾ ಚಟುವಟಿಕೆ ಆಧಾರಿತ ಪಾಠ ಬೋಧನೆ ಮಾಡುತ್ತಾರೆ. ಮಕ್ಕಳ ಶೈಕ್ಷಣಿಕ ಗುಣಮಟ್ಟ ಉತ್ತಮವಾಗಿರುತ್ತದೆ. ಸ್ವಂತ ಕಟ್ಟಡವಿದ್ದು, ಮೂಲಭೂತ ಸೌಕರ್ಯ ಇರುತ್ತದೆ. ಶಿಕ್ಷಕರ ಅನುಪಾತದಂತೆ ಮಕ್ಕಳು ಇರುತ್ತಾರೆ. ಇಲ್ಲಿ ಒಟ್ಟು ಹತ್ತು ಶಿಕ್ಷಕರಿದ್ದು, ವೇತನ ಪಡೆಯುತ್ತಲಿದ್ದಾರೆ. ಶಾಲೆಯ ವಾತಾವರಣ ಮತ್ತು ಸ್ವಚ್ಛತೆಯಿಂದ ಕೂಡಿರುತ್ತದೆ.

**2) ಶ್ರೀ ಸಾಯಿ ಪಬ್ಲಿಕ ಶಾಲೆ ಬೀದರ (ಅನುದಾನಿತ):**

ಈ ಶಾಲೆಯು ಖಾಸಗಿ ಅನುದಾನಿತ ಶಾಲೆಯಾಗಿದ್ದು, 1 ರಿಂದ 7ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲಿದೆ. ಮಕ್ಕಳ ಸಂಖ್ಯೆ 732 ಹೆಚ್ಚಾಗಿದ್ದರಿಂದ ಎ.ಬಿ.ಸಿ. ತರಗತಿ ವಿಭಾಗ ಮಾಡಿರುತ್ತಾರೆ. ಒಟ್ಟು 22 ಜನ ಶಿಕ್ಷಕರಿದ್ದು, 11ಜನ ಶಿಕ್ಷಕರು ವೇತನ ಪಡೆಯುತ್ತಲಿದ್ದಾರೆ, ಇಂದು 651 ಮಕ್ಕಳು ಶಾಲೆಗೆ ಹಾಜರಿದ್ದು, ಸ್ವಂತ ಕಟ್ಟದವಿದ್ದು, 15 ಕೋಣೆಗಳು ಇವೆ. ಶ್ರೀಮತಿ ಮಲ್ಲಮ್ಮಾ ಮುಖ್ಯ ಗುರುಗಳಾಗಿದ್ದಾರೆ ಉತ್ತಮ ರೀತಿಯಿಂದ ಶಾಲೆ ನಡೆಸಿಕೊಂಡು ಹೋಗುತ್ತಿದ್ದರು. ಶಾಲೆಯ ಸಮಯ 12-30 ರಿಂದ 5-30 ರವರೆಗೆ ನಡೆಯುತ್ತದೆ. ಶಿಕ್ಷಕರು ಸಮಯಕ್ಕೆ ಸರಿಯಾಗಿ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು. ಮಕ್ಕಳ ಕಲಿಕೆ ಚೆನ್ನಾಗಿದ್ದು, ಹೆಚ್ಚಿನ ಮಕ್ಕಳಿಗೆ ಓದಲು ಬರೆಯಲು ಬರುವುದು ನೋಡಲಾಯಿತು. ಈ ಸಂಸ್ಥೆಯ ಅಧ್ಯಕ್ಷರು ಶ್ರೀ ಬಂಡೆಪ್ಪಾ ಖಾಸೆಂಪುರ ಇದ್ದಾರೆ. ಕಾರ್ಯದರ್ಶಿ ಶ್ರೀ ಜನಾರ್ಧನ ಇದ್ದು, ಮೂಲಭೂತ ಸೌಲಭ್ಯ ಒದಗಿಸಿರುತ್ತಾರೆ. ಇಂದು 600 ಮಕ್ಕಳು ಮಧ್ಯಾಹ್ನ ಬಿಸಿಊಟ ಮಾಡಿದ್ದರು. ಅನ್ನ ಸಾಂಬಾರ ರುಚಿಕರವಾಗಿ ಮಾಡಿದ್ದರು. ಸಾಂಬಾರದಲ್ಲಿ ತರಕಾರಿ ಹಾಕಿದ್ದರು.

ಇಲಾಖೆಯಿಂದ ಬಂದಿರುವ ಪಠ್ಯ ಪುಸ್ತಕ ಶಿಷ್ಯವೇತನ ಹಂಚಿರುತ್ತಾರೆ. ಶಾಲೆಯ ವಾತಾವರಣ ಚೆನ್ನಾಗಿದೆ. ನಲಿ-ಕಲಿ ಪದ್ಧತಿ ಬೋಧನೆ ಇರಲಿಲ್ಲ. ಮಕ್ಕಳು ಸಮವಸ್ತ್ರ ಧರಿಸಿಕೊಂಡು ಸ್ವಚ್ಛ ಹಾಗೂ ಶಿಸ್ತಿನಿಂದ ಬಂದಿದ್ದರು.

**3) ಹಿಮಾಲಯ ಪ್ರಾಥಮಿಕ ಶಾಲೆ ನೌಬಾದ (ಅನುದಾನರಹಿತ):-**

ಈ ಶಾಲೆಯು ಅನುದಾನರಹಿತ ಶಾಲೆಯಾಗಿದ್ದು ಸಂಸ್ಥೆಯವರು ಫೀಸ್ ತೆಗೆದುಕೊಂಡು ಶಿಕ್ಷಕರಿಗೆ ವೇತನ ಕೊಡುವುರು. ಸ್ವಂತ ಕಟ್ಟಡವಿದ್ದು, ಆರ್.ಸಿ.ಸಿ. ಛಾವಣಿ ಹಾಕಿರುತ್ತಾರೆ. ಇಂಗ್ಲೀಷ್ ಮತ್ತು ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತಲ್ಲಿದೆ, ಇಂಗ್ಲೀಷಕ್ಕಾಗಿ 5ಜನ ಶಿಕ್ಷಕರು, ಕನ್ನಡಕ್ಕಾಗಿ 7ಜನ ಶಿಕ್ಷಕರಿದ್ದು, ಸಮಯಕ್ಕೆ ಸರಿಯಾಗಿ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು. ಹಾಡುತ್ತ, ಚಟುವಟಿಕೆ ಮುಖಾಂತರ ಭೋಧಿಸಿದ್ದರು. ಮಕ್ಕಳು ಆಸಕ್ತಿಯಿಂದ, ಆನಂದದಿಂದ ಕಲಿಯುತ್ತಿದ್ದರು. ಈ ಶಾಲೆಯಲ್ಲಿ 10 ಕೋಣೆಗಳಿವೆ. ಮಕ್ಕಳ ಕಲಿಕೆ ಚೆನ್ನಾಗಿತ್ತು, ಓದುಬರಹದಲ್ಲಿ ಉತ್ತಮವಾಗಿದ್ದರು. ಶಾಲೆಯು ಆಕರ್ಷಣೆಯಾಗಿದೆ, ಎಲ್ಲಾ ಮಕ್ಕಳು ಸಮವಸ್ತ್ರ ಧರಿಸಿಕೊಂಡು ಶಿಸ್ತಿನಿಂದ ಹಾಗೂ ಸ್ವಚ್ಛತೆಯಿಂದ ಬಂದಿದ್ದರು.

**4) ಬುದ್ಧಪ್ರಿಯಾ ಪ್ರಾಥಮಿಕ ಶಾಲೆ ಪ್ರತಾಪನಗರ ಬೀದರ:-**

ಈ ಶಾಲೆಯು ಅನುದಾನಿತ ಶಾಲೆಯಾಗಿದ್ದು, 1ರಿಂದ 7ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತಲ್ಲಿದೆ. 7ಜನ ಶಿಕ್ಷಕರಿದ್ದು, ಎಲ್ಲರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಭೋಧಿಸುತ್ತಿದ್ದರು. ಶಿಕ್ಷಕರು ಪಾಠಕ್ಕೆ ಸಂಬಂಧಿಸಿದ ಪಾಠೋಪಕರಣಗಳು ಬಳಸದೆ ಇರುವುದು ಕಂಡು ಬಂದಿತ್ತು. ನಲಿ-ಕಲಿ ಆಧಾರಿತ ಬೋಧನೆ ಇರಲಿಲ್ಲ. ಅನುದಾನಿತ ಶಾಲೆಯಾಗಿರುವುದರಿಂದ ಮಧ್ಯಾಹ್ನ ಬಿಸಿಊಟವಿತ್ತು. ಅನ್ನ, ಸಾಂಬಾರ, ಮಾಡಿದ್ದರು. ತರಕಾರಿ ಹಾಕಿದ್ದರು. ಶ್ರೀ ಬಸವರಾಜ ಮುಖ್ಯ ಗುರುಗಳಾಗಿದ್ದರು. ಪಠ್ಯ ಪುಸ್ತಕ ಶಿಷ್ಯವೇತನ ಹಂಚಿದ್ದರು. ಕಿರಿಯ ತರಗತಿ ಮಕ್ಕಳ ಕಲಿಕೆ ಸಾಧಾರಣವಿತ್ತು. ಹಿರಿಯ ತರಗತಿಯ ಮಕ್ಕಳ ಕಲಿಕೆ ಚೆನ್ನಾಗಿತ್ತು. ಎಲ್ಲಾ ಮಕ್ಕಳಿಗೆ ಕೂಡಲು ಬೆಂಚುಗಳಿರುವುದಿಲ್ಲ, ಶಾಲಾ ವಾತಾವರಣ ಚೆನ್ನಾಗಿದೆ.

**5) ರಾಘವೇಂದ್ರ ಹಿರಿಯ ಪ್ರಾಥಮಿಕ ಶಾಲೆ ಬೀದರ:-**

ಈ ಶಾಲೆಯು 1 ರಿಂದ 7ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದೆ. ಶ್ರೀ ಸಂಗಶೆಟ್ಟಿ ಹಲಬುರ್ಗೆ ಮುಖ್ಯ ಗುರುಗಳಾಗಿ ಉತ್ತಮ ರೀತಿಯಿಂದ ಶಾಲೆ ನಡೆಸಿಕೊಂಡು ಬಂದಿರುತ್ತಾರೆ. ಒಟ್ಟು 480 ಮಕ್ಕಳು ದಾಖಲಾಗಿದ್ದು ಇಂದು 430 ಮಕ್ಕಳು ಶಾಲೆಗೆ ಬಂದಿದ್ದರು. ಒಟ್ಟು 13ಜನ ಶಿಕ್ಷಕರಿದ್ದು, ವೇತನ ಪಡೆಯುತ್ತಲಿದ್ದಾರೆ. ಒಟ್ಟು 16 ಕೋಣೆಗಳು ಆರ್.ಸಿ.ಸಿ.ಯದಾಗಿವೆ. ಈ ಶಾಲೆಯು ಬೆಳಿಗ್ಗೆ 10.00 ಗಂಟೆಯಿಂದ 4.30ರವರೆಗೆ ನಡೆಯುತ್ತದೆ.

ಶಿಕ್ಷಕರು ಸಮಯಕ್ಕೆ ಸರಿಯಾಗಿ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು. ನಲಿ-ಕಲಿ ಆಧಾರಿತ ಬೋಧನೆ ಇರಲಿಲ್ಲ. ಪಾಠಕ್ಕೆ ಸಂಬಂಧಿಸಿದ ಪಾಠೋಪಕರಣಗಳು ಬಳಸದೇ ಇರುವುದು ಕಂಡು ಬಂದಿತ್ತು. ಈ ಶಾಲೆ ಮೂಲಭೂತ ಸೌಲಭ್ಯ ಹೊಂದಿದೆ. ಕುಡಿಯುವ ನೀರು, ಶೌಚಾಲಯ, ವಿದ್ಯುತ್ ಇತ್ಯಾದಿ ಸೌಲಭ್ಯವಿದೆ. ಇಂದು 430 ಮಕ್ಕಳು ಮಧ್ಯಾಹ್ನ ಬಿಸಿಊಟ ಮಾಡಿದ್ದರು. ಸ್ವಚ್ಛ ಹಾಗೂ

ರುಚಿಕರವಾಗಿ ಮಾಡಿದ್ದರು. ತರಕಾರಿ ಹಾಕಿದ್ದರು. ಮಕ್ಕಳಿಗೆ ಕೂಡಲೂ ಆಸನ ವ್ಯವಸ್ಥೆ ಇದೆ. ಗ್ರಂಥಾಲಯ ಪುಸ್ತಕಗಳಿವೆ. ಮಕ್ಕಳ ಕಲಿಕೆ ಚೆನ್ನಾಗಿತ್ತು. ಶಾಲಾ ವಾತಾವರಣ ಉತ್ತಮವಾಗಿದೆ, ಎಲ್ಲಾ ಮಕ್ಕಳು ಸಮವಸ್ತ್ರ ಧರಿಸಿಕೊಂಡು ಸ್ವಚ್ಛ ಹಾಗೂ ಶಿಸ್ತಿನಿಂದ ಬಂದಿದ್ದರು. ಸಂಸ್ಥೆಯ ಆಡಳಿತ ಮಂಡಳಿಯ ಸಹಕಾರವಿದೆ.

# ಹುಮನಾಬಾದ ತಾಲ್ಲೂಕು

## ಸರ್ಕಾರಿ ಪ್ರಾಥಮಿಕ ಶಾಲೆಗಳು

### 1) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ದುಬಲಗುಂಡಿ:-

ಈ ಶಾಲೆಯು 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲ್ಲಿದೆ. ಎತ್ತರವಾದ ಸ್ಥಳದಲ್ಲಿದ್ದು, ಪ್ರೌಢ ಶಾಲೆ ಹಾಗೂ ಪದವಿಪೂರ್ವ ಕಾಲೇಜು ಒಂದೇ ಕಡೆ ಇದೆ. ಶಾಲಾ ವಾತಾವರಣ ಚೆನ್ನಾಗಿದ್ದು, ಶಿಕ್ಷಕರ ಸಮಯಕ್ಕೆ ಸರಿಯಾಗಿ ಶಾಲೆಗೆ ಬಂದು ಪಾಠಬೋಧನೆ ಮಾಡುತ್ತಾರೆ. ನಲಿ-ಕಲಿ ಉತ್ತಮ ರೀತಿಯಿಂದ ಮಾಡಿರುತ್ತಾರೆ. ಮಕ್ಕಳು ಚಟುವಟಿಕೆ ಮೂಲಕ ಕಲಿಯುತಿದ್ದಾರೆ. ಮಕ್ಕಳ ಕಲಿಕೆ ಚೆನ್ನಾಗಿದ್ದು, ಹಿರಿಯ ತರಗತಿಯ ಮಕ್ಕಳ ಅರ್ಧದಷ್ಟು ಓದಲು ಬರೆಯಲು ಬರುವುದು ಕಂಡು ಬಂದಿದೆ. ಇಲಾಖೆಯಿಂದ ಬಂದಿರುವ ಬಟ್ಟೆ, ಪುಸ್ತಕ, ಶಿಷ್ಯವೇತನ, ಹಂಚಿರುತ್ತಾರೆ. ಮಧ್ಯಾಹ್ನ ಬಿಸಿಊಟ ಸ್ವಚ್ಛ ಹಾಗೂ ರುಚಿಕರ ಮಾಡಿ ಬಡಿಸಿದ್ದರು. ತರಕಾರಿ ಹಾಕಿದ್ದರು. ತಾಲ್ಲೂಕಿನ ಕೊನೆಯ ಭಾಗದಲ್ಲಿದೆ.

### 2) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ವರವಟ್ಟಿ (ಕೆ)

ಈ ಶಾಲೆಯು 1 ರಿಂದ 7ನೇ ತರಗತಿವರೆಗೆ ನಡೆಯುತ್ತಲ್ಲಿದ್ದು, 7ಜನ ಶಿಕ್ಷಕರಿದ್ದಾರೆ, ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ. ಮಕ್ಕಳ ಕಲಿಕೆ ಸಾಧಾರಣವಾಗಿದೆ ಅರ್ಧದಷ್ಟು ಮಕ್ಕಳು ಓದಲು ಬರೆಯಲು ಬಂದಿರುವುದಿಲ್ಲ. ಗೈರು ಹಾಜರು ಮಕ್ಕಳ ಸಂಖ್ಯೆ ಹೆಚ್ಚಾಗಿದೆ, ನಲಿ-ಕಲಿ ಉತ್ತಮ ರೀತಿಯಿಂದ ಮಾಡಿರುತ್ತಾರೆ, ಮಕ್ಕಳು ಆಸಕ್ತಿಯಿಂದ ಶಾಲೆಗೆ ಬಂದು ಚಟುವಟಿಕೆಯಿಂದ ಕಲಿಯುತ್ತಿದ್ದಾರೆ, ಮಧ್ಯಾಹ್ನ ಬಿಸಿಊಟ ಚೆನ್ನಾಗಿ ರುಚಿಕರವಾಗಿ ಮಾಡಿದ್ದರು, ಇಲಾಖೆಯಿಂದ ಬಂದಿರುವ ಬಟ್ಟೆ, ಪುಸ್ತಕ, ಇತ್ಯಾದಿ ಹಂಚಿರುತ್ತಾರೆ. ಈ ಗ್ರಾಮವು ಚಿಕ್ಕ ಗ್ರಾಮವಿದೆ, ಗೈರು ಹಾಜರಿರುವ ಮಕ್ಕಳಿಗೆ ಶಾಲೆಗೆ ತರಲು ಶಿಕ್ಷಕರು ಪ್ರಯತ್ನಿಸುತ್ತಲ್ಲಿದ್ದಾರೆ.

### 3) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಜಲಸಂಗಿ:-

ಈ ಶಾಲೆಯು 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದೆ. ಕನ್ನಡ ಮಾಧ್ಯಮದಲ್ಲಿ ಪ್ರೌಢ ಶಾಲೆಯು ನಡೆಯುತ್ತಲ್ಲಿದೆ. ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು. ದಾಖಲಾತಿ ಆದ ಮಕ್ಕಳು ಹಾಜರಾತಿ ಕಡಿಮೆ ಇರುತ್ತದೆ. ನಲಿಕಲಿ ಮೂಲಕ ಚಟುವಟಿಕೆಯಿಂದ ಬೋಧನೆ ಮಾಡುತ್ತಿದ್ದರು. ಕಾರ್ಡಗಳ ಬಳಕೆ, ಮೂಲಕ ಓದಲು, ಬರೆಯಲು ಕಲಿಯುತ್ತಿದ್ದರು. ಹಿರಿಯ ತರಗತಿಯ ಅರ್ಧದಷ್ಟು ಮಕ್ಕಳಿಗೆ ಓದಲು ಬರೆಯಲು, ಲೆಕ್ಕ ಬಾರದಿರುವುದು ಕಂಡು ಬಂದಿತ್ತು. ಇಲಾಖೆಯಿಂದ ಸರಬರಾಜು ಆದರ ಬಟ್ಟೆ, ಪುಸ್ತಕ, ನೋಟಬುಕ್, ಬ್ಯಾಗ್, ಶಿಷ್ಯವೇತನ ಹಂಚಿರುತ್ತಾರೆ. ಮೂಲಭೂತ ಸೌಲಭ್ಯವಿದೆ, ಶಾಲೆಯ ವಾತಾವರಣ ಚೆನ್ನಾಗಿದೆ.

**4) ಸರ್ಕಾರಿ ಮಾದರಿಯ ಪ್ರಾಥಮಿಕ ಶಾಲೆ ಹುಮನಾಬಾದ:-**

ಈ ಶಾಲೆಯು ಪಟ್ಟಣದ ಮಧ್ಯದಲ್ಲಿದ್ದು, 1ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತಲ್ಲಿದೆ. ಶಾಲೆಯ ಸುತ್ತಮುತ್ತ ಗದ್ದಲದ ವಾತಾವರಣವಿದೆ. ಗೈರು ಹಾಜರಿರುವ ಮಕ್ಕಳ ಸಂಖ್ಯೆ ಹೆಚ್ಚಾಗಿದೆ. ಅಂತಹ ಮಕ್ಕಳಿಗೆ ಶಾಲೆಗೆ ತರಲು ಪ್ರಯತ್ನಿಸುತ್ತಲಿದ್ದಾರೆ. ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ. ಅವಶ್ಯಕ ಸೌಲಭ್ಯವಿದೆ. ನಲಿ-ಕಲಿ ಮೂಲಕ ಪಾಠ ಬೋಧನೆ ಮಾಡುವುದು, ಚಟುವಟಿಕೆ ಮೂಲಕ ಆಸಕ್ತಿಯಿಂದ ಮಕ್ಕಳು ಕಲಿಯುತ್ತಿದ್ದರು. ಇಲಾಖೆಯಿಂದ ಬಂದಿರುವ ಸೌಲಭ್ಯ ಇತ್ಯಾದಿ ಮಕ್ಕಳಿಗೆ ಹಂಚಿರುತ್ತಾರೆ. ಮಧ್ಯಾಹ್ನ ಬಿಸಿ ಊಟ ಚೆನ್ನಾಗಿ ರುಚಿಕರವಾಗಿ ಮಾಡಿದ್ದರು. ಮಕ್ಕಳ ಕಲಿಕೆ ಸಾಧಾರಣವಿರುವುದು ಕಂಡು ಬಂದಿದೆ. ಪಟ್ಟಣದಲ್ಲಿ ಖಾಸಗಿ ಅನುದಾನಿತ/ಅನುದಾನರಹಿತ ಶಾಲೆಗಳು ಇರುವುದರಿಂದ ಮಕ್ಕಳ ಸಂಖ್ಯೆ ಕಡಿಮೆ ಇದೆ ಎಂದು ಮುಖ್ಯ ಗುರುಗಳು ಹೇಳಿರುತ್ತಾರೆ. ಅಲ್ಲದೆ ಶಿಕ್ಷಕರನ್ನು ಅನ್ಯ ಕೆಲಸಕ್ಕೆ ಬಳಸಿಕೊಳ್ಳುವುದರಿಂದ ಮಕ್ಕಳ ಕಲಿಕೆ ಕುಂಠಿತವಾಗುತ್ತಲಿದೆ.

**5) ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಕಲ್ಲೂರ ತಾಂಡಾ:-**

ಈ ಶಾಲೆಯು 1 ರಿಂದ 6ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದೆ. ಶ್ರೀ ಸುಭಾಷಚಂದ್ರ ಮುಖ್ಯ ಗುರುಗಳಾಗಿ ಕೆಲಸ ಮಾಡುತ್ತಿದ್ದರು. 2 ಜನ ಶಿಕ್ಷಕರಿದ್ದಾರೆ. ಒಟ್ಟು ಮಕ್ಕಳ ದಾಖಲಾತಿ 26 ಇದ್ದು, ಇಂದು 24 ಮಕ್ಕಳು ಶಾಲೆಗೆ ಹಾಜರಿರುತ್ತಾರೆ. ಮಧ್ಯಾಹ್ನ ಬಿಸಿ ಊಟ 24 ಮಕ್ಕಳು ಊಟ ಮಾಡಿದ್ದರು. 7 ಕೋಣೆಗಳಿವೆ. ತಾಂಡಾ ಚಿಕ್ಕದಾದರಿಂದ ಮಕ್ಕಳ ಸಂಖ್ಯೆ ಕಡಿಮೆ ಇದೆ ಎಂದರು. ಅಲ್ಲದೆ. ಆಯಾ ಸೀಸ್‌ನ್‌ದಲ್ಲಿ ಪಾಲಕರು ಮಕ್ಕಳನ್ನು ತೆಗೆದುಕೊಂಡು ಬೇರೆಕಡೆ ವಲಸೆ ಹೋಗುತ್ತಾರೆ. ಹೀಗಾಗಿ ಮೇಲಿಂದ ಮೇಲೆ ಗೈರು ಹಾಜರಿ ಇರುತ್ತಾರೆಂದು ಮುಖ್ಯ ಗುರುಗಳ ಹೇಳಿಕೆ ಇದೆ. ಹಾಗೂ ಮನೆಯಲ್ಲಿ ಲಂಬಾಣಿ ಭಾಷೆ ಮಾತನಾಡುವುದರಿಂದ ಕನ್ನಡ ಕಲಿಯಲು ಭಾಷೆ ಸಮಸ್ಯೆಯಾಗಿದೆ. ಮಕ್ಕಳ ಕಲಿಕೆ ಓದು-ಬರಹ ಸಾಧಾರಣವಿರುವುದು ಕಂಡು ಬಂದಿದೆ. ಶೌಚಾಲಯವಿದೆ, ಕುಡಿಯುವ ನೀರು ಇದೆ, ಮಕ್ಕಳಿಗೆ ಕೂಡಲು ಬೆಂಚುಗಳಿಲ್ಲದಕ್ಕಾಗಿ ಫರ್ಸಿ ಮೇಲೆ ಕೂಡುತ್ತಾರೆ. ಇಲಾಖೆಯಿಂದ ಬಂದಿರುವ ಸೌಲಭ್ಯಗಳು ಸಕಾಲಕ್ಕೆ ಹಂಚಿರುತ್ತಾರೆ. ಮಕ್ಕಳಲ್ಲಿ ಸ್ವಚ್ಛತೆ ಮತ್ತು ಶಿಸ್ತು ಕಂಡು ಬಂದಿರಲಿಲ್ಲ. ಶಿಕ್ಷಕರು ದಿನಾಲೂ ವೇಳೆಗೆ ಸರಿಯಾಗಿ ಬಂದು ಪಾಠ ಬೋಧನೆ ಮಾಡುತ್ತಾರೆ. ನಲಿ-ಕಲಿ ಪದ್ಧತಿ ಪ್ರಕಾರ ಕಾರ್ಡಗಳು ಬಳಕೆ ಮಾಡುತ್ತಾ ಮಕ್ಕಳ ಕಲಿಯುತ್ತಿರುವುದು ಕಂಡು ಬಂದಿದೆ.

## ಖಾಸಗಿ ಪ್ರಾಥಮಿಕ ಶಾಲೆಗಳು

### 1) ನಗರೇಶ್ವರ ಹಿರಿಯ ಪ್ರಾಥಮಿಕ ಶಾಲೆ ಹುಮನಾಬಾದ:-

ಈ ಶಾಲೆಯು 1ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದೆ. ಶ್ರೀ ಮಹಾರುದ್ರಪ್ಪಾ ಎಸ್.ಎಣಕೂರೆ ಮುಖ್ಯ ಗುರುಗಳಾಗಿರುತ್ತಾರೆ. ಒಟ್ಟು 7ಜನ ಶಿಕ್ಷಕರಿರುತ್ತಾರೆ. ಈ ಶಾಲೆಯು ಅನುದಾನರಹಿತ ಶಾಲೆಯಾಗಿದ್ದು, ಗೌರವಧನದ ಮೇಲೆ ಕೆಲಸ ಮಾಡುತ್ತಿದ್ದಾರೆ. ಆಡಳಿತ ಮಂಡಳಿಯವರು ವೇತನ ಕೊಡುತ್ತಿದ್ದರು. ಒಟ್ಟು 416 ಮಕ್ಕಳ ಸಂಖ್ಯೆ ಇದ್ದು, ಇಂದು 402 ಮಕ್ಕಳು ಹಾಜರಿದ್ದರು. 7ಕೋಣೆಗಳಿವೆ. ಮೂಲಭೂತ ಸೌಲಭ್ಯ ಹೊಂದಿದ್ದು, ಮಕ್ಕಳಿಗೆ ಕೂಡಲು ಬೆಂಚುಗಳ ವ್ಯವಸ್ಥೆ ಇದೆ. ಅನುದಾನ ರಹಿತ ಶಾಲೆ ಇದ್ದುದರಿಂದ ಸರ್ಕಾರದ ಯಾವುದೇ ಸೌಲಭ್ಯವಿರಲಿಲ್ಲ.

ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು. ಮಕ್ಕಳ ಕಲಿಕೆ ಚೆನ್ನಾಗಿತ್ತು. ಹೆಚ್ಚಿನ ಮಕ್ಕಳಿಗೆ ಓದಲು ಬರೆಯಲು ಬರುತ್ತಿರುವುದು ಕಂಡು ಬಂದಿತ್ತು. ಮಕ್ಕಳ ಹಾಜರಾತಿ ಚೆನ್ನಾಗಿತ್ತು. ಗೈರು ಹಾಜರಿರುವ ಮಕ್ಕಳ ಮನೆಗೆ ಹೋಗಿ ಪಾಲಕರಿಗೆ ತಿಳಿಸಿ ಹೇಳಿ ದಿನಾಲು ಶಾಲೆಗೆ ಬರುವಂತೆ ಶಿಕ್ಷಕರೆಲ್ಲರು ಪ್ರಯತ್ನಿಸುತೇವೆಂದು ಮುಖ್ಯ ಗುರುಗಳು ಹೇಳಿರುತ್ತಾರೆ. ಮಧ್ಯಾಹ್ನ ಬಿಸಿ ಊಟವಿಲ್ಲದಕ್ಕಾಗಿ ಮನೆಯಿಂದ ಟಿಫಿನ್ ತೆಗೆದುಕೊಂಡು ಬರುತ್ತಾರೆ. ಶಿಕ್ಷಕರು ಹಾಗೂ ಮಕ್ಕಳು ಪ್ರತೇಕವಾದ ಸಮವಸ್ತ್ರ ಧರಿಸಿಕೊಂಡು ಬರುತ್ತಿದ್ದರು.

ಶಾಲಾ ವಾತಾವರಣ ಚೆನ್ನಾಗಿದ್ದು, ಇದೊಂದು ಉತ್ತಮವಾದ ಶಾಲೆಯಾಗಿರುತ್ತದೆ. ಅಲ್ಲದೆ ಶಾಲಾ ವಾತಾವರಣ ಆಕರ್ಷಣಿಯವಾಗಿರುತ್ತದೆ.

### 2) ಶ್ರೀ ಲಕ್ಷ್ಮಿ ವೆಂಕಟೇಶ್ವರ ಬಾಲಭಾರತಿ ವಿದ್ಯಾಮಂದಿರ ಹಿರಿಯ ಪ್ರಾಥಮಿಕ ಶಾಲೆ ಹುಮನಾಬಾದ

ಈ ಶಾಲೆಯು ಅನುದಾನರಹಿತ ಪ್ರಾಥಮಿಕ ಶಾಲೆಯಾಗಿದ್ದು, ಕೆಲವರು ಗೌರವಧನ ತೆಗೆದುಕೊಂಡು ಕೆಲಸ ಮಾಡುತಲ್ಲಿದ್ದಾರೆ. ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿರುವುದು ಕಂಡು ಬಂದಿದೆ. ಚಟುವಟಿಕೆಯಿಂದ ಪಾಠ ಬೋಧನೆ ಮಾಡುತ್ತಿದ್ದರು. 1 ರಿಂದ 7ನೇ ತರಗತಿಗೆ ಒಟ್ಟು 293 ಮಕ್ಕಳು ದಾಖಲಾಗಿದ್ದು, 241 ಮಕ್ಕಳು ಶಾಲೆಗೆ ಹಾಜರಾಗಿರುತ್ತಾರೆ. 7ಜನ ಶಿಕ್ಷಕರು ವೇತನ ಪಡೆಯುತಲ್ಲಿದ್ದಾರೆ. 7ಕೋಣೆಗಳಿವೆ. ಇಂದು ಮಧ್ಯಾಹ್ನ ಬಿಸಿಊಟ 241 ಮಕ್ಕಳು ಊಟ ಮಾಡಿರುತ್ತಾರೆ. ಸ್ವಚ್ಛ ಹಾಗೂ ರುಚಿಕರವಾಗಿ ಊಟ ಮಾಡಿ ಬಡಿಸಿದ್ದರು.

ಮಕ್ಕಳ ಕಲಿಕೆ ಚೆನ್ನಾಗಿರುತ್ತದೆ ಪಠ್ಯಪುಸ್ತಕ ಹಂಚಿದ್ದರು. ಸಮವಸ್ತ್ರ ಸಂಸ್ಥೆಯವರು ಹಾಗು ಪಾಲಕರು ತೆಗೆದುಕೊಂಡಿರುತ್ತಾರೆ. ಶಾಲೆಯ ವಾತಾವರಣ ಉತ್ತಮವಾಗಿತ್ತು.

### 3) ಮೌನೇಶ್ವರ ಹಿರಿಯ ಪ್ರಾಥಮಿಕ ಶಾಲೆ ಹುಮನಾಬಾದ(ಅನುದಾನಿತ)

ಈ ಶಾಲೆಯು 1 ರಿಂದ 8ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದ್ದು ಇಲ್ಲಿ ಶ್ರೀ ಅರವಿಂದ ಮುಖ್ಯ ಗುರುಗಳಾಗಿ ಕೆಲಸ ಮಾಡುತ್ತಿದ್ದರು. ಒಟ್ಟು ಮಕ್ಕಳ ಸಂಖ್ಯೆ 257 ಇದ್ದು, 248 ಮಕ್ಕಳು ಶಾಲೆಗೆ ಬಂದಿರುತ್ತಾರೆ. ಅನುದಾನಿತ ಶಾಲೆಯಾಗಿದೆ. 8 ಜನ ಶಿಕ್ಷಕರಿದ್ದಾರೆ 9 ಕೋಣೆಗಳಿವೆ ಕಲಿಕೆ ಸಾಧಾರಣವಾಗಿರುತ್ತದೆ.

ಶಾಲೆಗಳ ಸಂಖ್ಯೆ ಹೆಚ್ಚಾಗಿದ್ದರಿಂದ ಬೇರೆ ಬೇರೆ ಶಾಲೆಗಳಲ್ಲಿ ಮಕ್ಕಳು ದಾಖಲಾಗಿರುತ್ತಾರೆಂದು ಮುಖ್ಯ ಗುರುಗಳು ಹೇಳಿರುತ್ತಾರೆ. ಶಾಲಾ ವಾತಾವರಣ ಚೆನ್ನಾಗಿರುವುದಿಲ್ಲ, ಶಿಕ್ಷಕರ ಹಾಗೂ ಮಕ್ಕಳಿಗಾಗಿ ಪ್ರತೇಕವಾಗಿ ಸಮವಸ್ತ್ರ ಮಾಡಿಕೊಂಡಿರುತ್ತಾರೆ. ಅನುದಾನಿತ ಶಾಲೆವಿದ್ದುದರಿಂದ ಮಧ್ಯಾಹ್ನ ಬಿಸಿಊಟ ಇದೆ ಚೆನ್ನಾಗಿ ಮಾಡಿ ಬಡಿಸಿದ್ದರು.

### 4) ಕಿನ್ನರಿ ಪರಮೇಶ್ವರಿ ಪ್ರಾಥಮಿಕ ಶಾಲೆ ಹಳ್ಳಿಖೇಡ(ಕೆ)

ಈ ಶಾಲೆಯೂ ತಾಲ್ಲೂಕಿನ ಕೊನೆಭಾಗದಲ್ಲಿದ್ದು 1ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತ್ತಲ್ಲಿದೆ. ಪ್ರೌಢ ಶಾಲೆಯು ಸಹ ಇದೆ ಅನುದಾನಿತ ಶಾಲೆಯಾಗಿದ್ದು 7ಜನ ಶಿಕ್ಷಕರು ವೇತನ ಪಡೆಯಲ್ಲಿದ್ದಾರೆ. ಈ ಶಾಲೆಯ ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು. ಬೋಧನೆಯು ಆಕರ್ಷಿಣಿಯವಾಗಿತ್ತು. ಸ್ವಂತ ಕಟ್ಟಡವಿದ್ದು, ಆರ್.ಸಿ.ಸಿ. ಕೋಣೆಗಳಿವೆ. ಮೂಲಭೂತ ಸೌಲಭ್ಯ ಹೊಂದಿದ್ದು, ಮಕ್ಕಳ ಕಲಿಕೆ ಉತ್ತಮವಾಗಿರುತ್ತದೆ. ಶಾಲಾ ವಾತಾವರಣ ಚೆನ್ನಾಗಿದೆ. ಇಂದು ಮಧ್ಯಾಹ್ನ ಬಿಸಿಊಟ ತರಕಾರಿ ಹಾಕಿ ಸ್ವಚ್ಛ ಹಾಗು ರುಚಿಕರವಾಗಿ ಮಾಡಿ ಬಡಿಸಿದ್ದರು. ಆಡಳಿತ ಮಂಡಳಿಯ ಸಹಕಾರ ಚೆನ್ನಾಗಿದೆ ಎಂದು ಸಿಬ್ಬಂದಿ ಹೇಳಿದ್ದರು.

### 5) ಕರಿಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆ ಹುಡುಗಿ:-

ಈ ಶಾಲೆಯಲ್ಲಿ ಶ್ರೀ ಅರವಿಂದ ಪಾಟಿಲ ಮುಖ್ಯ ಗುರುಗಳಾಗಿದ್ದು, ಉತ್ತಮ ರೀತಿಯಿಂದ ಶಾಲೆನಡೆಸುತ್ತಲ್ಲಿದ್ದಾರೆ. 1 ರಿಂದ 7ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತಲ್ಲಿದೆ. ಒಟ್ಟು 257 ಮಕ್ಕಳು ದಾಖಲಾಗಿದ್ದು, ಇಂದು 248 ಮಕ್ಕಳು ತರಗತಿಯಲ್ಲಿ ಹಾಜರಿದ್ದರು. ಒಟ್ಟು 8 ಜನ ಶಿಕ್ಷಕರು ನೇಮಕಾತಿಯಾಗಿದ್ದು, ಸೇವೆಗೆ ಹಾಜರೀರುತ್ತಾರೆ. ಒಟ್ಟು 10ಕೋಣೆಗಳಿವೆ ಈ ಶಾಲೆಯು ಅನುದಾನರಹಿತ ಶಾಲೆಯಾಗಿದೆ. ಹೀಗಾಗಿ ಸರ್ಕಾರದಿಂದ ಯಾವುದೇ ರೀತಿಯ ಸೌಲಭ್ಯವಿರುವುದಿಲ್ಲ. ಗೌರವಧನ ತೆಗೆದುಕೊಂಡು ಕೆಲಸ ಮಾಡುತ್ತಿದ್ದಾರೆ. ಮೂಲಭೂತ ಸೌಲಭ್ಯಹೊಂದಿದ್ದು, ಗುಣಮಟ್ಟದ ಶಿಕ್ಷಣ ನೀಡುತಲ್ಲಿದ್ದಾರೆ. ಮಕ್ಕಳ ಕಲಿಕೆ ಚೆನ್ನಾಗಿರುತ್ತದೆ.

## ಔರಾದ ತಾಲ್ಲೂಕು

ಸರ್ಕಾರಿ ಪ್ರಾಥಮಿಕ ಶಾಲೆಗಳು

**1) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಔರಾದ (ಬಿ)**

ಈ ಶಾಲೆಯು ಕನ್ನಡ ಮತ್ತು ಮರಾಠಿ ಮಾಧ್ಯಮದಲ್ಲಿ 1 ರಿಂದ 7ನೇ ತರಗತಿವರೆಗೆ ನಡೆಯುತ್ತಿದೆ. ಕನ್ನಡಕ್ಕೆ 121 ಮಕ್ಕಳು ದಾಖಲಾಗಿದ್ದು, 107 ಮಕ್ಕಳು ಹಾಜರಿದ್ದರು. ಮಾರಾಠಿ ಮಾಧ್ಯಮಕ್ಕೆ 99 ಮಕ್ಕಳು ದಾಖಲಾಗಿದ್ದು, 93 ಮಕ್ಕಳು ಹಾಜರಿದ್ದರು. ಕನ್ನಡ 8 ಶಿಕ್ಷಕರು, ಮರಾಠಿಗೆ 4ಜನ ಶಿಕ್ಷಕರಿದ್ದು ಪಾಠ ಬೋಧನೆಯಲ್ಲಿ ತೋಡಗಿದ್ದರು. 14 ಕೋಣೆಗಳಿವೆ, ಮೂಲಭೂತ ಸೌಲಭ್ಯ ಕುಡಿಯುವ ನೀರು, ಶೌಚಾಲಯ, ಗ್ರಂಥಾಲಯ ಪುಸ್ತಕಗಳಿವೆ, ಕೆಲವು ತರಗತಿ ಮಕ್ಕಳಗೆ ಕೂಡಲು ಬೆಂಚುಗಳಿವೆ, ಇಂದು ಅನ್ನ, ಸಾರು ಚೆನ್ನಾಗಿ ಸ್ವಚ್ಛ ರುಚಿಕರವಾಗಿ ಮಾಡಿದ್ದರು. ಪಟ್ಟಣದಲ್ಲಿ ಹೆಚ್ಚಿನ ಶಾಲೆಗಳಿರುವುದರಿಂದ ಮಕ್ಕಳ ಸಂಖ್ಯೆ ಕಡಿಮೆ ಇವೆ ಎಂದು ಹೇಳಿದ್ದರು. ಮಕ್ಕಳ ಕಲಿಕೆ ಸಾಧಾರಣವಾಗಿತ್ತು, ಓದು ಬರಹ ಬರುವ ಮಕ್ಕಳು ಕಡಿಮೆಯಾಗಿದ್ದರು. ಶಿಕ್ಷಕರ ಪಾಠ ಬೋಧನೆ ಆಕರ್ಷಣಿಯವಿರಲಿಲ್ಲ. ಗೈರು ಹಾಜರಿದ್ದ ಮಕ್ಕಳ ಪಾಲಕರಿಗೆ ಭೇಟಿ ಮಾಡಿ ಶಾಲೆಗೆ ತರಲು ಪ್ರಯತ್ನಿಸುವುದಿಲ್ಲ. ಹೀಗಾಗಿ ಮಕ್ಕಳ ಸಂಖ್ಯೆ ಕಡಿಮೆ ಇದೆ.

**2) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಸಂಗಮ:-**

ಈ ಶಾಲೆಯು 1ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತಲ್ಲಿದ್ದು, ಒಟ್ಟು 139 ಮಕ್ಕಳು ಶಾಲೆಗೆ ದಾಖಲಾಗಿದ್ದು, ಇಂದು 120 ಮಕ್ಕಳು ಶಾಲೆಗೆ ಹಾಜರೀರುತ್ತಾರೆ. ಒಟ್ಟು 9ಜನ ಶಿಕ್ಷಕರಿರುತ್ತಾರೆ, 10ಕೋಣೆಗಳಿವೆ, ಶೌಚಾಲಯ, ವಿದ್ಯುತ್, ಆಟದ ಮೈದಾನ ಇದೆ. ಪಾಠೋಪಕರಣಗಳು, ಪಿಠೋಪಕರಣಗಳು, ಗ್ರಂಥಾಲಯ ಪುಸ್ತಕಗಳು, ಆಟಿಕೆ ಸಾಮಗ್ರಿಗಳು, ಪ್ರಯೋಗಾಲಯ ಇರುವುದಿಲ್ಲವೆಂದು ಮುಖ್ಯ ಗುರುಗಳು ಹೇಳಿರುತ್ತಾರೆ. ಶಿಕ್ಷಕರು ವೇಳೆಗೆ ಸರಿಯಾಗಿ ದಿನಾಲು ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ. ಆದರೆ ಪಾಠಕ್ಕೆ ಸಂಬಂಧಿಸಿದಂತೆ ಭೋದನೆ ಸಮಯದಲ್ಲಿ ಪಾಠೋಪಕರಣಗಳು ಬಳಸದೆ ಇರುವುದು ಕಂಡು ಬಂದಿತ್ತು.

ಮಕ್ಕಳ ದಾಖಲಾತಿ ಸಂಖ್ಯೆ ಕಡಿಮೆಯಾಗಿರುತ್ತದೆ. ಮಕ್ಕಳ ಅನುಪಾತದಂತೆ ನೋಡಿದಾಗ ಶಿಕ್ಷಕರ ಸಂಖ್ಯೆ ಹೆಚ್ಚಾಗಿರುತ್ತದೆ, ನಲಿ-ಕಲಿ ಮೂಲಕ ಕಾರ್ಡ ಬಳಕೆ ಮಾಡುತ್ತ ಚಟುವಟಿಕೆ ಆಧಾರಿತ ಬೋಧನೆ ಮಾಡುವುದು ಕಂಡು ಬಂದಿತ್ತು, ಗೈರು ಹಾಜರೀರುವ ಮಕ್ಕಳ ಪಾಲಕರಿಗೆ ಭೆಟ್ಟಿ ಮಾಡಿ ಶಾಲೆಗೆ ಬರುವಂತೆ ಪ್ರಯತ್ನಿಸುತಲ್ಲಿದ್ದೇವೆಂದು ಮುಖ್ಯ ಗುರುಗಳು ಹೇಳಿರುತ್ತಾರೆ. ಶಿಕ್ಷಕರು ಪಾಠ ಬೋಧನೆ ಆಕರ್ಷಣೆಯಾಗಿರಲಿಲ್ಲ. ಹಿರಿಯ ತರಗತಿ ಮಕ್ಕಳ ಓದುಬರಹ ಕಲಿಕೆ ಸಾಧಾರಣವಾಗಿರುತ್ತದೆ.

ಇಲಾಖೆಯಿಂದ ಬಂದಿರುವ ಅನುದಾನ ಸರಿಯಾಗಿ ಬಳಕೆ ಮಾಡಿರುತ್ತಾರೆ. ಅಲ್ಲದೆ ಸಮವಸ್ತ್ರ, ಪಠ್ಯಪುಸ್ತಕ, ಶಿಷ್ಯವೇತನ, ನೋಟಬುಕ್, ಬ್ಯಾಗ, ಹಂಚಿರುತ್ತಾರೆ. ಇಂದು ಮಧ್ಯಾಹ್ನ ಬಿಸಿಊಟ ಮಾಡಿರುತ್ತಾರೆ. ಅನ್ನ ಸಾರ ಮಾಡಿರುತ್ತಾರೆ. ಸಾರದಲ್ಲಿ ತರಕಾರಿ ಹಾಕಿ ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿ

ಮಕ್ಕಳಿಗೆ ಊಟ ಬಡಿಸಿದ್ದರು. ಶಾಲಾ ವಾತಾವರಣ ಚೆನ್ನಾಗಿದೆ, ಆದರೆ ಮೂಲಭೂತ ಸೌಲಭ್ಯದ ಕೊರತೆವಿದೆ, ಹೀಗಾಗಿ ಈ ಶಾಲೆಯು ಆಕರ್ಷಣೆಯವಾಗಿರುವುದಿಲ್ಲ. ಹೀಗಾಗಿ ಮಕ್ಕಳ ದಾಖಲಾತಿ ಮತ್ತು ಹಾಜರಾತಿ ಕಡಿಮೆ ಇದೆ. ಔರಾದ ತಾಲ್ಲೂಕಿನ ಕೊನೆಭಾಗದಲ್ಲಿದೆ.

### 3) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಳತ (ಬಿ)

ಈ ಶಾಲೆಯು 1 ರಿಂದ 7ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತಲಿದೆ. ಒಟ್ಟು 184 ಮಕ್ಕಳು ದಾಖಲಾಗಿದ್ದು, ಇಂದು 169 ಮಕ್ಕಳು ಶಾಳೆಗೆ ಹಾಜರಾಗಿರುತ್ತಾರೆ. 169 ಮಕ್ಕಳು ಮಧ್ಯಾಹ್ನ ಬಿಸಿಊಟ ಮಾಡಿರುತ್ತಾರೆ. ಮಧ್ಯಾಹ್ನ ಬಿಸಿಊಟವು ಸ್ವಚ್ಛ ಹಾಗೂ ರುಚಿಕರವಾಗಿ ಮಾಡಿದ್ದರು. ಮಕ್ಕಳ ಸಂಖ್ಯೆಗೆ ಅನುಗುಣವಾಗಿ ತರಕಾರಿ ಸಾಂಬಾರ ಪದಾರ್ಥ ಹಾಕಿದ್ದರು. ಒಟ್ಟು 9ಜನ ಶಿಕ್ಷಕರಿದ್ದು, ಶಾಲಾ ವೇಳಾಪಟ್ಟಿಯಂತೆ ಎಲ್ಲರೂ ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ. ಅಲ್ಲದೆ ಪಾಠಕ್ಕೆ ಸಂಬಂಧಿಸಿದಂತೆ ಪಾಠೋಪಕರಣಗಳು ಬಳಸುವುದು ಕಂಡು ಬಂದಿತ್ತು. ಒಟ್ಟು 10 ಕೋಣೆಗಳಿವೆ, ಶಾಲೆಗೆ ಸುತ್ತುಗೋಡೆ ಇರುವುದಿಲ್ಲ, ಕುಡಿಯುವ ನೀರಿನ ವ್ಯವಸ್ಥೆ ಇದೆ, ಶೌಚಾಲಯ ಇದೆ, ಆಟದ ಮೈದಾನವಿದೆ, ವಿದ್ಯುತ್ ಇದೆ, ಮಕ್ಕಳಿಗೆ ಕೂಡಲು ಬೆಂಚಗಳು ಇಲ್ಲ, ವಾಚನಾಲಯ ಪುಸ್ತಕಗಳಿವೆ, ಪ್ರಯೋಗಾಲಯ ಇರುವುದಿಲ್ಲ.

ಇಲಾಖೆಯಿಂದ ಸರಬರಾಜು ಆದ ಪಠ್ಯ ಪುಸ್ತಕ, ಸಮವಸ್ತ್ರ, ಪ.ಜಾ/ಪ.ಪಂ. ಮಕ್ಕಳಿಗೆ ನೋಟ ಬುಕ್, ಬ್ಯಾಗ್, ಶಿಷ್ಯವೇತನ ಹಂಚಿರುತ್ತಾರೆ, ಮಕ್ಕಳಲ್ಲಿ ಶಿಸ್ತು ಕಂಡು ಬಂದಿತ್ತು, ಕಿರಿಯ ತರಗತಿಗಳಿಗೆ ಹೊರತು ಪಡಿಸಿದರೆ ಹಿರಿಯ ತರಗತಿಯ ಮಕ್ಕಳ ಕಲಿಕೆ ಓದು ಬರಹ ಚೆನ್ನಾಗಿದೆ. ನಲಿ-ಕಲಿ ಮಕ್ಕಳು ಬಹಳ ಆಸಕ್ತಿಯಿಂದ ಚಟುವಟಿಕೆ ಮಾಡಿದ್ದರು. ಶಾಲಾ ವಾತಾವರಣ ಚೆನ್ನಾಗಿದೆ.

### 4) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಳತ (ಬಿ)

ಈ ಶಾಲೆಯು 1ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಿದ್ದು ಒಟ್ಟು 131 ಮಕ್ಕಳು ದಾಖಲಾಗಿದ್ದು, ಇಂದು 109 ಮಕ್ಕಳು ಶಾಲೆಗೆ ಬಂದಿರುತ್ತಾರೆ. ಇಲ್ಲಿ ಮುಖ್ಯಗುರುಗಳ ಸಹಿತ ಒಟ್ಟು 07 ಜನ ಶಿಕ್ಷಕರಿರುತ್ತಾರೆ. ಶಿಕ್ಷಕರು ಶಾಲಾ ವೇಳಾಪಟ್ಟಿಯಂತೆ ದಿನಾಲೂ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಾರೆ, ಶಾಲೆಗೆ ಸುತ್ತುಗೋಡೆ, ಮಕ್ಕಳಿಗೆ ಕೂಡಲು ಬೆಂಚಗಳು, ಕುಡಿಯುವ ನೀರಿನ ವ್ಯವಸ್ಥೆ ಇರುವುದಿಲ್ಲ. ಶೌಚಾಲಯವಿದೆ, ವಿದ್ಯುತ್ ಇದೆ, ಶಿಕ್ಷಕರಿಂದ ಹಾಗೂ ಮಕ್ಕಳಿಂದ ತಯಾರಿಸಲ್ಪಟ್ಟ ಪಾಠೋಪಕರಣಗಳು ಇವೆ, ಇಂದು 109 ಮಕ್ಕಳು ಮಧ್ಯಾಹ್ನ ಬಿಸಿಊಟ ಸ್ವಚ್ಛ ಹಾಗೂ ರುಚಿಕರವಾದ ಊಟ ಮಾಡಿದ್ದರು. ಇಲಾಖೆಯಿಂದ ಸರಬರಾಜು ಆದ ಪಠ್ಯ ಪುಸ್ತಕ, ಸಮವಸ್ತ್ರ, ಹಂಚಿರುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಕ್ಕಳಿಗೆ ಶಿಷ್ಯವೇತನ, ನೋಟ ಬುಕ್, ಬ್ಯಾಗ್, ಹಂಚಿದ್ದರು.

ಶಿಕ್ಷಕರ ಪಾಠಬೋಧನೆ ಚೆನ್ನಾಗಿದೆ. ಕಿರಿಯ ತರಗತಿ ಮಕ್ಕಳು ಓದು ಬರೆಯಲು ಕನಿಷ್ಟ ಮಟ್ಟದಲ್ಲಿದ್ದಾರೆ. ಓರಿಯ ತರಗತಿಯ ಕೆಲವು ಮಕ್ಕಳು ಮಾತ್ರ ಓದಲು ಬರೆಯಲು ಬರುವುದು ನೋಡಿದೆ.

ನಲಿ-ಕಲಿ ಚೆನ್ನಾಗಿ ಮಾಡಿರುತ್ತಾರೆ, ನಲಿ-ಕಲಿ ಮಕ್ಕಳು ಆಸಕ್ತಿಯಿಂದ ಚಟುವಟಿಕೆಯಿಂದ ಕಲಿಯುತ್ತಿರುವುದು ಕಂಡು ಬಂದಿತ್ತು.

**5) ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ನಿಟ್ಟೂರ (ಕೆ):-**

ಈ ಶಾಲೆಯು ಔರಾದ ತಾಲ್ಲೂಕಿನ ಕೊನೆಭಾಗದ ನಾರಂಜಾ ನದಿಯ ದಡದ ಪಕ್ಕದಲ್ಲಿದ್ದು, 1 ರಿಂದ 7ನೇ ತರಗತಿ ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತಲ್ಲಿದೆ. ಶಿಕ್ಷಕರು ವೇಳೆಗೆ ಸರಿಯಾಗಿ ಶಾಲೆಗೆ ಬಂದು ಪಾಠ ಬೋಧನೆ ಮಾಡಿರುತ್ತಾರೆ. ಕಿರಿಯ ತರಗತಿ ಅಂದರೆ 1 ರಿಂದ 3ನೇ ತರಗತಿವರೆಗೆ ನಲಿ-ಕಲಿ ಆಧಾರಿತ ಕಲಿಕೆಯಿದ್ದು. ಮಕ್ಕಳು ಕಾರ್ಡಗಳ ಬಳಕೆ ಮೂಲಕ ಚಟುವಟಿಕೆ ಮೂಲಕ ಕಲಿಯುತ್ತಿರುವುದು ಕಂಡು ಬಂದಿತ್ತು. ನಲಿಕಲಿಗೆ ಸಂಬಂಧಿಸಿದ ಎಲ್ಲಾ ಸಾಮಗ್ರಿಗಳು ಇದ್ದವು. ಈ ಶಾಲೆಗೆ ಸುತ್ತುಗೋಡೆ, ಶೌಚಾಲಯ ಇದೆ, ಕುಡಿಯುವ ನೀರಿನ ವ್ಯವಸ್ಥೆ ಇದೆ. ಶಾಲಾ ಕೈ ತೋಟವಿಲ್ಲ, ಕೂಡಲು ಮಕ್ಕಳಿಗೆ ಬೆಂಚುಗಳಿಲ್ಲದಕ್ಕಾಗಿ ನೆಲದ ಮೇಲೆ ಕುಳಿತು ಪಾಠ ಕೇಳುತ್ತಾರೆ. ಪಾಠೋಪಕರಣಗಳು, ಗ್ರಂಥಾಲಯ ಪುಸ್ತಕಗಳು, ಆಟಿಕೆ ಸಾಮಗ್ರಿಗಳು ಇವೆ, ವಿದ್ಯುತ್ ಇದೆ.

ಇಲಾಖೆಯಿಂದ ಸರಬರಾಜು ಆದ ಸಮವಸ್ತ್ರ ಪಠ್ಯ ಪುಸ್ತಕ, ಶಿಷ್ಯವೇತನ, ನೋಟಬುಕ್, ಬ್ಯಾಗ್ ಹಂಚಿರುತ್ತಾರೆ. ಶಾಲೆಗೆ ಬಂದಿರುವ ಅನುದಾನ ದುರ್ಬಳಕೆಯಾಗಿರುವುದಿಲ್ಲ. ಮಕ್ಕಳ ಕಲಿಕೆ ಓದು ಬರಹ ಸಾಧಾರಣವಾಗಿರುವುದು ಕಂಡು ಬಂದಿತ್ತು, ಶಾಲೆಯ ಸುತ್ತಮುತ್ತ ಹೊಲಸಿನ ವಾತಾವರಣ ಕಂಡು ಬಂದಿತ್ತು.

## ಖಾಸಗಿ ಪ್ರಾಥಮಿಕ ಶಾಲೆಗಳು

### 1) ನಾಲಂದಾ ಹಿರಿಯ ಪ್ರಾಥಮಿಕ ಶಾಲೆ ಔರಾದ (ಬಿ) ಅನುದಾನಿತ:-

ಈ ಶಾಲೆಯು ಅನುದಾನಿತ ಖಾಶಗಿ ಪ್ರಾಥಮಿಕ ಶಾಲೆಯಾಗಿದ್ದು, 1 ರಿಂದ 7ನೇ ತರಗತಿವರೆಗೆ ಕನ್ನಡ, ಮರಾಠಿ ಹಾಗೂ ಉರ್ದು ಮಾಧ್ಯಮದಲ್ಲಿ ನಡೆಯುತ್ತಲ್ಲಿದೆ. ಕನ್ನಡ ಒಟ್ಟು ಮಕ್ಕಳ ಸಂಖ್ಯೆ: 321, ಮರಾಠಿ ಸಂಖ್ಯೆ: 290, ಉರ್ದು ಸಂಖ್ಯೆ: 290 ದಾಖಲೆಯಾಗಿದ್ದು, ಇಂದು ಕನ್ನಡದಲ್ಲಿ 238, ಮರಾಠಿದಲ್ಲಿ 226, ಉರ್ದು 247 ಮಕ್ಕಳು ಶಾಲೆಗೆ ಹಾಜರಿರುತ್ತಾರೆ. ನಲಿಕಲಿ ಆಧಾರಿತ ಪಾಠ ಬೋಧನೆ ಇಲ್ಲ. ಶಿಕ್ಷಕರು ನಲಿಕಲಿಗೆ ಸಂಬಂಧಿಸಿದ ಕಲಿಕಾ ಸಾಮಗ್ರಿಗಳು ಮಾಡಿರುವುದಿಲ್ಲ. 2ಕೋಣೆಗಳು ಪಕ್ಕಾ ಇದ್ದು, 18 ಕೋಣೆಗಳು ಕಚ್ಚಾವಿರುತ್ತವೆ. ಕನ್ನಡ 6ಜನ ಶಿಕ್ಷಕರು, ಮರಾಠಿ 7ಜನ ಶಿಕ್ಷಕರು, ಉರ್ದು 5ಜನ ಶಿಕ್ಷಕರಿರುತ್ತಾರೆ. ತರಗತಿಯಲ್ಲಿ ಹೋಗಿ ತಲೆ ಏಣಿಕೆ ಮಾಡಿದಾಗ ಮಕ್ಕಳ ಹಾಜರಾತಿ ಬಹಳ ಕಡಿಮೆ ಇದ್ದದ್ದು ಕಂಡು ಬಂದಿತ್ತು. ಶಿಕ್ಷಕರು ಪಾಠೋಪಕರಣಗಳು ಬಳಸದೆ ಪಾಠ ಬೋಧನೆ ಮಾಡುತ್ತಿರುವುದು ಕಂಡು ಬಂದಿತ್ತು. ಮಕ್ಕಳ ಕಲಿಕೆ, ಓದುಬರಹ ಸಾಧಾರಣವಾಗಿತ್ತು. ಶಾಲಾ ವಾತಾವರಣ ಸರಿ ಕಂಡು ಬಂದಿರುವುದಿಲ್ಲ.

ಇಲಾಖೆಯಿಂದ ಬಂದ ಪಠ್ಯ ಪುಸ್ತಕ ಹಂಚಿದ್ದರು, ಇಂದು 400 ಮಕ್ಕಳು ಮಧ್ಯಾಹ್ನ ಬಿಸಿಊಟ ಮಾಡಿದ್ದರು, ತರಕಾರಿ ಹಾಕಿ ಸಾರ ಚೆನ್ನಾಗಿ ಮಾಡಿರುವುದು ಕಂಡು ಬಂದಿದೆ.

### 2) ತಿರುಮಲಾ ಹಿರಿಯ ಪ್ರಾಥಮಿಕ ಶಾಲೆ ಔರಾದ (ಬಿ) ಅನುದಾನಿತ:-

ಈ ಶಾಲೆಯು ಅನುದಾನಿತ ಶಾಲೆಯಾಗಿದ್ದು 1ರಿಂದ 7ನೇ ತರಗತಿ ಕನ್ನಡ ಮತ್ತು ಮರಾಠಿ ಮಾಧ್ಯಮದಲ್ಲಿ ನಡೆಯುತಲ್ಲಿದ್ದು, ಕನ್ನಡ ಮಾಧ್ಯಮದ ಮಕ್ಕಳ ದಾಖಲಾತಿ 331 ಇದ್ದು, ಮರಾಠಿ ಮಾಧ್ಯಮದಲ್ಲಿ 268 ಮಕ್ಕಳು ದಾಖಲಾಗಿರುತ್ತಾರೆ. ಇಂದು ಕನ್ನಡ ಮಾಧ್ಯಮದ 270 ಮಕ್ಕಳು ಮತ್ತು ಮರಾಠಿ ಮಾದ್ಯಮದ 233 ಮಕ್ಕಳು ಹಾಜರಿರುತ್ತಾರೆ. ಕನ್ನಡಕ್ಕಾಗಿ 6ಜನ ಶಿಕ್ಷಕರು ಮರಾಠಿಗಾಗಿ 7ಜನ ಶಿಕ್ಷಕರಿರುತ್ತಾರೆ.

ಶಿಕ್ಷಕರು ವೇಳೆಗೆ ಸರಿಯಾಗಿ ಶಾಲೆಗೆ ಬಂದು ಪಾಠ ಹೇಳುತ್ತಾರೆ ಆದರೆ ಪಾಠೋಪಕರಣಗಳ ಬಳಕೆ ಮಾಡುವುದು ಕಂಡು ಬಂದಿರಲಿಲ್ಲ. ಒಟ್ಟು 14 ಕೋಣೆಗಳಿದ್ದವು. ಶಾಲೆಗೆ ಸುತ್ತುಗೋಡೆ ಇಲ್ಲ, ವಿದ್ಯುತ್ ಇದೆ, ಶೌಚಾಲಯ ಇಲ್ಲ, ಕುಡಿಯುವ ನೀರಿನ ವ್ಯವಸ್ಥೆ ಇದೆ. ಪಠ್ಯ ಪುಸ್ತಕ ಹಂಚಿರುತ್ತಾರೆ. ಶಿಷ್ಯವೇತನ ಹಂಚಿದ್ದರು. ಶಿಕ್ಷಕರ ಪಾಠ ಬೋಧನೆ ಆಕರ್ಷಣಿಯದಾಗಿದೆ. ಮಕ್ಕಳ ಕಲಿಕೆ ಓದು ಬರಹ ಚೆನ್ನಾಗಿದೆ, ಶಾಲಾ ವಾತಾವರಣ ಚೆನ್ನಾಗಿದೆ. ಇಂದು ಅನ್ನ ಸಾಂಬಾರ ಮಾಡಿ ಊಟ ಬಡಿಸಿದ್ದರು.

### 3) ಮಹಾತ್ಮಾಗಾಂಧಿ ಹಿರಿಯ ಪ್ರಾಥಮಿಕ ಶಾಲೆ ಔರಾದ: ಅನುದಾನಿತ)

ಈ ಶಾಲೆಯು ಅನುದಾನಿತ ಶಾಲೆಯಾಗಿದ್ದು 1 ರಿಂದ 7ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ನಡೆಯುತ್ತಲ್ಲಿದೆ ಒಟ್ಟು 236 ಮಕ್ಕಳು ದಾಖಲಾಗಿದ್ದು, ಇಂದು 129 ಮಕ್ಕಳು ಶಾಲೆಗೆ ಹಾಜರಿರುತ್ತಾರೆ. ಒಟ್ಟು 7ಜನ ಶಿಕ್ಷಕರು ಇದ್ದು ಇಂದು 3ಜನ ಶಿಕ್ಷಕರು ಕೆಲಸ ಮಾಡುತಲ್ಲಿದ್ದಾರೆ ಹಾಗೂ ವೇತನ ಪಡೆಯುತಲ್ಲಿದ್ದಾರೆ. 4 ಜನ ಶಿಕ್ಷಕರು ಹೆಚ್ಚುವರಿಯಾಗಿ ಬೇರೆ ಶಾಲೆಗಳಿಗೆ ವರ್ಗಾವಣೆಯಾಗಿರುತ್ತಾರೆ. 7ಕೋಣೆಗಳಿವೆ. ಶಿಕ್ಷಕರು ಸರಿಯಾದ ಸಮಯಕ್ಕೆ ಶಾಲೆಗೆ ಬರುವುದಿಲ್ಲ. ಪಾಠೋಪಕರಣಗಳ ಬಳಕೆ ಮಾಡದೆ ಪಾಠ ಭೋದನೆ ಮಾಡುತ್ತಿರುವುದು ಕಂಡು ಬಂದಿತ್ತು ನಲಿ-ಕಲಿ ಆಧಾರಿತ ಕಲಿಕೆ ಇಲ್ಲ. ಭಾಗಶ: ಮಕ್ಕಳಿಗೆ ಓದಲು ಬರೆಯಲು ಬಾರದೇ ಇರುವುದು ಕಂಡು ಬಂದಿತ್ತು. ಮಕ್ಕಳಿಗೆ ಕೂಡಲು ಬೆಂಚಗಳಿಲ್ಲ, ಗ್ರಂಥಾಲಯ ಪುಸ್ತಕಗಳಿಲ್ಲ, ಗೈರು ಹಾಜರಿರುವ ಮಕ್ಕಳ ಸಂಖ್ಯೆ ಹೆಚ್ಚಾಗಿದೆ, ಮಧ್ಯಾಹ್ನದ ಬಿಸಿಊಟವಿದ್ದು ಇಂದು ಅನ್ನ ಸಾಂಬಾರ ಮಾಡಿ ತರಕಾರಿ ಹಾಕಿದ್ದರು. ಮೂಲಭೂತ ಸೌಲಭ್ಯದ ಕೊರತೆವಿದೆ. ಶಾಲೆಯು ಆಕರ್ಷಣಿಯವಾಗಿ ಕಂಡು ಬಂದಿರುವುದಿಲ್ಲ. ಶಿಕ್ಷಕರ ಹಾಗೂ ಸಂಸ್ಥೆಯ ಸದಸ್ಯರ ನಿರ್ಲಕ್ಷ ಆಲಸ್ಯತನವೇ ಕಾರಣವೆಂಬುದು ಗೊತ್ತಾಗಿದೆ.

### 4) ನವಚೇತನ ಹಿರಿಯ ಪ್ರಾಥಮಿಕ ಶಾಲೆ ಬೋರಾಳ (ಅನುದಾನರಹಿತ):-

ಈ ಶಾಲೆಯು ಅನುದಾನರಹಿತ ಖಾಸಗಿ ಶಾಲೆಯಾಗಿದ್ದು 1 ರಿಂದ 7ನೇ ತರಗತಿಯವರೆಗೆ ಕನ್ನಡ ಮತ್ತು ಮರಾಠಿ ಮಾಧ್ಯಮದಲ್ಲಿ ನಡೆಯುತ್ತಲಿದ್ದು, ಕನ್ನಡಕ್ಕಾಗಿ 5ಜನ ಶಿಕ್ಷಕರು, ಮರಾಠಿಗಾಗಿ 7ಜನ ಶಿಕ್ಷಕರಿದ್ದಾರೆ, ಈ ಶಾಲೆಯು ಔರಾದದಿಂದ ಸುಮಾರು 8 ಕಿ.ಮೀ. ದೂರದಲಿದ್ದು, ಗ್ರಾಮೀಣ ಭಾಗದಲ್ಲಿದೆ. ಅನುದಾನರಹಿತ ಶಾಲೆ ಇರುವುದರಿಂದ ಸಂಸ್ಥೆಯವರು ಶಿಕ್ಷಕರಿಗೆ ವೇತನ ಕೊಡುತ್ತಲ್ಲಿದ್ದಾರೆ. ಮೂಲಭೂತ ಸೌಲಭ್ಯ ಕೊರತೆಯಿದೆ. ಶಿಕ್ಷಕರು ದಿನಾಲೂ ಸರಿಯಾದ ಸಮಯಕ್ಕೆ ಶಾಲೆಗೆ ಬಂದು ಪಾಠ ಬೋಧನೆ ಮಾಡುತ್ತಿದ್ದರು, ಚಟುವಟಿಕೆ ಆಧಾರಿತ ಪಾಠ ಬೋಧನೆಯಾಗಿತ್ತು, ಮಕ್ಕಳು ಆಸಕ್ತಿಯಿಂದ ಚಟುವಟಿಕೆಯಿಂದ ಪದ್ಯ ಹಾಡಿದ್ದರು. ಮಕ್ಕಳ ಕಲಿಕೆ ಚೆನ್ನಾಗಿತ್ತು, ಹಿರಿಯ ತರಗತಿಯ ಮಕ್ಕಳು ಓದು ಬರಹದಲ್ಲಿ ಚೆನ್ನಾಗಿದ್ದು, ಸುಧಾರಣೆಯ ಹಂತದಲ್ಲಿರುವುದು ಕಂಡು ಬಂದಿದೆ.

ಈ ಶಾಲೆಯ್ಲಿ ನಲಿಕಲಿ ಆಧಾರಿತ ಕಲಿಕೆ ಬೋಧನೆ ಇರಲಿಲ್ಲ, ಹಳೆಯ ಪದ್ಧತಿಯಂತೆ ಪಾಠ ಬೋಧನೆ ಮಾಡುತ್ತಿರುವುದು ಕಂಡು ಬಂದಿತ್ತು. ಕೆಲವು ಶಿಕ್ಷಕರು ಪಾಠೋಪಕರಣ ಬಳಸದೇ ಬೋಧನೆ ಮಾಡುತ್ತಿದ್ದರು.

5) ಲಿಟ್ಲ ಫ್ಲಾವರ್ ಪ್ರಾಥಮಿಕ ಶಾಲೆ ಔರಾದ (ಅನುದಾನರಹಿತ):-

ಈ ಶಾಲೆಯು ಒಂದು ಉತ್ತಮವಾದ ಶಾಲೆಯಾಗಿದ್ದು, ಇಲ್ಲಿ ಇಂಗ್ಲೀಷ ಮತ್ತು ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತ್ತಲ್ಲಿದೆ. ಅನುದಾನರಹಿತ ಶಾಲೆಯಾಗಿರುವುದರಿಂದ ಮಕ್ಕಳಿಂದ ಫೀಸ್ ತೆಗೆದುಕೊಂಡು ಶಿಕ್ಷಕರ ವೇತನ ಕೊಡುತ್ತಾರೆ. ಅಲ್ಲದೆ ಶಾಲೆಯು ಮೂಲಭೂತ ಸೌಲಭ್ಯದ ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಶಿಕ್ಷಕರು ಆಕರ್ಷಣಿಯವಾಗಿ ಚಟುವಟಿಕೆಯಿಂದ ಬೋಧನೆ ಮಾಡುತ್ತಿರುವುದು ಕಂಡು ಬಂದಿತ್ತು. ಮಕ್ಕಳು ಸಮವಸ್ತ್ರ ಧರಿಸಿ ಉತ್ತಮ ರೀತಿಯಿಂದ ಶಿಸ್ತಾಗಿ ಶಾಲೆಗೆ ಬಂದಿದ್ದರು. ಸರ್ಕಾರದಿಂದ ಯಾವುದೇ ರೀತಿಯ ಅನುದಾನ ಪಡೆಯದೇ ಕೇವಲ ಮಕ್ಕಳ ಫೀಸ್ ಮೇಲೆ ಗುಣಮಟ್ಟದ ಶಿಕ್ಷಣ ಕೊಡುತ್ತಿದ್ದರು. ಪಾಲಕರ ಅಭಿಪ್ರಾಯ ಈ ಶಾಲೆ ಬಗ್ಗೆ ಉತ್ತಮವಾಗಿದೆ. ಸರ್ಕಾರಿ ಶಾಲೆಗೂ ಮೀರಿಸುವಂತೆ ಕೆಲಸ ಮಾಡುತ್ತಿದ್ದಾರೆ. ಆಡಳಿತ ಮಂಡಳಿಯ ಸದಸ್ಯರು ಕಾಳಜಿವಹಿಸಿ ಪ್ರಗತಿಯ ಹಂತದ ಕಡೆ ಲಕ್ಷವಹಿಸುತ್ತಿರುವುದು ಕಂಡು ಬಂದಿತ್ತು. ಶಿಕ್ಷಕರಿಗೂ ಸಮವಸ್ತ್ರವಿದ್ದು, ಕಷ್ಟ ಪಟ್ಟು ದುಡಿಯುವ ಶಿಕ್ಷಕರಿದ್ದಾರೆ. ಒಟ್ಟಾರೆ ಈ ಶಾಲೆಯು ಮೌಲ್ಯಧಾರಿತ ಹಾಗೂ ಗುಣಮಟ್ಟದ ಶಿಕ್ಷಣ ಕೊಡುತ್ತಿರುವುದು ಕಂಡು ಬಂದಿತ್ತು.

ಅಧ್ಯಯ ೭

# ಶಿಕ್ಷಣದ ಗುಣಮಟ್ಟ ಸವಾಲುಗಳು ಹಾಗೂ ಪರಿಹಾರಗಳು ಪಾಲಕರ, ಶಿಕ್ಷಕರ, ವಿದ್ಯಾರ್ಥಿಗಳ ಮತ್ತು ಎಸ್.ಡಿ.ಎಂ.ಸಿ. ಅವರ ಕರ್ತವ್ಯಗಳು

## ಅಧ್ಯಯ 7

**ಶಿಕ್ಷಣದ ಗುಣಮಟ್ಟ ಸವಾಲುಗಳು ಹಾಗೂ ಪರಿಹಾರಗಳು:–** (ಸರ್ಕಾರ, ಸಾರ್ವಜನಿಕರ, ಪಾಲಕರ, ಶಿಕ್ಷಕರ, ವಿದ್ಯಾರ್ಥಿಗಳ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯವರ ಹಾಗೂ ಇತರರ ಅಭಿಪ್ರಾಯ).

ಕರ್ನಾಟಕ ರಾಜ್ಯದಲ್ಲಿ ಬರುವ ಜಿಲ್ಲೆಗಳಲ್ಲಿ ಬೀದರ ಜಿಲ್ಲೆಯು ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಯಂಬ ಹಣೆಪಟ್ಟಿ ಕಟ್ಟಲಾಗಿದೆ. ಅದರಲ್ಲಿ ಬುನಾದಿಯಾದ ಪ್ರಾಥಮಿಕ ಶಾಲೆಗಳಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳು, ಖಾಸಗಿ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಣದ ಗುಣಮಟ್ಟ ವಿಭಿನ್ನ ರೀತಿಯದ್ದಾಗಿರುತ್ತದೆಂಬ ಭಾವನೆ ಪಾಲಕರಲ್ಲಿ ಸಾರ್ವಜನಿಕರಲ್ಲಿ ಮೂಡಿ ಬಂದಿದೆ. ಖಾಸಗಿ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟ ಹಾಗೂ ಕಲಿಕೆ ದೃಷ್ಟಿಯಿಂದ ಉತ್ತಮ ವ್ಯವಸ್ಥೆ ಇರುತ್ತದೆಂಬ ಪಾಲಕರ ಮನೋಭಾವನೆಯಾಗಿದೆ. ಆದರೆ ಶಿಕ್ಷಣದ ಮಹತ್ವ ಅರಿತವರು ವಿರಳ. ಶಿಕ್ಷಣ ಇಲಾಖೆ ಸರ್ಕಾರಿ ಶಾಲೆಗಳಿಗೆ ಖಾಸಗಿ ಶಾಲೆಗಳಿಗಿಂತ ಹೆಚ್ಚಿನ ಸೌಲಭ್ಯ ಒದಗಿಸುತ್ತದೆ. ಶಿಕ್ಷಕರಿಗೆ ವಿವಿಧ ರೀತಿಯ ತರಬೇತಿ ಹಾಗೂ ವಿಷಯವಾರು ತರಬೇತಿ ನೀಡುತ್ತದಲ್ಲದೆ. ಮಕ್ಕಳಿಗೂ ಹೆಚ್ಚಿನ ಸೌಲಭ್ಯ ಕಲ್ಪಿಸುತ್ತಿದೆ, ಆದರೂ ಸರ್ಕಾರಿ ಪ್ರಾಥಮಿಕ ಶಾಲೆಗಳು ಖಾಸಗಿ ಪ್ರಾಥಮಿಕ ಶಾಲೆಗಳಿಗಿಂತ ಉತ್ತಮವಾಗಿದೆ. ಅಲ್ಲದೆ ಸರ್ಕಾರಿ ಶಾಲೆಗಳಲ್ಲಿ ನೇಮಕರಾದ ಶಿಕ್ಷಕರು ಹೆಚ್ಚಿನ ಅಂಕ ಪಡೆದು, ಸಿ.ಈ.ಟಿ. ಮುಖಾಂತರ ಹೆಚ್ಚಿನ ಅಂಕಗಳಿಸಿದ ಶಿಕ್ಷಕರನ್ನು ನೇಮಕ ಮಾಡಿಕೊಳ್ಳುತ್ತಾರೆ. ಮತ್ತು ಮೂಲಭೂತ ಸೌಲಭ್ಯವು ಸಹ ಹೊಂದಿರುತ್ತದೆ. ಆದರೆ ಖಾಸಗಿ ಶಾಲೆಗಳಲ್ಲಿ ಕೆಲಸ ಮಾಡುವ ಶಿಕ್ಷಕರು ಹೆಚ್ಚಿನ ಆಸಕ್ತಿ ವಹಿಸಿ ಶ್ರಮಪಡುತ್ತಾರೆ ಶಾಲಾ ವೇಳೆ ಅಲ್ಲದೆ ಹೆಚ್ಚಿನ ಸಮಯ ತೆಗೆದುಕೊಂಡು ಗುಣಮಟ್ಟದ ಶಿಕ್ಷಣ ವಿವಿದ ಸಾಂಸ್ಕೃತಿಕ ಚಟುವಟಿಕೆ ಮೂಲಕ ಪಾಠ ಬೋಧನೆ ಮಾಡುತ್ತಾರೆ ಅಲ್ಲದೆ ಖಾಸಗಿ ಶಾಲೆಯಲ್ಲಿ ಓದಿಸುವ ಮಕ್ಕಳ ಪಾಲಕರು ಸುಶಿಕ್ಷಿತ ಶ್ರೀಮಂತರು ಇರುವವರು ಶಾಲಾ ಶುಲ್ಕ ನೀಡಿ ಮಕ್ಕಳ ಕಡೆ ಹೆಚ್ಚಿನ ಗಮನಹರಿಸುತ್ತಾರೆ. ಅಲ್ಲದೆ ಬೇರೆ ಕಡೆ ಟಿವಿಶನ್ ಇಟ್ಟು ಅಭ್ಯಾಸದ ಕಡೆ ಹೆಚ್ಚಿನ ಕಾಳಜಿವಹಿಸುತ್ತಾರೆ.

ಖಾಸಗಿ ಶಾಲೆಯ ಸಿಬ್ಬಂದಿಯವರ ಮೇಲೆ ಆಡಳಿತ ಮಂಡಳಿ ಸದಸ್ಯರ ಮೇಲ್ವಿಚಾರಣೆ ಇದ್ದು, ಸಿಬ್ಬಂದಿಗೆ ಹಿಡಿತದಲ್ಲಿಟ್ಟುಕೊಂಡು ಹೆಚ್ಚಿನ ಕೆಲಸ ತೆಗೆದುಕೊಳ್ಳುತ್ತಾರೆ. ಕೆಲವೊಂದು ಖಾಸಗಿ ಅನುದಾನಿತ ಶಾಲೆಗಳಿದ್ದು, ಅನೇಕ ಶಾಲೆಗಳಲ್ಲಿ ಮಕ್ಕಳ ಹಾಜರಾತಿ ಸಂಖ್ಯೆ ಕಡಿಮೆ ಇರುತ್ತದೆ. ಮೂಲಭೂತ ಸೌಲಭ್ಯ ಇಲ್ಲದೆ ಇರುವ ಶಾಲೆಗಳಿವೆ. ಹೀಗಾಗಿ ಇಲಾಖೆಯವರು ಹೆಚ್ಚುವರಿ ಎಂದು ಗುರುತಿಸಿ ಬೇರೆ ಬೇರೆ ಅನುದಾನಿತ ಖಾಸಗಿ ಶಾಲೆಗಳಿಗೆ ವರ್ಗಾವಣೆ ಮಾಡಿರುತ್ತಾರೆ. ಅನೇಕ ಖಾಸಗಿ ಶಾಲೆಗಳಲ್ಲೂ ಗುಣಮಟ್ಟದ ಶಿಕ್ಷಣ ಇರುವುದಿಲ್ಲ. ಆದರೆ ಸರ್ಕಾರಿ ಶಾಲೆಗಳಲ್ಲಿನ ಸಿಬ್ಬಂದಿ ಮೇಲೆ ಮೇಲ್ವಿಚಾರಣೆಯ ಕೊರತೆ ಇದೆ ಹಾಗೂ ಈ ಶಾಲೆಗಳಲ್ಲಿ ಓದುವ ಮಕ್ಕಳು ಆರ್ಥಿಕವಾಗಿ ಬಡವರು, ಕೂಲಿಕಾರ್ಮಿಕರು, ದೀನದಲಿತರು, ಕೃಷಿ ಕಾರ್ಮಿಕರ ಬಡ ಮಕ್ಕಳಿರುತ್ತಾರೆ. ಅಲ್ಲದೆ ಅನಕ್ಷರಸ್ಥ ಪಾಲಕರಿದ್ದು, ಮೂಢನಂಬಿಕೆಯ ವಿಚಾರ ಮಾಡಿ ಲಿಂಗ ಭೇದ ಮಾಡಿ ಗಂಡು ಮಕ್ಕಳಿಗೆ ಶಾಲೆ ಕಲಿಸಬೇಕು ಹೆಣ್ಣು ಹುಡುಗಿಯರಿಗೆ ಮನೆಕೆಲಸಕ್ಕಾಗಿ ತಾಯಿಯ ಸೌಲಭ್ಯಕ್ಕಾಗಿ ಬಳಸಿಕೊಳ್ಳುವ ಸಂಪ್ರದಾಯ ಗ್ರಾಮೀಣ ಭಾಗದಲ್ಲಿ ಹೆಚ್ಚಿನದಾಗಿದೆ.

ಶಿಕ್ಷಣದ ಗುಣಮಟ್ಟ ಕೆಲವೊಂದು ಸರ್ಕಾರಿ ಶಾಲೆಗಳಲ್ಲಿಯು ಉತ್ತಮವಿದೆ. ಕೆಲವೊಂದು ಶಾಲೆಗಳಲ್ಲಿ ಉತ್ತಮ ರೀತಿಯಿಂದ ಶಿಕ್ಷಣವಿಲ್ಲದಕ್ಕೆ ದೂರುಗಳಿಗೆ ಕಾರಣಗಳಾಗಿವೆ. ಹಾಗೆಯೇ ಕೆಲವೊಂದು ಖಾಸಗಿ ಅನುದಾನರಹಿತ, ಅನುದಾನಿತ ಶಾಲೆಗಳು ಉತ್ತಮ ಶಿಕ್ಷಣ ನೀಡುವಲ್ಲಿ ಮೂಲಭೂತ ಶಿಕ್ಷಣ ನೀಡುವಲ್ಲಿ ಯಶಸ್ವಿಯಾಗಿವೆ. ಕೆಲವೊಂದು ಖಾಸಗಿ ಶಾಲೆಗಳಲ್ಲಿ ಮುಲಭೂತ ಸೌಲಭ್ಯವಿಲ್ಲದೆ ಗುಣಮಟ್ಟ ಶಿಕ್ಷಣವಿಲ್ಲದಕ್ಕಾಗಿ ಅನೇಕ ಶಾಲೆಗಳು ಇಲಾಖೆಯವರು ಮುಚ್ಚಿಸಿದ್ದಾರೆ.

ಪಟ್ಟಣ ಪ್ರದೇಶದಲ್ಲಿ ಸುಶಿಕ್ಷಿತ ನೌಕರ ಪಾಲಕರಿದ್ದು, ಮಕ್ಕಳ ಶಿಕ್ಷಣದ ಬಗ್ಗೆ ಕಾಳಜಿವಹಿಸುತ್ತಾರೆ. ಅವರಿಗೆ ಶಿಕ್ಷಣ ಮಹತ್ವವಿರುವುದರಿಂದ ಮಕ್ಕಳ ಕಲಿಕೆ ಕಡೆ ಗಮನ ಹರಿಸುತ್ತಾರೆ. ಗ್ರಾಮೀಣ ಭಾಗದಲ್ಲಿನ ಜನರು ಅನಕ್ಷರಸ್ತರು, ಕೂಲಿಕಾರ್ಮಿಕರು, ಬಡವರು, ಇರುವುದರಿಂದ ಶಿಕ್ಷಣದ ಕುರಿತು ಮಕ್ಕಳ ಕಲಿಕೆ ಕಡೆ ಹೆಚ್ಚಿನ ಕಾಳಜಿ ವಹಿಸದೆ ಇರುವುದರಿಂದ ಶಿಕ್ಷಣದ ಮಹತ್ವ ಅರಿಯದೇ ತಮ್ಮ ಕೆಲಸಕ್ಕಾಗಿ ಸಹಾಯಕ್ಕಾಗಿ ಮಕ್ಕಳನ್ನು ಬಳಸಿಕೊಳ್ಳುತ್ತಾರೆ. ಹೆಣ್ಣು ಹುಡುಗಿಯರಿಗೆ ಕಲಿಸಬಾರದೆಂಬ ಭಾವನೆಯು ಅನೇಕ ಪಾಲಕರಲ್ಲಿದೆ ಹೀಗಾಗಿ ಪುರುಷರಿಗಿಂತ ಮಹಿಳೆಯರು ಹೆಚ್ಚು ಅನಕ್ಷರಸ್ಥರಾಗಿದ್ದಾರೆ.

ಬೀದರ ಜಿಲ್ಲೆಯ ಜನಸಂಖ್ಯೆ ಹಾಗೂ ಸಾಕ್ಷರತಾ ಪ್ರಮಾಣ ಜನಸಂಖ್ಯೆ (2001ರ ಜನಗಣತಿಯಂತೆ)

| ಕ್ರ.ಸಂ. | ಬ್ಲಾಕ/ತಾಲ್ಲೂಕ ಹೆಸರು | ಗಂಡು | ಹೆಣ್ಣು | ಒಟ್ಟು | ಸಾಕ್ಷರತಾ ಪ್ರಮಾಣ | | |
|---|---|---|---|---|---|---|---|
| | | | | | ಗಂಡು | ಹೆಣ್ಣು | ಒಟ್ಟು |
| 1 | ಔರಾದ | 125533 | 119563 | 245096 | 69.95% | 45.95% | 57.87% |
| 2 | ಬ.ಕಲ್ಯಾಣ | 152774 | 146747 | 299521 | 71.57% | 46.19% | 59.10% |
| 3 | ಭಾಲ್ಕಿ | 122112 | 132112 | 257020 | 75.31% | 48.85% | 62.43% |
| 4 | ಬೀದರ | 219094 | 219094 | 404917 | 74.45% | 54.83% | 64.96% |
| 5 | ಹುಮನಾಬಾದ | 151103 | 294817 | 445920 | 71.18% | 46.22% | 58.50% |

ಬೀದರ ಜಿಲ್ಲೆಯ ಮಕ್ಕಳ ಪಾಲಕರು ಶಿಕ್ಷಣದ ಮಹತ್ವ ತಿಳಿದುಕೊಳ್ಳುವುದರಲ್ಲಿ ಹಿಂದಿದ್ದಾರೆ. ಅವರಿಗೆ "ಗುಣಮಟ್ಟ ಶಿಕ್ಷಣ" ಕುರಿತು ತಿಳಿಸುವುದು ಅತ್ಯವಶ್ಯಕತೆಯಾಗಿದೆ. ಶ್ರೀ ಎಸ್.ಎಂ. ಜನವಾಡಕ ಹಿರಿಯ ಸಾಹಿತಿಗಳು ಗುಣಮಟ್ಟದ ಶಿಕ್ಷಣ ಅರ್ಥ ಕುರಿತು ಹೀಗೆ ಹೇಳಿದ್ದಾರೆ. ಗುಣಮಟ್ಟ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ಗುಣಮಟ್ಟ ಶಿಕ್ಷಣವೇ ಇಲಾಖೆಯ ಪರಮ ಗುರಿ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವುದಕ್ಕೆ ಸರಕಾರದ

ಮೊದಲ ಆದ್ಯತೆ. ಶಿಕ್ಷಣದ ಗುಣಮಟ್ಟವನ್ನು ಖಾತ್ರಿಗೊಳಿಸುವುದಕ್ಕೆ ಸರಕಾರದ ಇಲಾಖೆಯ ಕಾರ್ಯಕ್ರಮಗಳು ಹೀಗೆ ಮೊದಲಾದ ಬಹು ಅಪಾಯಮಾನ ಘೋಷಣೆಗಳನ್ನು ಪ್ರತಿದಿನ ಎಂಬಂತೆ ಇತ್ತಿಚಿನ ವರ್ಷಗಳ ನಾವು ಕೇಳುತ್ತಾ ಬಂದಿದ್ದೇವೆ.

ಆಶ್ಚರ್ಯವೆಂದರೆ ಯಾರು ಕೂಡ ಶಿಕ್ಷಣದಲ್ಲಿ ಗುಣಮಟ್ಟ ಎಂದರೇನು ಅದರ ಮಾಪನಕ್ಕಿರುವ ಮಾನದಂಡಗಳೇನು ಎಂಬುದರ ಕುರಿತು ಎಲ್ಲೂ ಎಂದೂ ಪ್ರಶ್ನಿಸಿದಂತಿಲ್ಲ. ಈ ಬಗ್ಗೆ ಇಂದು ಶಿಕ್ಷಣದಲ್ಲಿ ಮತ್ತು ಶಿಕ್ಷಣವಲಯದಲ್ಲಿ ಹಲವು ಸಂದೇಹಗಳಿವೆ. ಪರೀಕ್ಷೆಗಳಲ್ಲಿ ಶೇಕಡಾ ನೂರು ಹಾಗೂ ಅದಕ್ಕೆ ಸಮೀಪದ ಉತ್ತಮ ಫಲಿತಾಂಶ ಬರುವ ಶಾಲೆಗಳಲ್ಲಿ ಕ್ರೀಡಾ ಸ್ಪರ್ದೆಗಳಲ್ಲಿ ಪ್ರತಿಭಾ ಕಾರಂಜಿಯಲ್ಲಿ ಹೆಚ್ಚು ಬಹುಮಾನ ಗಿಟ್ಟಿಸಿದ ಶಾಲೆಗಳಲ್ಲಿ ಗುಣಮಟ್ಟದ ಶಿಕ್ಷಣವಿದೆ ಎಂದು ಸಾಮಾನ್ಯವಾಗಿ ಪೋಷಕರು ಗ್ರಹಿಸಿಕೊಂಡಂತಿದೆ. ಅಂತೆಯೇ ಪರೀಕ್ಷೆಗಳಲ್ಲಿ ಶೇ 95% ರಿಂದ 98% ಅಂಕಗಳೊಂದಿಗೆ ಉತ್ತೀರ್ಣವಾದ ವಿದ್ಯಾರ್ಥಿಗೆ ಗುಣಮಟ್ಟ ಶಿಕ್ಷಣದ ದೊರಕಿದೆ ಎಂದೂ ತಿಳಿದುಕೊಂಡಂತಿದೆ. ಹೀಗೆ ಶಾಲಾ ಫಲಿತಾಂಶದೊಂದಿಗೆ ವಿದ್ಯಾರ್ಥಿ ಪಡೆದ ಪರೀಕ್ಷಾ ಅಂಕಗಳೊಂದಿಗೆ ನಾನಾ ಸ್ಪರ್ದೆಗಳಲ್ಲಿ ಶಾಲೆ ಬಾಚಿಕೊಂಡ ಬಹುಮಾನಗಳ ಸಂಖ್ಯೆಯೊಂದಿಗೆ ಅಲ್ಲಿಯ ಶಿಕ್ಷಣದ ಗುಣಮಟ್ಟವನ್ನು ಸಮೀಕರಿಸಲಾಗಿದೆ.

ಇನ್ನೂ ಖಾಸಗಿ ಶಾಲೆಗಳಲ್ಲಿ ಅದರಲ್ಲೂ ಮುಖ್ಯವಾಗಿ ಇಂಗ್ಲೀಷ ಮಾಧ್ಯಮದ ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟ ಅತ್ಯುತ್ತಮವಾಗಿದೆ ಎಂಬ ಪೋಷಕರ ಗ್ರಹಿಕೆಗೆ ಅವುಗಳ ಪರೀಕ್ಷಾ ಫಲಿತಾಂಶ ಮತ್ತು ಅಲ್ಲಿನ ಭೌತಿಕ ಅಂಶಗಳಾದ ಭವ್ಯ ಕಟ್ಟಡ ಸುಸಜ್ಜಿತ ತರಗತಿ ಕೋಣೆಗಳು, ಬಾಹ್ಯ ಪರಿಸರಗಳು, ಶಿಸ್ತು, ಹೋಮವರ್ಕ ಇತ್ಯಾದಿಗಳನ್ನಷ್ಟೆ ಪರಿಗಣಿಸಿದ್ದು ಮತ್ತು ಅಂತಿಮ ಉತ್ಪನ್ನವನ್ನಷ್ಟೆ ಮಾನದಂಡವಾಗಿ ಸ್ವಿಕರಿಸಿದ್ದು ಕಾರಣವಾಗಿದೆ. ಶಿಕ್ಷಣದ ಗುಣಮಟ್ಟವನ್ನು ಗುರುತಿಸುವಲ್ಲಿ ಈ ಮಾನದಂಡಗಳನ್ನು ಅಳವಡಿಸಿಕೊಳ್ಳಬಹುದೇ ಎಂಬುದು ಇಂದಿನ ಮುಖ್ಯ ಪ್ರಶ್ನೆ ವಾಸ್ತವದಲ್ಲಿ ಶಾಲೆಯ ಫಲಿತಾಂಶ ವಿದ್ಯಾರ್ಥಿ ಪಡೆದ ಅಂಕ, ಬಹುಮಾನ, ಭೌತಿಕ ಸೌಲಭ್ಯ ಇತ್ಯಾದಿಗಳಿಗೂ ಗುಣಮಟ್ಟ ಶಿಕ್ಷಣಕ್ಕೂ ಯಾವ ನೇರ ಸಂಬಂಧವನ್ನು ಕಲ್ಪಿಸಲಾಗದು.

ವಿಶ್ವ ಸಂಸ್ಥೆಯ ಅಂಗವಾಗಿ ಯುನಿಸೆಫ್ ಗುಣಮಟ್ಟದ ಬಗ್ಗೆ ಹೀಗೆ ಹೇಳಿದೆ: 1987ರಲ್ಲಿ ವಿಶ್ವ ಆರೋಗ್ಯ ಸಂಸ್ಥೆ ಪ್ರಸ್ತಾಪಿಸಿದ 10 ಜೀವನ ಕೌಶಲ್ಯಗಳನ್ನು ಒಳಗೊಂಡ ಶಿಕ್ಷಣವನ್ನು ನಿಡುವದೇ ಗುಣಮಟ್ಟ ಶಿಕ್ಷಣ ಎಂಬುದು ಅದು ವ್ಯಾಖ್ಯಾನಿಸಿದೆ. ಈ ಹತ್ತು ಜೀವನ ಕೌಶಲ್ಯಗಳನ್ನು ಮೂರು ವಿಭಾಗಗಳಲ್ಲಿ ಗುರುತಿಸಲಾಗಿದೆ ಅವು ಇಂತಿವೆ.

1) ಭೌದ್ಧಿಕ ಕೌಶಲಗಳು:- ವಿಮರ್ಶಾತ್ಮಕ ಚಿಂತನೆ, ಸೃಜನಾತ್ಮಕ ಚಿಂತನೆ, ನಿರ್ಧಾರ ಕೈಗೊಳ್ಳುವಿಕೆ, ಸಮಸ್ಯೆ ಪರಿಹಾರ ಸ್ವ ಅರಿವು.

2) ಭೌಸಂಬಂಧಿ ಕೌಶಲ:- ಭಾವನೆಗಳ ನಿರ್ವಹಣೆ, ಪರಿಣಾಮಕಾರಿ, ಸಂವಹನ ಇತರರ ಭಾವನೆ ಮತ್ತು ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ.

3) ಸಮಸ್ಯೆ ನೆಲೆಗ ಯಶಸ್ವಿ ನಿರ್ವಹಣೆ ಕೌಶಲ್ಯ:- ಆಂತರಿಕ ಶಕ್ತಿ ಸಂಬಂಧಗಳು ಒತ್ತಡ ನಿರ್ವಹಣೆ ತಮ್ಮ ವ್ಯಾಸಂಗದಲ್ಲಿ ಮಕ್ಕಳು ಈ ಕೌಶಲ್ಯಗಳನ್ನು ಮೈಗೂಡಿಕೊಂಡರೆ ಅದನ್ನು ಗುಣಮಟ್ಟದ ಶಿಕ್ಷಣವೆಂದು ಹೇಳಬಹುದು ಎನ್ನುತ್ತದೆ ವಿಶ್ವ ಆರೋಗ್ಯ ಸಂಸ್ಥೆ.

ಎಂಬತ್ತರ ದಶಕದಲ್ಲಿ (ವರ್ಷಗಳ ಹಿಂದೆ) ಹಾರ್ವರ್ಡ್ ವಿಶ್ವವಿದ್ಯಾನಿಲಯದ ಪ್ರೋಫೆಸರ ಸಂಶೋಧನೆಯಿಂದ ತಿಳಿದು ಬಂದಂತೆ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಬಹುವಿಧ ಬುದ್ದಿಶಕ್ತಗಳಿವೆ. ಇವುಗಳಲ್ಲಿ ಆತ್ Analytic, Interactive, Introspective ಎಂದು ಮೂರು ವಿಧಗಳಲ್ಲಿ ಗುರುತಿಸಿದ್ದಾರೆ. ಇವನ್ನು ಎಲ್ಲ ಬುದ್ದಿಶಕ್ತಿಗಳೂ ಒಬ್ಬ ವ್ಯಕ್ತಿಯ ಸಮಯ ಪರಮಾಣದಲ್ಲಿ ಇರುವುದಿಲ್ಲ ಹಾಗೂ ಇವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ಹಾಗಾಗಿ ತರಗತಿಯ ಮಕ್ಕಳಲ್ಲಿರುವ ಈ ವಿವಿಧ ಬುದ್ಧಿ ಶಕ್ತಿಗಳ ಮೂಲ ಲಕ್ಷಣಗಳನ್ನು ಗುರುತಿಸಿ ಅವರಲ್ಲಿ ಪ್ರಬಲವಾಗಿರುವ ಬುದ್ಧಿಶಕ್ತಿಯನ್ನು ಉತ್ತೇಜಿಸಿ ಉದ್ದೀಪನಗೊಳಿಸಿ ನೀಡುವ ಶಿಕ್ಷಣವೇ ಗುಣಮಟ್ಟದ ಶಿಕ್ಷಣ ಎಂದು ಕೆಲವು ತಜ್ಞರು ನಿರ್ವಹಿಸಿದ್ದಾರೆ. ಈ ಹಿನ್ನಲೆಯಲ್ಲಿ ಬೋಧನೆ ಕಲಿಕೆಯಲ್ಲಿ ಈಚೆಗೆ ಮಹತ್ವದ ಬದಲಾವಣೆಗಳಾಗಿರುವದನ್ನು ನಾವು ಗಮನಿಸಬಹುದು. ತರಗತಿಯ ಒಳಗೆ ಮತ್ತು ಹೊರಗೆ ಶಿಕ್ಷಕರಿಂದ ಪಠ್ಯ ಪುಸ್ತಕಗಳಿಂದ, ಬಾಹ್ಯ ಜಗತ್ತಿನಿಂದ ಪಡೆದ ಜ್ಞಾನವನ್ನು ತಮ್ಮ ಬದುಕಿನ ವಾಸ್ತವ ಸನ್ನಿವೇಶಗಳಿಗೆ ಅನ್ವಯಿಸುವಂತೆ ಮಕ್ಕಳು ಪಡೆಯುವ ಶಿಕ್ಷಣವೇ ಗುಣಮಟ್ಟ ಶಿಕ್ಷಣ ಎಂದು ಹಲವು ಶಿಕ್ಷಣವೇತ್ತರ ಅಭಿಪ್ರಾಯವಾಗಿದೆ.

ಶಿಕ್ಷಣ ತಜ್ಞರು ಮಕ್ಕಳ ವಯಸ್ಸಿನ ವಿವಿಧ ಹಂತಗಳಲ್ಲಿ ವಿವಿಧ ತರಗತಿಗಳನ್ನು ಅವರಲ್ಲಿ ನಡೆಯಬೇಕಾದ ಅವಶ್ಯಕ ಮಟ್ಟದ ಕಲಿಕೆಯನ್ನು ಗುರುತಿಸಿದ್ದಾರೆ. ಮಕ್ಕಳು ಕಲಿಕೆಯಲ್ಲಿ ಈ ಮಟ್ಟವನ್ನು ತಲುಪಿ ಇಲಾಖೆ ಹೇಳುವ ಈ ಸಾಮರ್ಥ್ಯಗಳನ್ನು ಗಳಿಸುವುದೇ ಗುಣಾತ್ಮಕ ಶಿಕ್ಷಣ ಎನ್ನುತ್ತದೆ. ಶಿಕ್ಷಣ ಇಲಾಖೆ 1986 ರಲ್ಲಿ ಬಂದ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ನಮೂದಿಸಿದ 84 ಸಾಮಾಜಿಕ, ನೈತಿಕ ಮತ್ತು ಅಧ್ಯಾತ್ಮಿಕ, ಮೌಲ್ಯಗಳನ್ನು ಮಕ್ಕಳು ರೂಢಿಸಿಕೊಳ್ಳುವಂತೆ ನೀಡುವ ಶಿಕ್ಷಣವೇ ಗುಣಾತ್ಮಕ ಶಿಕ್ಷಣ ಎಂದು ಹಲವು ಚಿಂತಕರು ವಿಶ್ಲೇಷಿಸಿದ್ದಾರೆ.

2005 ರಲ್ಲಿ ಕರ್ನಾಟಕದಲ್ಲಿ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹೊರತಂದ ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಂಕನ ಸಂಸ್ಥೆಯು ಶಾಲಾ ಕೈಪಿಡಿಯಲ್ಲಿ ಗುಣಮಟ್ಟದ ವ್ಯಾಖ್ಯಾನ ಹೀಗಿದೆ. ಅರ್ಹ ವಯಸ್ಸಿನ ಎಲ್ಲ ಮಕ್ಕಳು ಶಾಲೆಗೆ ನಿಯಮಿತವಾಗಿ ಹಾಜರಾಗಿ ತೃಪ್ತಿಕರ ಕಲಿಕೆಯನ್ನು ತೋರುವುದು ಹಾಗೂ ಪ್ರಗತಿ ಹೊಂದಿ ಮುಂದಿನ ತರಗತಿಗೆ ಉತ್ತೀರ್ಣತೆ ಪಡೆಯುವುದು ಇದು ಸಂವಿಧಾನಾತ್ಮಕವಾಗಿ ಇರಬೇಕಾದ 8 ವರ್ಷಗಳ ಕಲಿಕೆಯನ್ನು ಹೊಂದಿದೆ.

ಹೀಗಾಗಿ ಡಿ.ಪಿ.ಇ.ಪಿ. ಮತ್ತು ಸರ್ವ ಶಿಕ್ಷಣ ಅಭಿಯಾನ ಯೋಜನೆ ಹೀಗೆ ಅನೇಕ ಯೋಜನೆಗಳ ಮೂಲಕ ಬೀದರ ಜಿಲ್ಲೆಯಲ್ಲಿನ ಪ್ರಾಥಮಿಕ ಶಿಕ್ಷಣ ಸುಧಾರಿಸಲು ಇಲಾಖೆಯು ಬಹಳಷ್ಟು ಸಹಾಯ ಮಾಡುತ್ತಲ್ಲಿದೆ ಆದರೂ ಬೀದರ ಜಿಲ್ಲೆಯಲ್ಲಿ ಹೆಚ್ಚು ಗ್ರಾಮಗಳು, ಹಳ್ಳಿಗಳು ಇರುವುದುರಿಂದ ಅನಕ್ಷರಸ್ಥ ಪಾಲಕರಿರುವುದರಿಂದ ಶಿಕ್ಷಣದ ಬಗ್ಗೆ ಹೆಚ್ಚಿನ ಒಲವು ತೊರಿಸುತ್ತಿಲ್ಲ. ಅಲ್ಲದೆ ಶಿಕ್ಷಣ ತಜ್ಞರ ಹೇಳಿಕೆಯ ಬಗ್ಗೆ ಎಲ್ಲರಿಗೆ ತಿಳಿಸುವುದು ಅತ್ಯವಶ್ಯಕವಾಗಿದೆ.

ಬೀದರ ಜಿಲ್ಲೆಯ 5 ತಾಲ್ಲೂಕುಗಳಲ್ಲಿ ಮಾತನಾಡುವ ಭಾಷೆಗಳ ಕುರಿತು ಅಂದರೆ ಬೀದರ ತಾಲ್ಲೂಕುದಲ್ಲಿ ಕನ್ನಡ, ಉರ್ದು, ಹಿಂದಿ, ತೆಲುಗು ಮಾತನಾಡುವ ಜನರಿದ್ದಾರೆ. ಔರಾದ ತಾಲ್ಲೂಕುದಲ್ಲಿ ಕನ್ನಡ, ಮರಾಠಿ, ಹಿಂದಿ, ತೆಲುಗು ಮಾತನಾಡುವ ಜನರಿದ್ದಾರೆ. ಭಾಲ್ಕಿ ತಾಲ್ಲೂಕಿನಲ್ಲಿ ಕನ್ನಡ, ಮರಾಠಿ, ಹಿಂದಿ, ಉರ್ದು ಮಾತನಾಡುವ ಜನರಿದ್ದಾರೆ. ಹುಮನಾಬಾದದಲ್ಲಿ ಕನ್ನಡ, ತೆಲುಗು, ಹಿಂದಿ, ಉರ್ದು, ಮಾತನಾಡುವ ಜನರಿದ್ದಾರೆ. ಬಸವಕಲ್ಯಾಣದಲ್ಲಿ ಕನ್ನಡ, ಮರಾಠಿ, ಉರ್ದು, ಹಿಂದಿ ಮಾತನಾಡುವ ಜನರಿದ್ದಾರೆ. ಹೀಗಾಗಿ ಬೀದರ ಜಿಲ್ಲೆಯ ಜನತೆಯು ಬಹು ಭಾಷಿಕ ಮಾತನಾಡುವ ಜನರಿದ್ದಾರೆಂದು ಖಚಿತವಾಗಿದೆ. ಅಲ್ಲದೆ ಬೀದರ ಜಿಲ್ಲೆಗೆ ಕೇಂದ್ರ ಸರ್ಕಾರದಿಂದ ಮತ್ತು ರಾಜ್ಯ ಸರ್ಕಾರದಿಂದ ಜಿಲ್ಲೆಗೆ ಶಿಕ್ಷಣಕ್ಕಾಗಿ ಒದಗಿಸಿದ ಹಣಕಾಸು ಹಾಗೂ ಇನ್ನಿತರ ಮೂಲಭೂತ ಸೌಲಭ್ಯಕ್ಕಾಗಿ ಬಿಡುಗಡೆಯಾದ ಬಡ್ಜೇಟ ಕುರಿತು ಎಷ್ಟರ ಮಟ್ಟಿಗೆ ಬಳಕೆಯಾಗಿ ಕೆಲಸ ಆಗಿರುವ ಕುರಿತು ಅಧ್ಯಯನ ಮಾಡಲಾಗಿದೆ ಮತ್ತು ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಖಾಸಗಿ ಪ್ರಾಥಮಿಕ ಶಾಲೆಗಳಿಗೆ ಇಲಾಖೆಯಿಂದ ನೀಡಿದ ಸೌಲಭ್ಯ ಕುರಿತು ತಾಳೆ ನೋಡುವುದು ಹಾಗೂ ಸರ್ಕಾರಿ ಪ್ರಾಥಮಿಕ ಶಾಲೆಗಳ ಹಾಗೂ ಖಾಸಗಿ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಣದ ಗುಣಮಟ್ಟ ಮತ್ತು ಫಲಿತಾಂಶ ಬಗ್ಗೆಯು ಕಂಡು ಕೊಳ್ಳಲಾಗುವುದು. ಮಕ್ಕಳ ಪ್ರಮಾಣ ರಾಜ್ಯದ ಸರಾಸರಿಗಿಂತ ಹೆಚ್ಚಿರುವುದು ಗಮನಾರ್ಹ ಎನಿಸಿದೆ. ರಾಜ್ಯದ ಪ್ರಮಾಣ ಶೇ. 13.4% ರಷ್ಟು ಕಡಿಮೆ ಇದೆ. ಶೇ. 14.5% ರಷ್ಟಿದೆ ಎಂದು ಉಲ್ಲೇಖಿಸಲಾಗಿದ.ಎ

ಅಕ್ಷರ ಪದ ಮತ್ತು ಇನ್ನು ಹೆಚ್ಚಿನದನ್ನು ಓದುವರ ಪ್ರಮಾಣ ಶೇ. 70% ರಷ್ಟಿದೆ ಇದು ರಾಜ್ಯದ ಸರಾಸರಿಗಿಂತ ಶೇ. 13.4 ರಷ್ಟು ಕಡಿಮೆ ಇದೆ 1 ರಿಂದ 9 ರವರೆಗೆ ಸಂಖ್ಯೆ ಗುರುತಿಸ ಬಲ್ಲವರ ಪ್ರಮಾಣ 68.6 ಇದೆ. ಹಂತ 1ರ ಪಠ್ಯವನ್ನು ಓದಬಲ್ಲವರ ಪ್ರಮಾಣ ಶೇ 43% ರಷ್ಟಿದೆ. ಇದರ ಪ್ರಮಾಣ ರಾಜ್ಯದಲ್ಲಿ ಶೇ. 57.2% ರಷ್ಟಿದೆ. ಈ ವಿಷಯದಲ್ಲಿ ಜಿಲ್ಲೆಯಲ್ಲಿ ಸಾಕಷ್ಟು ಹಿನ್ನಡೆ ಕಂಡು ಬಂದಿದೆ.

ಕಳೆಯುವುದು ಅಥವಾ ಇದಕ್ಕಿಂತ ಹೆಚ್ಚು ಬಲ್ಲವರ ಪ್ರಮಾಣ ಬರಿ ಶೇ. 28.9% ರಷ್ಟಿದೆ. ರಾಜ್ಯದ ಸರಾಸರಿ ಶೇ. 44.5% ಇದೆ ಆಂಗ್ಲ ಭಾಷೆ ವಾಕ್ಯಗಳನ್ನು ಓದ ಬಲ್ಲವರ ಪ್ರಮಾಣ ಕೇವಲ ಶೇ. 4.2% ರಷ್ಟಿದೆ. ಹೀಗೆ ಪ್ರತಿ ಅಂಶಗಳಲ್ಲೂ ಜಿಲ್ಲೆಯ ಶೇಕಡಾವಾರು. ಪ್ರಮಾಣ ರಾಜ್ಯದ ಸರಾಸರಿಗಿಂತ ಕಡಿಮೆ ಇದೆ. 2007ರಲ್ಲಿ ನಡೆಸಲಾದ “ಅಸರ” ಸಮೀಕ್ಷೆಯ ಜಿಲ್ಲಾವಾರು ವರದಿ ಹಂಚಿಕೆ ಸಭೆ ಶುಕ್ರವಾರ ಬೆಳಿಗ್ಗೆ 10ಕ್ಕೆ ನೌಬಾದ ಸಮೀಪದ ಸೌಹಾರ್ದ ತರಬೇತಿ ಸಂಸ್ಥೆಯಲ್ಲಿ ಈ ವಿಷಯಗಳ ಕುರಿತು ಸಮಗ್ರವಾಗಿ ಚರ್ಚೆ ಮಾಡಿದಾಗ ಈ ಕೆಳಗಿನಂತೆ ಪ್ರಗತಿ ಕಂಡು ಬಂದಿದೆ.

ಸರ್ವ ಶಿಕ್ಷಣ ಅಭಿಯಾನ ಯೋಜನೆ ಅಡಿಯಲ್ಲಿ ಪ್ರಾಥಮಿಕ ಶಿಕ್ಷಣದ ಸರ್ವಾಂಗೀಣ ಅಭಿವೃದ್ಧಿಗಾಗಿ ಬೀದರ ಜಿಲ್ಲೆಗೆ 33ಕೋಟಿ ರೂಪಾಯಿ ಅನುದಾನ ಬಂದಿದೆ.

ಜಿಲ್ಲಾ ಪಂಚಾಯತ ಬೀದರದಲ್ಲಿ ನಡೆದ ಸಭೆಯಲ್ಲಿ ಜಿಲ್ಲಾ ಉಸ್ತುವಾರಿ ಸಚಿವ ರೇವುನಾಯಕ ಬೆಳಮಗಿ ಅವರು ಜಿಲ್ಲಾ ಪಂಚಾಯತ ಸಭೆಯಲ್ಲಿ ಸರ್ವ ಶಿಕ್ಷಣ ಅಭಿಯಾನ ಯೋಜನೆಯ ನಾನಾ ಕಾಮಗಾರಿ ಪ್ರಗತಿ ನಡೆಸಿದರು.

ಜಿಲ್ಲೆಯ ಎಸ್.ಎಸ್.ಎಲ್.ಸಿ. ಫಲಿತಾಂಶ ರಾಜ್ಯದಲ್ಲಿ ಕೊನೆಯ ಸ್ಥಾನದಲ್ಲಿದೆ ಇದನ್ನು ಸುಧಾರಿಸಲು ಕಾರ್ಯಸೂಚಿ ಅಳವಡಿಸಿದಾಗ ಶೈಕ್ಷಣಿಕ ಗುಣಮಟ್ಟ ಸುಧಾರಿಸಲು ಸಾಧ್ಯ ಈ ನಿಟ್ಟಿನಲ್ಲಿ ಸರ್ವ ಶಿಕ್ಷಣ ಅಭಿಯಾನ ಅನುದಾನ ಸರ್ವ ಪಕ್ಷ ಬಳಕೆ ಮಾಡಿಕೊಳ್ಳಬೇಕು ಎಂದರು. ಮಕ್ಕಳಿಗೆ ಉತ್ತಮ ಶಿಕ್ಷಣ ಕಲ್ಪಿಸುವ ದಿಸೆಯಲ್ಲಿ ಸರ್ವ ಶಿಕ್ಷಣ ಅಭಿಯಾನದ ಅಡಿ ಸಾಕಷ್ಟು ಅನುದಾನ ಒದಗಿಸಲಾಗುತ್ತಿದೆ ಎಂದರು. ಶಿಕ್ಷಣ ಇಲಾಖೆ ಅಧಿಕಾರಿಗಳು ಜನಪ್ರತಿನಿಧಿಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಈ ಯೋಜನೆ ಅನುಷ್ಠಾನಗೊಳಿಸಬೇಕು ಎಂದು ಸೂಚಿಸಿದರು.

ಹೊಸ ಶಾಲೆ ಆರಂಭಿಸಲು ಸ್ಥಳ ನಿಗದಿ ಮಾಡುವ ಸಂದರ್ಭದಲ್ಲಿ ಸೂಕ್ತ ಮಾನದಂಡ ಅನುಸರಿಸಿಬೇಕು ಕಳಪೆ ಕಾಮಗಾರಿ ಕೈಗೊಳ್ಳುವವರ ವಿರುದ್ಧ ಕ್ರಮ ಕೈಗೊಳ್ಳಲಾಗುವುದು ಎಂದು ಎಚ್ಚರಿಸಿದರು. ಮಾನ್ಯ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ ಸರ್ವ ಶಿಕ್ಷಣ ಅಭಿಯಾನ ಯೋಜನೆ ಅಡಿಯಲ್ಲಿ ಜಿಲ್ಲೆಗೆ ಈ ಸಾಲಿನಲ್ಲಿ ಅಂದರೆ 2007–08 ನೇ ಸಾಲಿನಲ್ಲಿ 33.18 ಕೋಟಿ ರೂಪಾಯಿ ಖರ್ಚಾಗಿದೆ. ಪ್ರಸಕ್ತ ಸಾಲಿನಲ್ಲಿ 20 ಹೊಸ ಶಾಲೆಗಳು ಆರಂಭವಾಗಿವೆ. 74 ಶಾಲೆಗೆ 5 ರಿಂದ 6ನೇ ತರಗತಿಗೆ ಮೇಲ್ದರ್ಜೆಗೇರಿಸಲು ಮಂಜೂರಾತಿ ದೊರೆತಿದೆ ಎಂದು ವಿವರಿಸಿದರು. ಈ ಜಿಲ್ಲೆಯ 12 ತಿಂಗಳ ಸೇತುಬಂಧ ಚಿಣ್ಣರ ಅಂಗಳ ಕಾರ್ಯಕ್ರಮದಡಿ 1238 ಮಕ್ಕಳಿಗೆ 123 ಕೋಟಿ ರೂಪಾಯಿ ನಿಗದಿಪಡಿಸಲಾಗಿದೆ. 13 ಲಕ್ಷ ರೂಪಾಯಿ ಖರ್ಚು ಮಾಡಿರುತ್ತಾರೆ. ಟೆಂಟ್ ಶಾಲೆಯಲ್ಲಿ 350 ಮಕ್ಕಳ ಗುರಿ ಇರಿಸಲಾಗಿದೆ. 10 ಲಕ್ಷ ರೂಪಾಯಿ ವೆಚ್ಚ ಮಾಡಲಾಗಿದೆ. ಬೇಸಿಗೆಯಲ್ಲಿ ಪರಿಹಾರ ಬೋಧನೆ ಕಾರ್ಯಕ್ರಮಕ್ಕಾಗಿ ಕಲಿಕೆಯಲ್ಲಿ ಹಿಂದಿರುವ ಮಕ್ಕಳಿಗೆ 1750 ಮಕ್ಕಳಿಗೆ 8 ಲಕ್ಷ ರೂಪಾಯಿ ನಿಗದಿಪಡಿಸಿದ್ದು, 4 ಲಕ್ಷ ರೂಪಾಯಿ ಖರ್ಚಾಗಿದೆ, ಶಾಲೆಯಿಂದ ಹೊರಗುಳಿದ ಮಕ್ಕಳಿಗೆ ಶೈಕ್ಷಣಿಕ ಕಾರ್ಯಕ್ರಮಕ್ಕೆ ಬಿಡುಗಡೆಯಾದ 1.80 ಕೋಟಿ ರೂಪಾಯಿ ಇದರಲ್ಲಿ 98 ಲಕ್ಷ ರೂಪಾಯಿ ಖರ್ಚು ಮಾಡಲಾಗಿದೆ. ಪರಿಹಾರ ಬೋಧನೆಯಡಿ 14148 ಮಕ್ಕಳಿಗೆ 70 ಲಕ್ಷ ರೂಪಾಯಿ ಬಿಡುಗಡೆ ಮಾಡಲಾಗಿದೆ. 1 ರಿಂದ 8ನೇ ತರಗತಿಯ 20671 ಮಕ್ಕಳಿಗೆ ಉಚಿತ ಸ್ಟೇಷನರಿ ಮತ್ತು ಪಠ್ಯಪುಸ್ತಕಕ್ಕೆ 18 ಲಕ್ಷ ರೂಪಾಯಿ ನಿಗದಿಪಡಿಸಲಾಗಿದೆ. ವಿಕಲಚೇತನ 3971 ಮಕ್ಕಳ ಕಾರ್ಯಕ್ರಮಕ್ಕೆ 47 ಲಕ್ಷ ರೂಪಾಯಿ ಬಿಡುಗಡೆಯಾಗಿದ್ದು, 20 ಶಾಲಾ ಕಟ್ಟಡ ನಿರ್ಮಿಸಲು 1.80 ಕೋಟಿ ರೂಪಾಯಿ ಕಲ್ಪಿಸಲಾಗಿದೆ. 223 ಹೆಚ್ಚುವರಿ ಶಾಲಾ ಕೊಠಡಿ ನಿರ್ಮಾಣಕ್ಕೆ 8.47 ಕೋಟಿ ರೂಪಾಯಿ ಮಂಜೂರು ಮಾಡಿರುತ್ತಾರೆ. ಪ್ರಸಕ್ತ ಸಾಲಿನಲ್ಲಿ ನಿರ್ಮಾಣ ಕಾಮಗಾರಿಗಳಿಗಾಗಿ 10.72 ಕೋಟಿ ರೂಪಾಯಿ ನಿಗದಿಯಾಗಿದ್ದು, 2.30 ಕೋಟಿ ರೂಪಾಯಿ ವೆಚ್ಚವಾಗಿದೆ. ನಿರ್ವಹಣೆ ಮತ್ತು ದುರಸ್ತಿಗಾಗಿ 1.37 ಕೋಟಿ ರೂಪಾಯಿ ನಿಗದಿಪಡಿಸಿರುತ್ತಾರೆ.

2007–08ನೇ ಸಾಲಿನಲ್ಲಿ ಸರ್ವ ಶಿಕ್ಷಣದ ಅಡಿಯಲ್ಲಿ ಜಿಲ್ಲೆಗೆ 21.67 ಕೋಟಿ ರೂಪಾಯಿ ಮಂಜೂರಾಗಿದ್ದು 20.90 ಕೋಟಿ ರೂಪಾಯಿ ವೆಚ್ಚ ಮಾಡಲಾಗಿದೆ ಎಂದು ಮಾನ್ಯ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ ಅವರು ಸಭೆಯಲ್ಲಿ ಹೇಳಿದ್ದರು.

ಬೀದರಿನ ಐತಿಹಾಸಿಕ ಬೆಡಗು(ಬೀದರಿನ ಭೌಗೋಳಿಕ ಬೆಡಗು):–

ಬೀದರ ಜಿಲ್ಲೆಯು ರಾಜ್ಯದ ಉತ್ತರ ಭಾಗದಲ್ಲಿ ಸ್ಥಾಪಿತವಾಗಿದೆ. ಜಿಲ್ಲೆಯ ವಾಯುವ್ಯಕ್ಕೆ ಮಹಾರಾಷ್ಟ್ರ ರಾಜ್ಯ ಮತ್ತು ನೈರುತ್ಯಕ್ಕೆ ಆಂಧ್ರ ಪ್ರದೇಶ ರಾಜ್ಯಗಳು ಮತ್ತು ದಕ್ಷಿಣಕ್ಕೆ ಗುಲಬರ್ಗಾ ಜಿಲ್ಲೆಯು ಗಡಿಭಾಗವಾಗಿದೆ. ಜಿಲ್ಲೆಯು ಸಮುದ್ ಪಾತಳಿಯಿಂದ 2330 ಅಡಿಗಳಷ್ಟು ಮೇಲಿದೆ. ಜಿಲ್ಲೆಯ ಸುಮಾರು 5458 ಚ.ಕಿ.ಮೀ. ಭೂ ಪ್ರದೇಶದಲ್ಲಿ 2001 ರ ಜನಗಣತಿಯಂತೆ ಒಟ್ಟು 1502996 ಜನಸಂಖ್ಯೆಯನ್ನು ಹೊಂದಿದೆ. ಶೇಕಡಾ 19.55% ದರದಲ್ಲಿ ಜನಸಂಖ್ಯೆ ಬೆಳವಣಿಗೆಯಾಗಿದೆ. ಜಿಲ್ಲೆಯಲ್ಲಿ ಲಿಂಗ ಅಂತರದಲ್ಲಿ 1000 ಪುರುಷರಿಗೆ 949 ಸ್ತ್ರೀಯರಿದ್ದಾರೆ. ಜಿಲ್ಲೆಯಲ್ಲಿ ಸಾಕ್ಷರತಾ ಪ್ರಮಾಣ ರಾಷ್ಟ್ರ ಮತ್ತು ರಾಜ್ಯದ ಪ್ರಮಾಣಕ್ಕಿಂತಲೂ ಕಡಿಮೆ ಅಂದರೆ ಶೇ. 61.98 ಇದೆ. ಔರಾದ, ಬಸವಕಲ್ಯಾಣ, ಭಾಲ್ಕಿ, ಬೀದರ, ಹುಮನಾಬಾದ ಎಂಬ 5 ಕಂದಾಯ ಪ್ರಕಾರ 30 ಹೋಬಳಿಗಳನ್ನು 900 ಜನವಸತಿ ಹಳ್ಳಿಗಳನ್ನು 14 ಜನವಸತಿ ರಹಿತ ಗ್ರಾಮಗಳನ್ನು 5 ಪಟ್ಟಣ ಪ್ರದೇಶಗಳನ್ನು ಹೊಂದಿದೆ. ಜಿಲ್ಲೆಯು ವರ್ಷದಾದ್ಯಂತ ಸಮತೋಲಿತ ಒಣ ಮತ್ತು ತಂಪು ಮಿಶ್ರಿತ ಹವೆಯನ್ನು ಹೊಂದಿರುತ್ತದೆ. ಜಿಲ್ಲೆಯಲ್ಲಿ ಸರಾಸರಿಯಾಗಿ 907ಮೀ ರಷ್ಟು ಮಳೆಯಾಗುತ್ತದೆ. ಮಾಂಜರಾ ಮತ್ತು ಕಾರಂಜಾಗಳು ಜಿಲ್ಲೆಯ ಪ್ರಮುಖ ನದಿಗಳು. ಮಹಾರಾಷ್ಟ್ರ, ಆಂದ್ರಪ್ರದೇಶ ರಾಜ್ಯಗಳ ಮೇರೆಯಲ್ಲಿರುವವರು, ಉರ್ದು, ತೆಲಗು ಮತ್ತು ಮರಾಠಿ ಭಾಷೆಯನ್ನು ಮಾತನಾಡುತ್ತಾರೆ. ಉಳಿದ ಬಹುಸಂಖ್ಯಾತ ಜನರು ಕನ್ನಡ ಮಾತನಾಡುತ್ತಿದ್ದು, ಅವರ ಮಾತೃ ಭಾಷೆ ಕನ್ನಡವಾಗಿದೆ. ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿ ನಂ 9 ಹಾದು ಹೋಗುತ್ತದೆ. ಸುಮಾರು 60 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿಯಾಗಿದೆ. ಜಿಲ್ಲೆಯಲ್ಲಿ ಶೇ. 70% ರಷ್ಟು ವ್ಯವಸಾಯವನ್ನೇ ಅವಲಂಭಿಸಿದ್ದಾರೆ. ಉತ್ತಮ ಫಲವತ್ತಾದ ಕೆಂಪು ಬಣ್ಣ ಮಿಶ್ರಿತ ಭೂಮಿ ಇದೆ ರಾಜ್ಯ ಆದಾಯಕ್ಕೆ ಅತಿ ಕಡಿಮೆ ಪ್ರಮಾಣದ ಆದಾಯವನ್ನು ಜಿಲ್ಲೆ ಹೊಂದಿದೆ.

ಆಧುನಿಕರಣದ ನೀರಿನ ಸೌಲಭ್ಯವನ್ನು ಬಳಸಿಕೊಂಡು ಉದ್ದು, ಸಜ್ಜೆ, ತೊಗರಿ, ಶೇಂಗಾ, ಕಬ್ಬು, ಸೂರ್ಯಕಾಂತಿ, ಜೋಳ, ಗೋಧಿ ಪ್ರಮುಖ ಬೆಳೆಗಳನ್ನು ಜಿಲ್ಲೆಯಲ್ಲಿ ಬೆಳೆಯುತ್ತಾರೆ.

ಬೀದರ ಜಿಲ್ಲೆಯಲ್ಲಿ ಬೀದರಿನ ಕುಸುರಿ ಕೆಲಸದಲ್ಲಿ ಜಗತ್ಪ್ರಸಿದ್ದ ಕೆಲಸಗಾರರು ಇದ್ದಾರೆ. ಬಿದಿರುಗಾರರು, ಬಡಿಗರು, ಅಕ್ಕಸಾಲಿಗರು, ಕಲ್ಲು ಕುಟಿಗರು ಈ ಕಾರ್ಯದವರು ವಂಶ ಪಾರಂಪರಾಗತವಾಗಿ ತಮ್ಮ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಜಿಲ್ಲೆಯಲ್ಲಿ ಕಾಣುತ್ತೇವೆ.

**ಜಿಲ್ಲೆಯ ಶೈಕ್ಷಣಿಕ ಅಂಕಿ ಅಂಶಗಳು:-**

ಅಂಗನವಾಡಿಗಳು: 1479, ಕಿರಿಯ ಪ್ರಾಥಮಿಕ ಶಾಲೆಗಳು: 721, ಹಿರಿಯ ಪ್ರಾಥಮಿಕ ಶಾಲೆಗಳು 1083, ಪ್ರೌಢ ಶಾಲೆಗಳು 295, ಪದವಿ ಪೂರ್ವ ಕಾಲೇಜುಗಳು 14, ಇಂಜಿನಿಯರಿಂಗ ಕಾಲೇಜು 03, ಡಯಟ್ 01, ಡಿ.ಈಡಿ. ಕಾಲೇಜುಗಳು 46, ಆಯರ್ವೇದಿಕ ಮೆಡಿಕಲ್ ಕಾಲೇಜು 03, ಡೆಂಟಲ್ ಕಾಲೇಜು 03, ಪಶು ವೈದ್ಯಕೀಯ ಕಾಲೇಜು 01, ಸ್ನಾತಕೋತ್ತರ ಕಾಲೇಜು 03, ಬಿ.ಪಿ.ಈಡ್. ಕಾಲೇಜು 03, ಐ.ಟಿ.ಐ. ಕಾಲೇಜುಗಳು 07, ಸಕ್ಕರೆ ತಾಂತ್ರಿಕ ಕಾಲೇಜುಗಳು 01, ಸರಕಾರಿ ವೈದ್ಯಕೀಯ ವಿಶ್ವವಿದ್ಯಾಲಯ 01 ಈ ಜಿಲ್ಲೆಯಲ್ಲಿವೆ. ಜಿಲ್ಲೆಯಲ್ಲಿ ಒಟ್ಟು 1639 ಶಾಲೆಗಳಿದ್ದು, ಅದರಲ್ಲಿ 1252 ಶಿಕ್ಷಣ ಇಲಾಖೆಯಿಂದ 369 ಶಾಲೆಗಳು ಇವೆ.

**ಸವಾಲುಗಳು:-**

ಸರ್ವ ಶಿಕ್ಷಣ ಅಭಿಯಾನ ಯೋಜನೆ ಅಡಿಯಲ್ಲಿ ಈ ಕೆಳಕಂಡ ಆಯಾಮಗಳನ್ನು ಸವಾಲಾಗಿ ಸ್ವೀಕರಿಸಿದೆ.

1) ಪ್ರತಿ 40 ಮಕ್ಕಳಿಗೆ ಒಬ್ಬ ಶಿಕ್ಷಕ. ಒಂದು ಪ್ರಾಥಮಿಕ ಶಾಲೆಯಲ್ಲಿ ಕನಿಷ್ಟ ಇಬ್ಬರು ಶಿಕ್ಷಕರು.

2) 1 ಕಿ.ಮೀ. ವ್ಯಾಪ್ತಿಯೊಳಗೆ ಒಂದು ಶಾಲಾ ಸೌಲಭ್ಯ. ಶಾಲಾ ಇಲ್ಲದಿರುವ ಜನವಸತಿ ಪ್ರದೇಶಗಳಲ್ಲಿ ಇ.ಜಿ.ಎಸ್. ಪೂರಕ ಶಾಲೆಗಳು.

3) ಮಕ್ಕಳ ಸಂಖ್ಯೆ ಆಧಾರಿಸಿ ಹಿರಿಯ ಪ್ರಾಥಮಿಕ ಶಾಲೆ.

4) ತರಗತಿಗನುಗುಣವಾಗಿ ಕೊಠಡಿಗಳು ಹಾಗೂ ಮುಖ್ಯ ಅಧ್ಯಾಪಕರ ಕೊಠಡಿ.

5) ಎಲ್ಲಾ ಪ್ರಾಥಮಿಕ ಶಾಲಾ ಮಕ್ಕಳಿಗೆ ಉಚಿತ ಪಠ್ಯ ಪುಸ್ತಕ ವಿತರಣೆ.

6) ಶಾಲಾ ಕಟ್ಟಡಗಳ ನಿರ್ವಹಣೆ ಮತ್ತು ದುರಸ್ತಿ.

7) ಶಾಲಾ ಕಟ್ಟಡಗಳು ವರ್ಗ ಕೊಠಡಿಗಳು ಸಿ.ಆರ್.ಸಿ. ಬಿ.ಆರ್.ಸಿ. ಕಟ್ಟಡ ನಿರ್ಮಾಣ.

8) ಶಿಕ್ಷಣ ಖಾತರಿ ಯೋಜನೆಯ ಅಡಿಯಲ್ಲಿನ ಕೇಂದ್ರಗಳನ್ನು ಔಪಚಾರಿಕ ಶಾಲೆಗಳಾಗಿ ಉನ್ನತಿಕರಿಸುವುದು.

9) ಹಿರಿಯ ಪ್ರಾಥಮಿಕ ಶಾಳೆಗಳಿಗೆ ಬೋಧನೆ ಮತ್ತು ಕಲಿಕಾ ಸಾಮಗ್ರಿ.

10) ಶಾಲಾ ಅನುದಾನ.

11) ಶಿಕ್ಷಕರ ಅನುದಾನ.

12) ಶೈಕ್ಷಣಿಕ ತರಬೇತಿ.

13) ಶಿಕ್ಷಕರ ತರಬೇತಿ

14) ಶೈಕ್ಷಣಿಕ ರಾಜ್ಯ ನಿರ್ವಹಣೆ ಆಧಾರಿತ ಮತ್ತು ತರಬೇತಿ ಸಂಸ್ಥೆ.

15) ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ತಪಾಸಣೆ ಆಧಾರಿತ ಸಲಕರಣೆ ವಿತರಣೆ ಹಣಕಾಸಿನ ಸೌಲಭ್ಯ.

16) ಸಂಶೋಧನೆ ಮೌಲ್ಯಮಾಪನ, ಮೇಲುಸ್ತುವಾರಿಯಲ್ಲಿ ಮೇಲ್ವಿಚಾರಣೆ.

17) ಜಿಲ್ಲಾ ನಿರ್ವಹಣೆ

18) ಹೆಣ್ಣು ಮಕ್ಕಳ ಶಿಕ್ಷಣ ಶೈಶಾವಸ್ಥೆಯಲ್ಲಿ ಆರೈಕೆ ಶಿಕ್ಷಣ. ಪ.ಜಾ./ಪ.ಪಂ. ಹೆಣ್ಣು ಮಕ್ಕಳಿಗೆ ವಿಶೇಷ ಸೌಲಭ್ಯ ಹಿರಿಯ ಪ್ರಾಥಮಿಕ ಶಾಲೆಗಳಿಗೆ ಕಂಪ್ಯೂಟರ ಸೌಲಭ್ಯ.

19) ಕ್ಷೇತ್ರ ಸಂಪನ್ಮೂಲ ಕೇಂದ್ರಗಳು, ಸಮೂಹ ಸಂಪನ್ಮೂಲ ಕೇಂದ್ರಗಳು.

20) ಶಾಲೆಯಿಂದ ಹೊರಗುಳಿದ ಮಕ್ಕಳಿಗಾಗಿ ಸಂಬಂಧಿಸಿದಂತೆ ವಿವಿಧ ಮಧ್ಯವರ್ತನೆಗಳು.

21) ಕುಟುಂಬ ಸಮೀಕ್ಷೆ ಸಮುದಾಯವನ್ನು ಸಜ್ಜುಗೊಳಿಸುವುದು ಎಲ್ಲಾ ಹಂತಗಳ ತರಬೇತಿಗಳು.

ಹೀಗೆ ಅನೇಕ ಯೋಜನೆಗಳನ್ನು ಜಾರಿಗೆ ತಂದು 6 ರಿಂದ 14 ವರ್ಷದ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವುದು ಅಲ್ಲದೆ ಗುಣಮಟ್ಟ ಶಿಕ್ಷಣಕ್ಕಾಗಿ ಮೂಲಭೂತ ಸೌಲಭ್ಯಕ್ಕಾಗಿ ಶಿಕ್ಷಣ ಸರ್ವಾಂಗೀಣ ಅಭಿವೃದ್ದಿಗಾಗಿ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರ ಸವಾಲಾಗಿ ಸ್ವೀಕರಿಸಿದೆ.

**ಪರಿಹಾರಗಳು:–**

ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದ ನಿರ್ದೇಶನದಂತೆ ಈಶಾನ್ಯ ವಲಯ ನಿರ್ದೇಶನಾಲಯ ಈ ಕೆಳಗಿನಂತೆ ಪರಿಹಾರ ಕೈಗೊಂಡಿದೆ.

1) 5 ರಿಂದ 7 ವರ್ಷದೊಳಗಿನ ಮಕ್ಕಳ ದಾಖಲಾತಿಯನ್ನು ಪ್ರಸ್ತುತ ವರ್ಷ 100% ರಷ್ಟು ದೃಢಪಡಿಸುವುದು.

2) ಮುಂದಿನ 3 ವರ್ಷಗಳಲ್ಲಿ 3.19 ಲಕ್ಷ ಶಾಲೆ ಬಿಟ್ಟ ಮಕ್ಕಳನ್ನು ಮುಖ್ಯ ವಾಹಿನಿಗೆ ತರುವುದು.

3) ಮುಂದಿನ 3 ವರ್ಷದ ಅವಧಿಗೆ ಶಾಲೆಗಳಲ್ಲಿ ಮಕ್ಕಳ ಉಳಿಕೆಯ ದರವನ್ನು ಶೇಕಡಾ 90 ರಷ್ಟು ಹೆಚ್ಚಿಸುವುದು.

4) ಮುಂದಿನ 3 ವರ್ಷಗಳಲ್ಲಿ ಅದೇ ತರಗತಿಯಲ್ಲಿ ಪುನಃ ಓದುವ ಮಕ್ಕಳ ಪ್ರಮಾಣವನ್ನು ಶೇಕಡಾ 5 ಕ್ಕಿಂತ ಕಡಿಮೆಗೊಳಿಸುವುದು.

5) ಸಾಮಾನ್ಯ ವರ್ಗದ ವಿದ್ಯಾರ್ಥಿನಿಯರ ಪ.ಜಾ/ಪ.ಪಂ. ವಿದ್ಯಾರ್ಥಿಗಳ ಪ್ರವೇಶ ಹೆಚ್ಚಿಸಿ ಶಾಲೆ ಬಿಡುವ ಪ್ರಮಾಣದಲ್ಲಿಯ ಅಂತರವನ್ನು ಶೇಕಡಾ 5 ಕ್ಕಿಂತ ಕಡಿಮೆಗೊಳಿಸುವುದು.

6) ಲಿಂಗ ಭೇಧ ಕಡಿಮೆಗೊಳಿಸುವ ಮುಖೇನ ಲಿಂಗ ಸಮಾನತೆ ಹೆಚ್ಚಿಸುವುದು.

7) ವಿವಿಧ ತರಬೇತಿಗಳ ಮೂಲಕ ಶಿಕ್ಷಣದಲ್ಲಿ ಗುಣಾತ್ಮಕ ಬದಲಾವಣೆ ತರುವುದು.

8) ಸಾಕಷ್ಟು ಕಲಿಕಾ ಸಾಮಗ್ರಿಗಳನ್ನು ಒದಗಿಸುವುದು.

9) ಉತ್ತಮ ಪ್ರಮಾಣದ ಮಕ್ಕಳ ಶಿಕ್ಷಕರ ಅನುಪಾತವನ್ನು ಸಾಧಿಸುವುದು/

10) ಈಶಾನ್ಯ ವಲಯದಡಿಯಲ್ಲಿ ಬರುವ ಎಲ್ಲಾ ಆಡಳಿತಾತ್ಮಕ ಅಂಗಗಳನ್ನು ಬಲಪಡಿಸಿ ಚುರುಕುಗೊಳಿಸುವುದು.

11) ಈ ಭಾಗದ ಸಮಗ್ರ ಶೈಕ್ಷಣಿಕ ಅಭಿವೃದ್ಧಿಗಾಗಿ ವಿಶೇಷ ಯೋಜನೆಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸುವುದು.

ಈ ಪವಿತ್ರವಾದ ಕಾರ್ಯಕ್ಕೆ ಈಶಾನ್ಯವಲಯ ಶಿಕ್ಷಣ ಇಲಾಖೆಯ ಎಲ್ಲ ಅಧಿಕಾರಿಗಳು ಹಾಗೂ ಶಿಕ್ಷಕರು ಸಂಪೂರ್ಣ ಸಹಕಾರವನ್ನು ನಿರ್ದೇಶನಾಲಯ ಕೋರುತ್ತದೆ.

**ಈಶಾನ್ಯವಲಯದ ಸಾಧನೆಯ ನೋಟ:–**

ಜೀವನ ವಿಕಾಸ ಶೈಕ್ಷಣಿಕ ಪತ್ರಿಕೆ ಜೂನ್ 2002 ರಲ್ಲಿ ಶ್ರೀ ಚಿದ್ರೆ ಶಂಕರಯ್ಯಾ ಸ್ವಾಮಿ ಅವರು ಈಶಾನ್ಯವಲಯದ ಹಿಂದುಳಿದ ಉತ್ತರ ಕರ್ನಾಟಕದ 7ಜಿಲ್ಲೆಗಳಾದ ಗುಲಬರ್ಗಾ, ಬೀದರ, ಬಳ್ಳಾರಿ, ರಾಯಚೂರ, ಕೊಪ್ಪಳ, ಬಿಜಾಪುರ ಮತ್ತು ಬಾಗಲಕೋಟ ಜಿಲ್ಲೆಗಳಿಗೆ ಒಂದು ಪ್ರತೇಕ ಶಿಕ್ಷಣ ನಿರ್ದೇಶನಾಲಯವನ್ನು ಸನ್ಮಾನ್ಯ ಮುಖ್ಯಮಂತ್ರಿಗಳು 10ನೇ ಜುಲೈ 2001 ರಂದು ವಿದ್ಯುಕ್ತವಾಗಿ ಉದ್ಘಾಟನೆಯನ್ನು ಮಾಡಿದರು. ಶ್ರೀ ಡಿ.ಜಗನ್ನಾಥರಾವರನ್ನು ಈಶಾನ್ಯ ವಲಯದ ಪ್ರಥಮ ನಿರ್ದೇಶಕರಾಗಿ ನೇಮಿಸಿತು. ಸರಕಾರ ನೇಮಕ ಮಾಡಿತು ಮತ್ತು ಇವರು ಈ ನಿರ್ದೇಶನಾಲಯದ ಕಾರ್ಯಭಾರವನ್ನು 25 ಜುಲೈ 2001 ರಂದು ವಹಿಸಿ ಕೊಂಡರು.

ಸರಕಾರದ ಆದೇಶದಂತೆ ಈಶಾನ್ಯ ವಲಯ ನಿರ್ದೇಶನಾಲಯವು 2001-02ನೇ ಸಾಲಿನಲ್ಲಿ ಈ ಕೆಳಕಾಣಿಸಿದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು.

1) ಚಿಣ್ಣರ ಅಂಗಳ ಒಂದನೇ ಹಂತ.

2) ಚಿಣ್ಣರ ಅಂಗಳ ಎರಡನೇ ಹಂತ.

3) ವಿದ್ಯಾಚೇತನ ಕಾರ್ಯಕ್ರಮ

4) ಆಂಗ್ಲಭಾಷಾ ಭೋಧನಾ ತರಬೇತಿ ಕಾರ್ಯಕ್ರಮ

5) ಮಕ್ಕಳ ಸಮೀಕ್ಷೆ

6) ಕೇಳಿ ಕಲಿ ಕಾರ್ಯಕ್ರಮ

7) ಮಧ್ಯಾಹ್ನ ಬಿಸಿಊಟ ಕಾರ್ಯಕ್ರಮ

ಇತರೆ ಕಾರ್ಯಕ್ರಮ:-

1) ಗುಲಬರ್ಗಾ ಜಿಲ್ಲೆಯನ್ನು ಶೈಕ್ಷಣಿಕ ಮತ್ತು ಉತ್ತಮ ಆಡಳಿತದ ದೃಷ್ಟಿಯಿಂದ ಗುಲಬರ್ಗಾ ಉತ್ತರ ಮತ್ತು ದಕ್ಷಿಣ ಎಂದು ಎರಡು ಶೈಕ್ಷಣಿಕ ಜಿಲ್ಲೆಗಳಾಗಿ ವಿಂಗಡಿಸಲಾಗಿದೆ.

2) ಶಿಕ್ಷಕರು ಶಾಲೆಗಳಿಗೆ ಸಮಯಕ್ಕೆ ಸರಿಯಾಗಿ ಹಾಜರಾಗುವ ದೃಷ್ಟಿಯಿಂದ ಮಿಂಚಿನ ಸಂಚಾರ ಎಂಬ ಕಾರ್ಯಕ್ರಮವನ್ನು ಈಶಾನ್ಯ ವಲಯದಾದ್ಯಂತ ನಡೆಸಲಾಗಿದೆ.

3) ಮಕ್ಕಳನ್ನು ಶಾಲೆಗಳಿಗೆ ಆಕರ್ಷಿಸುವ ದೃಷ್ಟಿಯಿಂದ ಅಂದ ಆನಂದ ಎಂಬ ಕಾರ್ಯಕ್ರಮದ ಮೂಲಕ ಶಾಲೆಗಳಲ್ಲಿ ಸುಣ್ಣ, ಬಣ್ಣ ಮತ್ತು ಸುಂದರ ಗೋಡೆ ಬರಹ ಕಾರ್ಯಕ್ರಮ ಮಾಡಲಾಗಿದೆ.

4) ಎಲ್ಲಾ ಶಾಲೆಗಳಲ್ಲಿ ಪ್ರಗತಿ ಪತ್ರಗಳನ್ನು ಈ ವರ್ಷದಿಂದ ನೀಡಲಾಗುತ್ತಿದೆ. ಇದರಿಂದ ಶಿಕ್ಷಕರ ಹಾಗೂ ಮಕ್ಕಳ ಗುಣಮಟ್ಟ ಉತ್ತಮ ಪಡಿಸುವುದಾಗಿದೆ.

5) ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ ರಚಿಸಲಾಗಿದೆ.

6) ಸಮುದಾಯ ಮತ್ತು ಶಾಲೆಗಳಿಗೆ ಉತ್ತಮ ಸಂಬಂಧವನ್ನು ರೂಪಿಸಲು ಸಮುದಾಯದತ್ತ ಶಾಲೆ ಕಾರ್ಯಕ್ರಮ ನಡೆಸಲಾಗುತ್ತಿದೆ.

7) ದಾನಿಗಳಿಂದ ಶಾಲೆಗಳ ಸಂಪನ್ಮೂಲಗಳನ್ನು ವೃದ್ಧಿ ಮಾಡಲು ಶಾಲಾ ದತ್ತು ಕಾರ್ಯಕ್ರಮ ನಡೆದಿದೆ.

8) ವಿದ್ಯಾರ್ಥಿ ಹಾಗೂ ಶಿಕ್ಷಕರ ಅನುಪಾತವನ್ನು ಹೆಚ್ಚಿಸುವ ಸಲುವಾಗಿ ಇತರ ಜಿಲ್ಲೆಗಳಿಂದ ಈಶಾನ್ಯ ವಲಯದ ಜಿಲ್ಲೆಗಳಿಗೆ 2046 ಹುದ್ದೆಗಳ ಸ್ಥಳಾಂತರ ಮಾಡಿ ಭರ್ತಿ ಮಾಡಲಾಗಿದೆ.

9) ಪ್ರಾಥಮಿಕ ಶಾಲೆಗಳಲ್ಲಿಯ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಅನುಪಾತವನ್ನು ರಾಜ್ಯದ ಸರಾಸರಿ 40% ತರುವ ಸಲುವಾಗಿ ಈಶಾನ್ಯ ವಲಯದಲ್ಲಿ 5000 ಶಿಕ್ಷಕರ ಅವಶ್ಯಕತೆ ಇದೆ. ಈ 5000 ಹುದ್ದೆಗಳನ್ನು ಮಂಜೂರು ಮಾಡಲು ಸರಕಾರಕ್ಕೆ ಪ್ರಸ್ತಾವನೆಯನ್ನು ಸರಕಾರಕ್ಕೆ ಸಲ್ಲಿಸಲಾಗಿದೆ ತಕ್ಷಣ ನಿಯಮಾನುಸಾರ ತುಂಬಲಾಗುವುದು.

10) ಈಶಾನ್ಯ ವಲಯದ ಶೈಕ್ಷಣಿಕ ಚಟುವಟಿಕೆಗಳಲ್ಲಿ ಅಜೀಂ ಪ್ರೇಮಜಿ ಪ್ರತಿಷ್ಠಾನದ ಸಹಕಾರವನ್ನು ಬೀದರ ಜಿಲ್ಲೆಗೆ ಸೌಲಭ್ಯ ಕೊಟ್ಟಿದ್ದರಿಂದ ಈಶಾನ್ಯ ವಲಯದ ತುಂಬು ಹೃದಯದಿಂದ ಸ್ವಾಗತಿಸುತ್ತದೆ.

ಸರ್ಕಾರದಿಂದ ಇಂತಹ ಅನೇಕ ಸೌಲಭ್ಯಗಳಿಂದ ಶೈಕ್ಷಣಿಕ ಪ್ರಗತಿಗಾಗಿ ಸಾರ್ವಜನಿಕರು ಒಪ್ಪಿಕೊಂಡು ಸಹಕರಿಸುತಲ್ಲಿದ್ದಾರೆ. ಈಗೀನ ಶಿಕ್ಷಣದ ವ್ಯವಸ್ಥೆಗೆ ಸೌಕರ್ಯಕ್ಕಾಗಿ ಗುಣಮಟ್ಟ ಶಿಕ್ಷಣ ನೀಡುತ್ತಿರುವುದರಿಂದ ಪಾಲಕರು ಬಹಳಷ್ಟು ಖುಷಿಪಟ್ಟಿರುತ್ತಾರೆ. ಭಾರತ ದೇಶದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಕೃಷಿ ಕಾರ್ಮಿಕರು ಇರುವ ಜನರು ದೀನ ದಲಿತರು, ಬಡವರು, ಇರುವ ಕುಟುಂಬ ಇರುವುದರಿಂದ ಸರ್ಕಾರದಿಂದ ಕೊಡುತ್ತಿರುವ ಸೌಲಭ್ಯಗಳಾದ ಉಚಿತ ಪಠ್ಯ ಪುಸ್ತಕ, ಸಮವಸ್ತ್ರ, ಶಿಷ್ಯವೇತನ, ಪ.ಜಾ/ಪ.ಪಂ. ಮಕ್ಕಳಿಗೆ

ನೋಟಬುಕ್, ಬ್ಯಾಗ್ ಇತ್ಯಾದಿ ಸೌಲಭ್ಯಗಳಿಂದ ಹಾಗೂ ಮಧ್ಯಾಹ್ನ ಬಿಸಿಊಟದಿಂದ ಮಕ್ಕಳ ಹಾಜರಾತಿ ಹೆಚ್ಚಿಸಿದೆ. ಅಲ್ಲದೆ ಶಾಲೆಗೆ ಬಂದು ಶಾಲಾ ಅವಧಿ ಮುಗಿಯುವವರೆಗೆ ಶಾಲೆಯಲ್ಲಿದ್ದು, ಪಾಠ ಕಲಿಯುತ್ತಿದ್ದರು, ನಲಿಕಲಿ ಮಾದರಿಯ ಪಾಠ ಬೋಧನೆ ಆಕರ್ಷಣೆಯವಾಗಿದ್ದರಿಂದ ಕಾರ್ಯಕ್ರಮಕ್ಕೆ ಪಾಲಕರು ಮೆಚ್ಚುಗೆ ವ್ಯಕ್ತ ಪಡಿಸಿದ್ದರು.

ಶಿಕ್ಷಕರ ಬಗ್ಗೆ ಹೇಳುವುದಾದರೆ, ಇತ್ತಿಚಿನ ನೂತನವಾಗಿ ಪಾಠ ಬೋಧನೆ ಮಾಡುವ ಪದ್ಧತಿಯಿಂದ ಶಿಕ್ಷಕರಿಗೆ ಹೆಚ್ಚಿನ ಹೊರೆಯಾಗಿದೆ. ಆದರೂ ಕೂಡ ಈಗಿನ ಹೊಸ ಪದ್ಧತಿಯಿಂದ ಮಕ್ಕಳ ಕಲಿಕೆಗೆ ಪೂರಕವಾಗಿದ್ದು, ಕಲಿಕೆಗೆ ಹಾಗೂ ಮಕ್ಕಳು ಸತತವಾಗಿ ಶಾಲೆಗೆ ಬರುವಂತೆ ಆಕರ್ಷಣೆಯಾಗಿರುತ್ತದೆ. ಮಕ್ಕಳ ಅನುಪಾತ 50%ರ ಬದಲಾಗಿ ಅನುಪಾತ ಕಡಿಮೆ ಇದ್ದರೆ ಕಡಿಮೆ ಇದ್ದ ಮಕ್ಕಳಿಗೆ ಪ್ರತಿಯೊಂದು ಮಗುವಿನ ಕಡೆ ಹೆಚ್ಚಿನ ಗಮನ ಹರಿಸಿ ಗುಣಮಟ್ಟ ಶಿಕ್ಷಣ ನೀಡಲು ಅವಶ್ಯಕವಾಗಿರುತ್ತದೆಂಬ ಅನಿಸಿಕೆ ಶಿಕ್ಷಣದ್ದಾಗಿದೆ. ಪಾಠ ಬೋಧನೆ ಹೊರತು ಪಡಿಸಿ ಅನ್ಯ ಕೆಲಸಕ್ಕಾಗಿ, ಬೇರೆ ಇಲಾಖೆಯ ಕೆಲಸಕ್ಕಾಗಿ ಶಿಕ್ಷಕರನ್ನು ಬಳಸಿಕೊಳ್ಳುವುದರಿಂದ ವಿಷಯವಾರು ಪಾಠ ಹೇಳುವಲ್ಲಿ ಪರಿಣಾಮಕಾರಿ ಬೋಧನೆಯಾಗುತ್ತಿಲ್ಲ. ಆಯಾ ಗ್ರಾಮಗಳಲ್ಲಿಯೇ ಶಿಕ್ಷಕರಿಗೆ ವಾಸಿಸಲು ವಸತಿ ಸೌಲಭ್ಯದ ಅವಶ್ಯಕತೆಯಿದೆ ಇದರಿಂದ ನಿಯಮಿತವಾಗಿ ಶಾಲೆಗೆ ಬರಲು ಅನುಕೂಲವಾಗುತ್ತದೆ. ಇಲಾಖೆಯು ಸರ್ಕಾರದ ಕಾರ್ಯಕ್ರಮಗಳಿಗಾಗಿ ಬದ್ಧರಾಗಿ ದುಡಿಯುವುದೆ ನಮ್ಮ ಉದ್ದೇಶವಾಗಿದೆ ಎಂದು ಶಿಕ್ಷಕರು ಹೇಳುತ್ತಾರೆ.

ವಿದ್ಯಾರ್ಥಿಗಳ ಅನಿಸಿಕೆ ಸಂಗ್ರಹಿಸಿದ್ದಾಗ ಈಗಾಗಲೆ ನೀಡುವ ಸೌಲಭ್ಯಗಳು ಬಹಳಷ್ಟು ಫಲಕಾರಿಯಾಗಿದೆ ಎಂದು ಹೇಳುತ್ತಾ ಬಡತನದಿಂದ ಇರುವ ಪಾಲಕರಿಗೆ ಬಹಳಷ್ಟು ಲಾಭವಾಗಿದೆ. ಒಂದು ಹೊತ್ತು ಊಟ ಸಿಗದ ಪಾಲಕರ ಕುಟುಂಬ ಬಹಳಷ್ಟಿದೆ. ಹೀಗಾಗಿ ಸರ್ಕಾರದಿಂದ ಕೊಡುತ್ತಿರುವ ಸೌಲಭ್ಯವಾದ ಉಚಿತ, ಪಠ್ಯ ಪುಸ್ತಕ, ಸಮವಸ್ತ್ರ, ಮಧ್ಯಾಹ್ನ ಬಿಸಿಊಟ, ಶಿಷ್ಯವೇತನ, ನೋಟಬುಕ್, ಬ್ಯಾಗ್, ಇತ್ಯಾದಿ ಸೌಲಭ್ಯದಿಂದ ಕಲಿಕೆಗೆ ದಿನಾಲು ಶಾಲೆಗೆ ಬರಲು ಬಹಳಷ್ಟು ಅನುಕೂಲವಾಗಿದೆಯೆಂದು ಹೇಳುತ್ತಾರೆ. ಸರ್ವ ಶಿಕ್ಷಣ ಅಭಿಯಾನದಿಂದ ವಿವಿಧ ರೀತಿಯ ಆಯಾಮಗಳಿಂದ ಬೋಧನೆ ಮಾಡುತ್ತಿರುವುದುರಿಂದ ಉತ್ತಮವಾದ ಕಲಿಕೆಗೆ ಹಾಗೂ ಹಾಜರಾತಿಗೆ ಬಹಳಷ್ಟು ಅನುಕೂಲವಾಗಿದೆಯೆಂಬ ಅಭಿಪ್ರಾಯ ವಿದ್ಯಾರ್ಥಿಗಳದ್ದಾಗಿದೆ.

ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯಿಂದ (ಎಸ್.ಡಿ.ಎಂ.ಸಿ) ಈ ಸಮಿತಿ ಅಧ್ಯಕ್ಷ ಹಾಗೂ ಸದಸ್ಯರ ಬಗ್ಗೆ ಸಂಗ್ರಹಣೆ ಮಾಡಿದಾಗ ಎಸ್.ಡಿ.ಎಂ.ಸಿ. ಸಮಿತಿಯಿಂದ ಶಾಲೆಯ ಪ್ರಗತಿಗಾಗಿ ಹಾಗೂ ಶಿಕ್ಷಣ ಬಗ್ಗೆ ಕಾಳಜಿವಹಿಸಿರುತ್ತಿರುವುದು ಕಂಡು ಬಂದಿದೆ. ಅನೇಕ ಸದಸ್ಯರು ಬಹಳ ಉತ್ತಮ ರೀತಿಯಿಂದ ಕೆಲಸ ಮಾಡುತ್ತಿದ್ದರು, ಆದರೆ ಕೆಲವು ಎಸ್.ಡಿ.ಎಂ.ಸಿ. ಯವರು ಶಾಲಾ ಮುಖ್ಯ ಗುರುಗಳಿಗೆ ಶಿಕ್ಷಕರಿಗೆ ಕಿರುಕುಳ ಕೊಡುವುದೇ ಎಸ್.ಡಿ.ಎಂ.ಸಿ. ರವರ ಧ್ಯೇಯ ಮತ್ತು ಉದ್ದೇಶವೆಂದು ತಿಳಿದುಕೊಂಡಿರುತ್ತಾರೆ. ಹೀಗಾಗಿ ಇವರ ಕಾಟದಿಂದ ಅನೇಕ ಮುಖ್ಯ ಗುರುಗಳು ಮತ್ತು ಶಿಕ್ಷಕರು ಆತ್ಮಹತ್ಯ ಮಾಡಿಕೊಂಡಿರುವ ಘಟನೆ ಪತ್ರಿಕೆಗಳಲ್ಲಿ ನೋಡುತ್ತಿರುತ್ತೇವೆ. ಕೆಲವು ಎಸ್.ಡಿ.ಎಂ.ಸಿ.ಯವರು ಸರ್ಕಾರದಿಂದ ಬರುವ ಹಣ ಇತ್ಯಾದಿ ಬರುವದೇ ನೋಡುವರು, ಎಸ್.ಡಿ.ಎಂ.ಸಿ.ಯವರಿಂದ ಹಣದ

ದುರ್ಬಳಕೆಯಾಗಿರುವುದು ಇಲಾಖೆಯ ಗಮನಕ್ಕೆ ಬಂದಿದೆ, ಅಲ್ಲದೆ ಠಾಣೆಯಲ್ಲಿ ಕ್ರೀಮಿನಲ್ ಕೇಸ್ ಹೂಡಿರುವ ಘಟನೆ ಇವೆ. ಹೀಗಾಗಿ ಎಸ್.ಡಿ.ಎಂ.ಸಿ. ಯವರಿಗೆ ಹಣಕಾಸಿನ ವ್ಯವಹಾರ ಕೊಡದೆ ಕೇವಲ ಶಾಲೆಯ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಅಧಿಕಾರವನ್ನು ಕೊಡಬೇಕು ವಿನಹ ಸರ್ಕಾರದಿಂದ ಬರುವ ಹಣದ ಜಂಟಿ ಖಾತೆಯನ್ನು ತೆಗೆದು ಆಯಾ ತಾಲ್ಲೂಕಿನ ಅಧಿಕಾರಿಯ ಮತ್ತು ಮುಖ್ಯ ಗುರುಗಳು ಜಂಟಿ ಖಾತೆಯಿಂದ ಹಣದ ವ್ಯವಹಾರ ಮಾಡಿದ್ದರೆ. ಹಣದ ದುರ್ಬಳಕೆಯಾಗುವುದಿಲ್ಲವೆಂಬ ಸಾರ್ವಜನಿಕರ ಹಾಗೂ ಪಾಲಕರ ಮತ್ತು ಮುಖ್ಯ ಗುರುಗಳ ಶಿಕ್ಷಕರ ಮತ್ತು ಅನೇಕ ಸಂಘ ಸಂಸ್ಥೆಯವರ ಅಭಿಪ್ರಾಯವಾಗಿದೆ.

ಅಧ್ಯಯ–8

# ಸಮಾರೋಪ

ಬೀದರ ಜಿಲ್ಲೆಗೆ ತನ್ನದೆ ಆದ ಐತಿಹಾಸಿಕ, ರಾಜಕೀಯ, ಭೌಗೋಳಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಸಾಹಿತ್ಯಿಕ ಹಿನ್ನಲೆ ಇದೆ ಎಂಬುದನ್ನು ಹಾಗೂ ಅನೇಕ ಅರಸರು ಆಳುವ ಸಂದರ್ಭದಲ್ಲಿ ಶಿಕ್ಷಣದ ವ್ಯವಸ್ಥೆ ಬೇರೆ ರೀತಿಯದಾಗಿತ್ತು. ಬೀದರ ಜಿಲ್ಲೆಯ ಪಶ್ಚಿಮಕ್ಕೆ ಮಹಾರಾಷ್ಟ್ರ ಹಾಗೂ ಪೂರ್ವಕ್ಕೆ ಆಂಧ್ರದ ಗಡಿಭಾಗಗಳನ್ನು ಹೊಂದಿರುವ ಬೀದರ ಜಿಲ್ಲೆ, ಮರಾಠಿ, ತೆಲುಗು, ಉರ್ದು ಹಾಗೂ ಹಿಂದಿ ಸಂಸ್ಕೃತಿಗಳ ಪ್ರಭಾವಕ್ಕೆ ಒಳಗಾಗಿದೆ. ಹನ್ನೆರಡನೆಯ ಶತಮಾನದ ಶರಣರ ಪ್ರಭಾವವೂ ಈ ಭಾಗದ ಸಂಸ್ಕೃತಿಯ ಮೇಲೆ ಇರುವುದು ಕಂಡು ಬರುತ್ತದೆ.

ಈ ಅವಧಿಯಲ್ಲಿ ಬೀದರ ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಮಾತನಾಡುವ ಭಾಷೆಗಳ ಕುರಿತು ಅಂದರೆ ಬೀದರ ತಾಲ್ಲೂಕಿನಲ್ಲಿ ಕನ್ನಡ, ಮರಾಠಿ, ಹಿಂದಿ, ಉರ್ದು, ತೆಲುಗು ಮಾತನಾಡುವ ಜನರಿದ್ದಾರೆ. ಔರಾದ ತಾಲ್ಲುಕದಲ್ಲಿ ಕನ್ನಡ, ಮರಾಠಿ, ಹಿಂದಿ, ಉರ್ದು, ಲಂಬಾಣಿ ಭಾಷೆಯ ಮಾತನಾಡುವ ಜನರಿದ್ದಾರೆ. ಭಾಲ್ಕಿ ತಾಲ್ಲೂಕಿನಲ್ಲಿ ಕನ್ನಡ, ಮರಾಠಿ, ಹಿಂದಿ, ಉರ್ದು, ಕೆಲವು ತಾಂಡಾಗಳಲ್ಲಿ ಲಂಬಾಣಿ ಭಾಷೆಯ ಮಾತನಾಡುವ ಜನರಿದ್ದಾರೆ. ಹುಮನಾಬಾದದಲ್ಲಿ ಕನ್ನಡ, ತೆಲುಗು, ಹಿಂದಿ, ಉರ್ದು, ಭಾಷೆ ಮಾತನಾಡುವ ಜನರಿದ್ದಾರೆ. ಬಸವಕಲ್ಯಾಣ ತಾಲ್ಲೂಕಿನಲ್ಲಿ ಕನ್ನಡ, ಮರಾಠಿ, ಹಿಂದಿ, ಉರ್ದು ಮಾತನಾಡುವ ಜನರಿದ್ದಾರೆ. ಹೀಗಾಗಿ ಬೀದರ ಜಿಲ್ಲೆಯ ಜನತೆಯು ಬಹುಭಾಷಿಕ ಮಾತನಾಡುವ ಜನರಿದ್ದಾರೆಂದು ಖಚಿತವಾಗಿದೆ. ಈ ರೀತಿ ಬಹುಭಾಷಿಕ ಮಾತನಾಡುವುದರಿಂದ ಮನೆಯಲ್ಲಿ ಮರಾಠಿ, ಹಿಂದಿ, ಉರ್ದು, ತೆಲಗು, ಲಂಬಾಣಿ ಭಾಷೆ ಮಾತನಾಡಿ ಶಾಲೆಯಲ್ಲಿ ಕನ್ನಡ ಭಾಷೆಯಲ್ಲಿ ಕಲಿಯಲು ಬಹಳಷ್ಟು ಕ್ಲಿಷ್ಟವಾಗುತ್ತದೆ. ಇಂತಹ ಅನೇಕ ದೃಷ್ಟಾಂತಗಳಿವೆ. ಅದರಲ್ಲಿ ಸರಕಾರಿ ಶಾಲೆಗಳಿಗಿಂತ ಖಾಸಗಿ ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟ ಹಾಗೂ ಕಲಿಕೆ ದೃಷ್ಟಿಯಿಂದ ಉತ್ತಮ ವ್ಯವಸ್ಥೆ ಇರತ್ತದೆಂಬ ಪಾಲಕರ ಮನೋಭಾವನೆಯಾಗಿದೆ. ಆದರೆ ಶಿಕ್ಷಣದ ಮಹತ್ವ ಅರಿತವರು ವಿರಳ ಶಿಕ್ಷಣ ಇಲಾಖೆ ಸರ್ಕಾರಿ ಶಾಲೆಗಳಿಗೆ ಖಾಸಗಿ ಶಾಲೆಗಳಿಗಿಂತ ಹೆಚ್ಚಿನ ಸೌಲಭ್ಯ ಒದಗಿಸುತ್ತದೆ. ಶಿಕ್ಷಕರಿಗೆ ವಿವಿಧ ರೀತಿಯ ತರಬೇತಿ ಹಾಗೂ ವಿಷಯವಾರು ತರಬೇತಿ ನೀಡುತಲ್ಲಿದೆ. ಮಕ್ಕಳಿಗೂ ಹೆಚ್ಚಿನ ಸೌಲಭ್ಯ ಕಲ್ಪಿಸುತ್ತಿದೆ. ಆದರೂ ಸರ್ಕಾರಿ ಪ್ರಾಥಮಿಕ ಶಾಲೆಗಳೂ ಖಾಸಗಿ ಶಾಲೆಗಳಿಗಿಂತ ಉತ್ತಮವಾಗಿದೆ. ಅಲ್ಲದೆ ಸರ್ಕಾರಿ ಶಾಲೆಗಳಲ್ಲಿ ನೇಮಕರಾದ ಶಿಕ್ಷಕರು ಹೆಚ್ಚಿನ ಅಂಕ ಪಡೆದು ಸಿ.ಈ.ಟಿ. ಮುಖಾಂತರ ಹೆಚ್ಚಿನ ಅಂಕಗಳಿಸಿದ ಶಿಕ್ಷಕರನ್ನು ನೇಮಕ ಮಾಡಿಕೊಳ್ಳುತ್ತಾರೆ ಮತ್ತು ಮೂಲಭೂತ ಸೌಲಭ್ಯವು ಸಹ ಹೊಂದಿರುತ್ತದೆ. ಆದರೆ ಖಾಸಗಿ ಶಾಲೆಗಳಲ್ಲಿ ಕೆಲಸ ಮಾಡುವ ಶಿಕ್ಷಕರು ಹೆಚ್ಚಿನ ಆಸಕ್ತಿ ವಹಿಸಿ ಶ್ರಮ ಪಡುತ್ತಾರೆ. ಶಾಲಾ ವೇಳಾಪಟ್ಟಿ ಅಲ್ಲದೆ ಹೆಚ್ಚಿನ ಸಮಯ ತೆಗೆದುಕೊಂಡು ಗುಣಮಟ್ಟದ ಶಿಕ್ಷಣ ವಿವಿಧ ಸಾಂಸ್ಕೃತಿಕ ಚಟುವಟಿಕೆ ಮೂಲಕ ಪಾಠ ಬೋಧನೆ ಮಾಡಿಸುತ್ತಾರೆ. ಅಲ್ಲದೆ ಖಾಸಗಿ ಶಾಲೆಯಲ್ಲಿ ಓದಿಸುವ ಮಕ್ಕಳ ಪಾಲಕರು ಸುಶಿಕ್ಷಿತರು, ಆರ್ಥಿಕವಾಗಿ ಶ್ರೀಮಂತರು ಇರುತ್ತಾರೆ. ಶಾಲಾ ಶುಲ್ಕ ನೀಡಿ ಮಕ್ಕಳ ಕಡೆ ಹೆಚ್ಚಿನ ಕಾಳಜಿ ವಹಿಸುತ್ತಾರೆ. ಶಾಲಾ ಅವಧಿಯ ನಂತರ ಟಿವಿಶನ್ ಇಡುತ್ತಾರೆ. ಮನೆಯಲ್ಲಿಯೂ ಪಾಲಕರು

ಓದಿಸುತ್ತಾರೆ. ಗ್ರಾಮೀಣ ಪ್ರದೇಶದ ಹಳ್ಳಿಗಳಲ್ಲಿ ಹೆಚ್ಚಿನ ಜನರು ಕೂಲಿ ಕಾರ್ಮಿಕರು, ರೈತರು, ದೀನದಲಿತರು, ಅನಕ್ಷರಸ್ಥರು ಇದ್ದು, ಸರ್ಕಾರಿ ಶಾಲೆಯಲ್ಲಿ ತಮ್ಮ ಮಕ್ಕಳನ್ನು ದಾಖಲಾತಿ ಮಾಡಿರುತ್ತಾರೆ. ದಿನಾಲು ಶಾಲೆಗೆ ಕಳುಹಿಸಬೇಕೆಂಬ ಪ್ರಜ್ಞೆ ಇರುವುದಿಲ್ಲ. ಚಿಕ್ಕ ವಯಸ್ಸಿನ ಮಕ್ಕಳು ಇರುವುದರಿಂದ ಶಾಲೆಗೆ ಹೋಗುವ ಹಂಬಲ ಇರುವುದಿಲ್ಲ. ಒತ್ತಾಯದಿಂದ ಶಾಲೆಗೆ ಹೋದರೂ ಇಡೀ ದಿವಸ ಶಾಲೆಯಲ್ಲಿರುವುದಿಲ್ಲ.

ಆಡುವ ಕೂಸಿಗೆ ಕಾಡುವ ಕೂಸೆಂಬಂತೆ, ಚಿಕ್ಕ ಮಕ್ಕಳ ಪಾಲನೆ ಪೋಷಣೆಗಾಗಿ ಶಾಲೆಗೆ ಹೋಗುವ ಚಿಕ್ಕ ಮಕ್ಕಳನ್ನು ತೆಗೆದುಕೊಂಡು ಹೋಗುತ್ತಾರೆ. ಹೀಗಾಗಿ ಸತತವಾಗಿ ಶಾಲೆಗೆ ಹೋಗುವುದಿಲ್ಲ. ಹೆಸರಿಗೆ ಮಾತ್ರ ಶಾಲೆಗೆ ಪ್ರವೇಶ ಮಾಡಿಸಿ ಹೊಲದಲ್ಲಿ ನೀರು ಬಿಡಲು ದನಕಾಯಲು, ಹೋಟಲದಲ್ಲಿ, ಧಾಬಾದಲ್ಲಿ ಕೆಲಸಕ್ಕಾಗಿ ಇಡುತ್ತಾರೆ. ಪಟ್ಟಣದಲ್ಲಿಯು ಗ್ಯಾರೀಜದಲ್ಲಿ, ಅಂಗಡಿಗಳಲ್ಲಿ ಕೆಲಸಕ್ಕಾಗಿ ಇಟ್ಟು ಪಾಲಕರು ಹಣ ಪಡೆಯುತ್ತಾರೆ. ಕೆಲವು ಪಾಲಕರು ಅಂಗವಿಕಲವಿದ್ದುದರಿಂದ, ಮಕ್ಕಳಿಗೆ ಕೆಲಸಕ್ಕೆ ಇಡುತ್ತಾರೆ. ವಯಸ್ಸಾದ ತಂದೆ ತಾಯಿ ಇದ್ದವರು ಕೆಲಸಕ್ಕೆ ಇಟ್ಟು ಹಣ ಪಡೆಯುತ್ತಾರೆ. ಅಲ್ಲದೆ ಕೆಲವು ಅನಕ್ಷರಸ್ಥ ಪಾಲಕರಲ್ಲಿ ಇಂತಹ ಭಾವನೆಯಾಗಿದೆ, ಶಾಲೆ ಕಲಿತ ಮೇಲೆ ನೌಕರಿ ಅಥವಾ ಕೆಲಸ ಸಿಗದಿದ್ದ ಕಾಲದಲ್ಲಿ ಹೊಲದ ಕೆಲಸವು ಬರೋದಿಲ್ಲ, ಬೇರೆ ಯಾವುದೇ ಕೆಲಸ ಬಾರದ ಕಾರಣ ನಿರುದ್ಯೋಗಿಗಳಾಗಿ ಜೀವನದಲ್ಲಿ ಜಿಗುಪ್ಸೆಗೊಂಡು ಯಾವುದೆ ಕೆಲಸಕ್ಕೆ ಬಾರದವರಾಗಿದ್ದಾರೆಂಬ ಗೋಳು ಪಾಲಕರದ್ದಾಗಿದೆಯೆಂದು ಕೆಲವು ಪಾಲಕರ ಅನಿಸಿಕೆ ಇದೆ. ಶಿಕ್ಷಣ ಕಲಿತು ಪಾಲಕರ ನೌಕರಿಗೆ ಸೇರಿದ ಮೇಲೆ ಹಡೆದ ತಂದೆ ತಾಯಿ ಯವರಿಗೆ ಪಾಲನೆ ಪೋಷಣೆ ಮಾಡುವುದಿಲ್ಲವೆಂಬ ಭಾವನೆ ವ್ಯಕ್ತಪಡಿಸಿದ್ದರು, ಅದರಲ್ಲಿ ವಿಶೇಷವಾಗಿ ದೀನ–ದಲಿತರ, ಬಡವರ ಮಕ್ಕಳ ಪಾಲಕರಲ್ಲಿ ಈ ಭಾವನೆಯಿದ್ದು, ಹೆಸರಿಗೆ ಮಾತ್ರ ಮಕ್ಕಳಿಗೆ ಶಾಲೆಗೆ ಸೇರಿಸುತ್ತಾರೆ. ಆದರೆ ಶಾಲೆಗೆ ಕಳುಹಿಸದೆ ಈ ಮೇಲಿನ ಕಾರಣಗಳಿಂದ ಹಳ್ಳಿಗಳಲ್ಲಿನ ಸರ್ಕಾರಿ ಶಾಲೆಗಳಲ್ಲಿ ಹಾಗೂ ಪಟ್ಟಣದ ಶಾಲೆಗಳಲ್ಲಿಯೂ ಬಡ ಮಕ್ಕಳು ದಾಖಲಾಗಿರುವುದರಿಂದ ಶಿಕ್ಷಣ ಕಡೆ ಗಮನ ಹರಿಸದೆ, ಮೂಢ ನಂಬಿಕೆ, ಗೊಡ್ಡ ಸಂಪ್ರದಾಯದ ಹೀನಾಯ ವಿಚಾರದಿಂದ ಮಕ್ಕಳು ಮೇಲಿಂದ ಮೇಲೆ ಶಾಲೆ ತಪ್ಪಿಸುವುದಾಗಲಿ ಶಾಲೆಗೆ ದಾಖಲಾಗದೆ ಇದ್ದು, ಶಿಕ್ಷಣಕ್ಕೆ ಆಸಕ್ತಿ ತೋರುವುದಿಲ್ಲ. ಕೆಲವು ಪಾಲಕರು ಅಲೆಮಾರಿ ಕುಟುಂಬಗಳಿರುವುದರಿಂದ ಒಂದೆ ಕಡೆ ಸ್ಥಾಯಿಕ್ಕಾಗಿ ಇರದೇ ಊರಿಂದೂರಿಗೆ ಕೆಲಸಕ್ಕಾಗಿ ವಲಸೆ ಹೋಗುತ್ತಾರೆ. ಕೂಲಿ ಜನರು, ಲಂಬಾಣಿ ಜನರು ಆಯಾ ಬೆಳೆಗಳ ಸೀಸ್‌ನದಲ್ಲಿ ತಮ್ಮ ಮಕ್ಕಳೊಂದಿಗೆ ಕೆಲಸಕ್ಕಾಗಿ ವಲಸೆ ಹೋಗುತ್ತಾರೆ. ಹೀಗಾಗಿ ಆ ಮಕ್ಕಳು ಅಕ್ಷರ ಕಲಿಯದೆ ಮುಂದೆ ಹಿರಿಯರಾಗಿ ಅನಕ್ಷರಸ್ಥರಾಗಿರುತ್ತಾರೆ.

ಈ ರೀತಿ ಅನೇಕ ರೀತಿಯ ಕಾರಣಗಳಿಂದ ಮಕ್ಕಳ ಕಲಿಕೆ ಮಾರಕವಾಗಿದೆ ಆದರೂ ಸರ್ಕಾರದಿಂದ ಬರುವ ಸೌಲಭ್ಯಗಳು ಬಹಳ ಉಪಯುಕ್ತವಾಗಿದೆ. ಮಧ್ಯಾಹ್ನ ಬಿಸಿಯೂಟದಿಂದ ಮಕ್ಕಳ ಹಾಜರಾತಿ ಹೆಚ್ಚಿಸಿದೆ. ಶಾಲೆಗೆ ಬಂದ ಮಗು ಶಾಲೆ ಬಿಡುವವರೆಗೆ ಶಾಲೆಯಲ್ಲಿದ್ದು ಕಲಿಯುತಲಿದೆ. ಉಚಿತ ಪಠ್ಯ, ಪುಸ್ತಕ, ಸಮವಸ್ತ್ರದಿಂದ ಬಹಳ ಅನುಕೂಲವಾಗಿದೆ. ಹಾಗೂ ಮಕ್ಕಳಲ್ಲಿ ಭಿನ್ನಾಭಿಪ್ರಾಯ ಕಂಡು ಬಾರದೆ ಎಲ್ಲರೂ ಒಂದೆ ಎಂಬ ಮನೋಭಾವನೆ ಮಕ್ಕಳಲ್ಲಿ ಕಂಡು ಬಂದಿರುತ್ತದೆ. ಸಮಾನತೆಯ ಭಾವನೆ ಕಾಣಿಸುತದಲ್ಲದೆ. ಶಿಷ್ಯವೇತನ, ಬ್ಯಾಗ್, ನೋಟಬುಕ್, ಇತ್ಯಾದಿ ಸೌಕರ್ಯಗಳಿಂದ ಪ್ರೋತ್ಸಾಹದಾಯಕವಾಗಿವೆ.

ಗುಣಮಟ್ಟ ಶಿಕ್ಷಣ ನೀಡುವಲ್ಲಿ, ದಾಖಲಾತಿಯಾದ ಮಕ್ಕಳಿಗೆ ನಿಯಮಿತವಾಗಿ ಶಾಲೆಗೆ ಬರುವಂತೆ ನೋಡಿಕೊಳ್ಳುವುದು, ಶಾಲೆಗೆ ದಾಖಲಾಗದ ಮಕ್ಕಳಿಗೆ ದಾಖಲಾತಿ ಮಾಡಿಕೊಳ್ಳುವುದು ಶಿಕ್ಷಕರು ಮಾಡುತಲ್ಲಿದ್ದಾರೆ ಆದರೆ ಗೈರು ಹಾಜರೀರುವ ಮಕ್ಕಳ ಪಾಲಕರ ಮನೆಗೆ ಹೋಗಿ ಅವರ ಮನವೊಲಿಸಿ ಮುಖ್ಯವಾಹಿನಿಗೆ ತರುವಲ್ಲಿ ಅಷ್ಟು ಪ್ರಯತ್ನ ಶಿಕ್ಷಕರು ಮಾಡದಿರುವುದು ಕಂಡು ಬಂದಿರಲಿಲ್ಲ. ಪಾಲಕರ ಸಭೆ ಮಾಡಿ ತಿಳುವಳಿಕೆ ನೀಡುವಲ್ಲಿ ವಿಫಲರಾಗಿದ್ದಾರೆ. ಕೆಲವು ಮುಖ್ಯ ಗುರುಗಳು ಆಸಕ್ತಿ ವಹಿಸಿ ಸಭೆ ಸಮಾರಂಭಕ್ಕೆ ಕರೆದರೆ ಪಾಲಕರು, ಗಣ್ಯ ವ್ಯಕ್ತಿಗಳು ಬರುವುದಿಲ್ಲ. ಶ್ರೀಮಂತರ ಗಣ್ಯ ವ್ಯಕ್ತಿಗಳ ಮಕ್ಕಳು ಖಾಸಗಿ ಕಾನ್ವೆಂಟ್ ಶಾಲೆಗಳಲ್ಲಿ ಶುಲ್ಕ ನೀಡಿ ಶಾಲೆಗೆ ಕಳುಹಿಸುತ್ತಿರುವುದರಿಂದ ಸರ್ಕಾರಿ ಶಾಲೆ ಕಡೆ ಗಮನಹರಿಸುವುದಿಲ್ಲ. ಶಿಕ್ಷಕರು ಸಹ ತಮ್ಮ ಮಕ್ಕಳಂತೆ ಭಾವಿಸಿ ಗುಣಮಟ್ಟ ಶಿಕ್ಷಣ ನೀಡುವಲ್ಲಿ ಅಷ್ಟು ಕ್ರೀಯಾಶೀಲರಲ್ಲದಂತೆ ಕಂಡು ಬಂದಿದೆ. ಈ ನಿಟ್ಟಿನಲ್ಲಿ ಸರ್ಕಾರದ ಕೆಲವು ದೋಷಗಳಿವೆ. ಶಿಕ್ಷಕರನ್ನು ಅನ್ಯ ಕೆಲಸಕ್ಕಾಗಿ ಬೇರೆ ಬೇರೆ ಇಲಾಖೆಯ ಕೆಲಸಕ್ಕಾಗಿ ಬಳಸಿಕೊಳ್ಳುವುದರಿಂದ ಶಿಕ್ಷಕರಿಗೆ ಕೆಲಸದ ಭಾರವಾಗಿದೆ, ಹೆಚ್ಚಿನ ತರಬೇತಿ ಮೇಲಿಂದ ಮೇಲೆ ಮಾಹಿತಿ ನೀಡುವ ಸಮಯ ವ್ಯರ್ಥವಾಗುತ್ತಲಿದೆ. ಮಕ್ಕಳಿಗೆ ಪಾಠ ಬೋಧನೆ ಹೊರತು ಪಡಿಸಿ ಶಿಕ್ಷಕರಿಗೆ ಬೇರೆ ಕೆಲಸಕ್ಕೆ ಬಳಸಿಕೊಳ್ಳುವುದರಿಂದ ಶಿಕ್ಷಕರಿಗೆ ಕೆಲಸದ ಒತ್ತಡ ಹೆಚ್ಚಾಗಿದೆ. ಇಲಾಖೆಯ ಅಧಿಕಾರಿಗಳು ಸಹ ಶಿಕ್ಷಕರನ್ನು ನಿಯಂತ್ರಣದಲ್ಲಿಟ್ಟುಕೊಳ್ಳದೆ. ಕೆಲವರು ಕೈಗೊಂಬೆಯಾಗಿ ರಾಜಕೀಯ ಒತ್ತಡದಲ್ಲಿ ಸಿಲುಕಿ ಅಧಿಕಾರಿಗಳಿಗೆ ಸ್ವತಂತ್ರವಿಲ್ಲದಂತಾಗಿದೆ. ರಾಜಕೀಯದಿಂದ ಮುಕ್ತಗೊಳಿಸಿ ಇಲಾಖೆಯ ಅಧಿಕಾರಿಗಳ ನಿಯಂತ್ರಣದಲ್ಲಿರುವುದು ಉತ್ತಮವೆಂಬ ಅಭಿಪ್ರಾಯ ಸಾರ್ವಜನಿಕರದ್ದಾಗಿದೆ.

ಶಿಕ್ಷಣದ ಗುಣಮಟ್ಟ, ಮಕ್ಕಳ ದಾಖಲಾತಿ ಹಾಜರಾತಿ ಹೆಚ್ಚಿಸಲು ಮತ್ತು ಮೂಲಭೂತ ಸೌಲಭ್ಯ ಒದಗಿಸಲು ಇಲಾಖೆಯು ಪಾಲಕರ ಜವಾಬ್ದಾರಿ ಪಾಲ್ಗೊಳ್ಳುವಿಕೆಯ ದೃಷ್ಟಿಯಿಂದ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯು ಸರ್ಕಾರಿ ಶಾಲೆಗಳಲ್ಲಿ ಜಾರಿಗೆ ತಂದಿರುವುದರಿಂದು ಇಲಾಖೆಯ ಉತ್ತಮ ಯೋಜನೆಯಾಗಿದೆ. ಈ ಸಮಿತಿಯ ಕೆಲವು ಕಡೆ ತ್ಯಾಗ ಮನೋಭಾವನೆಯಿಂದ ದುಡಿದು ಶಾಲೆಗೆ ಬೇಕಾದ ಮೂಲಭೂತ ಸೌಲಭ್ಯ ಒದಗಿಸಿ ಶಾಲೆ ಅಭಿವೃದ್ಧಿ ಪಡಿಸುತಲ್ಲಿದ್ದರೆ, ಕೆಲವು ಅಂದರೆ ಹೆಚ್ಚಿನ ಸಂಖ್ಯೆಯ ಸಮಿತಿಯವರು ಅಧ್ಯಕ್ಷರು ಸರ್ಕಾರದಿಂದ ಹಣ ದುರ್ಬಳಕೆ ಮಾಡಿ, ಮುಖ್ಯಗುರುಗಳಿಗೆ ಕಿರುಕುಳ ನೀಡಿರುವ ದೃಷ್ಟಾಂತ ಹೆಚ್ಚಿನದಾಗಿದೆ. ಕೆಲವು ಮುಖ್ಯ ಗುರುಗಳು ಶಿಕ್ಷಕ, ಶಿಕ್ಷಕಿಯರು ಇವರ ಕಿರುಕುಳದಿಂದ ಆತ್ಮಹತ್ಯ ಮಾಡಿಕೊಂಡಿರುವ ದೃಷ್ಟಾಂತಗಳು ರಾಜ್ಯದಲ್ಲಿ ಅನೇಕ ಕಡೆ ನಡೆದಿವೆ. ಎಸ್.ಡಿ.ಎಂ.ಸಿ. ಯವರ ಹಾಗೂ ಗ್ರಾಮದಲ್ಲಿನ ರಾಜಕೀಯ ವಯಕ್ತಿಕ ಸ್ವಾರ್ಥಕ್ಕಾಗಿ ಸೇಡು ತೀರಿಸಿಕೊಳ್ಳಲು ಶಾಲೆಯಲ್ಲಿ ರಾಜಕೀಯ ಮಾಡಿ ಗೊಂದಲ ಸೃಷ್ಟಿಸುತ್ತಲ್ಲಿದ್ದಾರೆ. ಹೀಗಾಗಿ ಮುಖ್ಯ ಗುರುಗಳು ಮತ್ತು ಶಿಕ್ಷಕ ಸಿಬ್ಬಂದಿ ಭಯಭೀತರಾಗಿ ನೆಮ್ಮದಿಯಿಂದ ಕೆಲಸ ಮಾಡಲು ಆಗುತ್ತಿಲ್ಲ. ಹೀಗಾಗಿ ಎಸ್.ಡಿ.ಎಂ.ಸಿ. ಅವರಿಗೆ ಹಣಕಾಸಿನ ಅಧಿಕಾರ ತೆಗೆದು ಇಲಾಖೆಯಿಂದಲೆ ಕಟ್ಟಡ ಕಾಮಗಾರಿ ಇತ್ಯಾದಿ ಕೆಲಸವು ಆಗಿದ್ದರೆ ಉತ್ತಮವಾಗುತ್ತದೆ.

ಪ್ರತಿಯೊಂದು ಶಾಲೆಯಲ್ಲಿ ಪೂರ್ವ ಪ್ರಾಥಮಿಕ ಮಕ್ಕಳಿಗೆ ಅಂದರೆ 4 ವರ್ಷದಿಂದ 6 ವರ್ಷದ ವಯಸ್ಸಿನ ಮಕ್ಕಳಿಗೆ ಮೂಲಾಕ್ಷರ ಕಲಿತ ನಂತರ 1 ನೇ ತರಗತಿಗೆ ಸೇರಿಸುವುದು ಉತ್ತಮವಾಗಿರುತ್ತದೆ. ಮಕ್ಕಳ ಅನುಪಾತ 50:40 ರ ಬದಲಾಗಿ 30:20 ತಲಾ ಒಬ್ಬ ಶಿಕ್ಷಕರಿಗೆ ನಿಗದಿಪಡಿಸುವುದು ಪಟ್ಟಣದಲ್ಲಿ

ಜನಸಂಖ್ಯೆ ಆಧಾರದ ಮೇಲೆ ಶಾಲೆ ತೆರೆಯಲು ಅನುಮತಿ ಕೊಡಬೇಕು. ಪಟ್ಟಣದಲ್ಲಿ ಕನಿಷ್ಟ 1ಕಿ.ಮಿ. ಅಂತರವಿರಲಿ, ಶಿಕ್ಷಕರಿಗೆ ಪಾಠ ಬೋಧನೆ ಹೊರತು ಪಡಿಸಿ ಬೇರೆ ಕೆಲಸಕ್ಕಾಗಲಿ, ಬೇರೆ ಇಲಾಖೆಗಳಲ್ಲಿ ಕೆಲಸಕ್ಕೆ ಬಳಸಿಕೊಳ್ಳಬಾರದು. ತಪ್ಪು ಮಾಡಿದ ಶಿಕ್ಷಕರಿಗೆ ಇಲಾಖೆಯ ಅಧಿಕಾರಿಗಳು ನಿರ್ಧಾಕ್ಷಿಣ್ಯವಾಗಿ ಭಯ ಭೀತಿವಿಲ್ಲದೆ, ಒತ್ತಡಕ್ಕೆ ಮಣಿಯದೇ ಕ್ರಮಕೈಕೊಳ್ಳಬೇಕು. ಅಧಿಕಾರಿಗಳು ಯಾವುದೇ ಆಮಿಶಕ್ಕೆ ಬಲಿಯಾಗಬಾರದು. ಶಿಕ್ಷಣ ಇಲಾಖೆಯು ರಾಜಕೀಯದಿಂದ ಮುಕ್ತವಾಗಿದ್ದು, ಅಧಿಕಾರಿಗಳಿಗೆ ಹೆಚ್ಚಿನ ಶೈಕ್ಷಣಿಕ ಪ್ರಗತಿಗಾಗಿ ಮತ್ತು ಗುಣಮಟ್ಟದ ಶಿಕ್ಷಣ ಸುಧಾರಣೆಗಾಗಿ ಹೆಚ್ಚಿ ಅಧಿಕಾರ ಕೊಡುವುದು ಸಮಂಜಸವಿರುತ್ತದೆ.

ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಮಕ್ಕಳು ದಾಖಲಾಗಿದಷ್ಟು ಹಾಜರಾತಿಯಾಗಬೇಕಾದರೆ. ಮತ್ತು ಶಿಕ್ಷಕರು ಪಾಲಕರು ಗ್ರಾಮದ ಗಣ್ಯವ್ಯಕ್ತಿಗಳು ಹೆಚ್ಚಿನ ಕಾಳಜಿ ವಹಿಸಬೇಕಾದರೆ. ಶ್ರೀ ಬಿ.ವೆಂಕಟಸಿಂಗ ಅವರು ಪ್ರಕಟಿಸಿದ ಸುದ್ಧಿ ಮೂಲಕ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: 12/06/2010 ರ ಪತ್ರಿಕೆಯಲ್ಲಿ ಅವರು ಬರೆದ ಲೇಖನದ ಅಭಿಪ್ರಾಯ ಮಂಡಿಸಿದ್ದಾರೆ. ಗುಣಮಟ್ಟ ಶಿಕ್ಷಣ ನೀಡಲು ಈಗ ಬದ್ಧತೆಯ ಕೊರತೆ ಇದೆಯೆಂಬುದರ ಕುರಿತು ಮಂಡಿಸಿರುತ್ತಾರೆ. ಒಂದು ಶಾಲೆಯು ಸರ್ವತೋಮುಖವಾಗಿ ಅಭಿವೃದ್ಧಿಯಾಗಬೇಕಾದರೆ. ಶಿಕ್ಷಕರಲ್ಲಿ ಜನಪ್ರತಿನಿಧಿಗಳಲ್ಲಿ ಬದ್ಧತೆಯ ಕೊರತೆಯಿದೆ, ಸಕಲ ಸೌಲತ್ತು ಪಡೆದು ಸರಕಾರಿ ಶಾಲೆಗಳಲ್ಲಿ ಶಿಕ್ಷಕರಾಗಿ ಕೆಲಸ ಮಾಡುವ ಎಲ್ಲಾ ಶಿಕ್ಷಕರು ಸರಕಾರಿ ಶಾಲೆಗಳಲ್ಲಿ ತಮ್ಮ ಮಕ್ಕಳನ್ನು ಅಭ್ಯಾಸ ಮಾಡಿಸುವುದನ್ನು ಕಡ್ಡಾಯಗೊಳಿಸಬೇಕು. ಜೊತೆಗೆ ಗ್ರಾಮ ಪಂಚಾಯತ ಸದಸ್ಯರಿಂದ ಹಿಡಿದ ಸಂಸದರಿಗೂ ಅನ್ವಯಿಸಬೇಕು. ಜನಪ್ರತಿನಿಧಿಗಳ ಮಕ್ಕಳು ಸರಕಾರಿ ಶಾಲೆಗಳಲ್ಲಿ ಅಭ್ಯಾಸ ಮಾಡುತ್ತಾರೆ ಎಂದರೆ ಜನಸಾಮಾನ್ಯರು ಸಹ ಸರಕಾರಿ ಶಾಲೆಗಳಲ್ಲಿ ತಮ್ಮ ಮಕ್ಕಳನ್ನು ಸೇರಿಸುತ್ತಾರೆ.

ತಮ್ಮ ಮಕ್ಕಳನ್ನು ಖಾಸಗಿ ಶಾಲೆಗೆ ಸೇರಿಸುವ ಶಿಕ್ಷಕರು, ಜನಪ್ರತಿನಿಧಿಗಳು ಅನ್ಯರ ಮಕ್ಕಳನ್ನು ಸರಕಾರಿ ಶಾಲೆಗೆ ಸೇರಿಸುವಂತೆ ಭಾಷಣ ಮಾಡುವುದು ನಿಲ್ಲುವವರೆಗೆ ಸರಕಾರಿ ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟ ಹೆಚ್ಚಲು ಸಾಧ್ಯವಿಲ್ಲ. ಕನಿಷ್ಠ ತಮ್ಮ ಮಕ್ಕಳ ಭವಿಷ್ಯಕ್ಕಾದರೂ ಸರಕಾರಿ ಶಾಲೆಯಲ್ಲಿರುವ ಶಿಕ್ಷಕರು ಉತ್ತಮ ರೀತಿಯಲ್ಲಿ ಪಾಠ ಮಾಡಬಹುದು ಜನಪ್ರತಿನಿಧಿಗಳು ತಮ್ಮ ಮಕ್ಕಳು ಹೇಗೆ ಅಭ್ಯಾಸ ಮಾಡುತ್ತಾರೆ. ಎಂಬುವುದಕ್ಕಾದರೂ ಸರಕಾರಿ ಶಾಲೆಗಳಿಗೆ ಭೇಟಿ ನೀಡುತ್ತಾರೆ. 70 ದಶಕದಲ್ಲಿ ಹಳ್ಳಿಗಳಲ್ಲಿದ್ದು, ಸೇವೆ ಸಲ್ಲಿಸಿದ ಶಿಕ್ಷಕರಿಂದ ಈಗಿನ ಶಿಕ್ಷಕರು ಪ್ರೇರಿತರಾಗಬೇಕು. ಈ ಸವಾಲನ್ನು ಹೈದ್ರಾಬಾದ ಕರ್ನಾಟಕ ಭಾಗದಲ್ಲಿ ಯಾವ ಶಿಕ್ಷಕ ಮತ್ತು ಜನಪ್ರತನಿಧಿಗಳು ಸ್ವೀಕರಿಸುತ್ತಾರೋ ಕಾದು ನೋಡಬೇಕಾಗಿದೆ. ಸರ್ವ ಶಿಕ್ಷಣ ಅಭಿಯಾನ ಯೋಜನೆ ಅಡಿಯಲ್ಲಿ ಶಿಕ್ಷಣ ವಾರ್ತೆಯನ್ನು ಈ ರೀತಿ ಅನೇಕ ಆಯಾಮಗಳ ಬಗ್ಗೆ ಮಾರ್ಗದರ್ಶನ ನೀಡರುತ್ತಾರೆ.

**ಶಿಕ್ಷಣ ಸುಧಾರಣೆ ಹೇಗಿರಬೇಕು.**

ಶ್ರೀ ಎಸ್.ಆರ್. ಭಟ್ಟಕರ್ಕಿ ಅವರು ವಿಜಯ ಕರ್ನಾಟಕ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: 28/12/2009 ರ ಪತ್ರಿಕೆಯಲ್ಲಿ ಈ ರೀತಿ ಹೇಳಿಕೆ ನೀಡಿರುತ್ತಾರೆ. ಶಿಕ್ಷಣದ ಸುಧಾರಣೆ ಹೇಗಿರಬೇಕು. ಇಂದು ಶಿಕ್ಷಣದ ಕ್ರಮವೇ ಸರಿ ಇಲ್ಲ ವ್ಯವಸ್ಥೆ ಹಾಳಾಗಿ ಬಿಟ್ಟಿದೆ. ನಾವು ಓದುವ ಕ್ರಮಕ್ಕೂ ಇಂದಿನಿದಕ್ಕೂ ಜಗಜಾಂತರ ವ್ಯತ್ಯಾಸ, ಹೀಗೆ ಹತ್ತು ಹಲವು ವ್ಯಾಖ್ಯಾನಗಳು ಪುಂಖಾನುಪುಂಖವಾಗಿ ಚರ್ಚಿತವಾಗಿರುತ್ತವೆ.

ಒಂದೆಡೆ ಶಿಕ್ಷಕರು, ಪೋಷಕರು ಸರಿಯಾಗಿ ಮಕ್ಕಳಿಗೆ ಮಾಗದರ್ಶನ ನೀಡುತ್ತಿಲ್ಲ. ಶಿಕ್ಷಕರಿಗೆ ಎಲ್ಲ ಸೌಲಭ್ಯ ನೀಡುತ್ತಿದ್ದರೂ ಶಿಕ್ಷಣದ ವ್ಯವಸ್ಥೆ ಹಾಳಾಗಿದೆ ಎಂದು ಸಾರ್ವಜನಿಕರು. ಹೀಗೆ ಎಲ್ಲರು ದೂರುವವರೇ ಆದರೆ ವ್ಯವಸ್ಥೆ ಸರಿ ಹೋಗುವ ಮಾರ್ಗ ಹೇಗೆ? ಅದೊಂದು ಅಂತರಾಷ್ಟ್ರೀಯ ಮಟ್ಟದ ಶೈಕ್ಷಣಿಕ ಸಮಾವೇಶ ಅಲ್ಲಿ ಶಿಕ್ಷಣ ತಜ್ಞರೆಲ್ಲ ಒಂದೊಂದಾಗಿ ಪ್ರಶ್ನೆ ಕೇಳುತ್ತಿದ್ದರು. ಭಾರತದ ಪ್ರತಿಯೊಬ್ಬರು ಎಲ್ಲ ಶಿಕ್ಷಣ ತಜ್ಞರು ಗುಣಮಟ್ಟ ಹೆಚ್ಚಬೇಕು. ಶಿಕ್ಷಣ ನೀಡುವ ಕ್ರಮ ಚೆನ್ನಾಗಿರಬೇಕು ಎಂದು ಹೇಳುತ್ತಿರಿ ನಮ್ಮ ದೇಶದಲ್ಲಿ ನಾವು ಇದನ್ನೆಲ್ಲ ಮಾಡಲು ಸಿದ್ಧರಿದ್ದೇವೆ. ಆದರೆ ಮಕ್ಕಳನ್ನೂ ಶಾಲೆಗೆ ಕರೆತರಲು ಪೋಷಕರಿಗೆ ಮನದಟ್ಟು ಮಾಡಲು ಏನನ್ನೂ ಮಾಡಬೇಕು? ಎಂದು ಪ್ರಶ್ನಿಸಿದರು.

ಅದಕ್ಕೆ ಬಂದ ಉತ್ತರಗಳೇನು ಗೊತ್ತೇ? ಮಕ್ಕಳಿಗೆ ಊಟ ನೀಡಬೇಕು. ಮಕ್ಕಳಿಗೆ ಆಹಾರ ನೀಡಬೇಕು. ಪೌಷ್ಟಿಕ ಅಂಶ ನೀಡಬೇಕು. ಪೋಷಕರಿಗೆ ಅಕ್ಕಿ, ಗೋಧಿ ನೀಡಬೇಕು. ಮಕ್ಕಳು ದುಡಿಯುವ ಹಣಕ್ಕೆ ಸಮನಾಗಿ ದಿನಕ್ಕೆ ಇಷ್ಟೊಂದು ಹಣ ನೀಡಬೇಕು. ಮಕ್ಕಳನ್ನು ವಸತಿ ಶಾಲೆಯಲ್ಲಿ ಇಟ್ಟು ಓದಿಸಬೇಕು. ಹೀಗೆ ಹತ್ತು ಹಲವು ಬಗೆಯ ಉತ್ತರಗಳು.

ಆದರೆ ನಮ್ಮಲ್ಲಿ ಶಿಕ್ಷಣ ಇಲಾಖೆ ಈ ಎಲ್ಲವನ್ನೂ ಮಾಡಿ ನೋಡಿದೆ ಆದರೂ ಶಾಲೆಗೆ ಮಕ್ಕಳು ಸರಿಯಾಗಿ ಬರುತ್ತಿಲ್ಲ. ದಾಖಲಾತಿಯಲ್ಲಿರುವ ಮಕ್ಕಳು ಹಾಗೂ ಶಾಲೆಗೆ ಬರುವ ಮಕ್ಕಳ ಪ್ರಮಾಣದಲ್ಲಿ ಬಹಳ ವ್ಯತ್ಯಾಸ ಇದಕ್ಕೆ ಪರಿಹಾರ ಏನು?

ಅದಕ್ಕೂ ಅಲ್ಲಿತ್ತು ಸಿದ್ಧ ಉತ್ತರ ಮಕ್ಕಳ ಪೋಷಕರನ್ನು ಜಾಗೃತಗೊಳಿಸಬೇಕು. ಅವರಿಗೆ ಶಿಕ್ಷಣದ ಬಗ್ಗೆ ಮಾಹಿತಿ ನೀಡಬೇಕು. ಶಿಕ್ಷಣ ಇಲ್ಲದಿದ್ದರೆ ಆಗುವ ಅನಾಹುತಗಳ ಬಗ್ಗೆ ತಿಳಿಸಬೇಕು. ಇಲ್ಲದಿದ್ದರೆ ಅವರು ಏನೆಲ್ಲ ತೊಂದರೆ ಅನುಭವಿಸುತ್ತಾರೆ ಎಂಬ ಮಾಹಿತಿ ನೀಡಬೇಕು. ಎನ್ನುವ ಉತ್ತರ ಬಂತು ನಮ್ಮಲ್ಲಿ ಅವುಗಳನ್ನು ಮಾಡಿ ನೋಡಿಯಾಗಿದೆ. ಆದರೂ ಮಕ್ಕಳು ಶಾಲೆಗೆ ಬರುತ್ತಿಲ್ಲ ಬೇರೆ ಏನಾದರೂ ದಾರಿ ಇದೆಯೆ?

ಉತ್ತರಗಳೇನು ಕೊರತೆ ಇಲ್ಲ ಬಿದಿ ಶಾಲೆಯನ್ನು ಸುಂದರಗೊಳಿಸಬೇಕು. ಕಟ್ಟಡ ಚೆನ್ನಾಗಿರಬೇಕು. ಆಟದ ಮೂಲಕ ಮಕ್ಕಳಿಗೆ ಪಾಠ ಮಾಡಬೇಕು. ನವೀನ ತಂತ್ರಜ್ಞಾನವನ್ನು ಶಾಲೆಯಲ್ಲಿ ಅಳವಡಿಸಬೇಕು. ಶಾಲೆಯಲ್ಲಿನ ಕಲಿಕೆ ಆಕರ್ಷಕವಾಗಿದ್ದರೆ ಮಕ್ಕಳೂ ನಮ್ಮಲ್ಲಿ ದಾಖಲೆ ಯಾಗಿವೆ ಆದರೂ ಮಕ್ಕಳು ಶಾಲೆ ಕಡೆ ಬರುತ್ತಿಲ್ಲ. ಸಲಹೆ ಇನ್ನೂ ಮುಂದುವರಿಯಿತು ಪೋಷಕರನ್ನು ಮೊದಲು ಶಿಕ್ಷಣವಂತರಾಗಿಸಬೇಕು. ಅವರಿಗೆ ಶಿಕ್ಷಣ ನೀಡಲು ಹೊಸ ಕಾರ್ಯಕ್ರಮ ಆಗಬೇಕು. ಅವರಿಗೆ ನಾನಾ ಮಾಧ್ಯಮಗಳ ಮೂಲಕ ಶಿಕ್ಷಣ ನೀಡಿದರೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಾರೆ. ಎಂಬ ಅಭಿಪ್ರಾಯ ವ್ಯಕ್ತವಾಯಿತು.

ಇನ್ನಷ್ಟು ಸಲಹೆ ಬಂತು ಕೂಲಿ ಕೆಲಸಗಾರರು ಇರುವೆಡೆ ಶಾಲೆ ತೆರೆಯಿರಿ ಶಿಕ್ಷಣ ಕಡ್ಡಾಯ ಎನ್ನುವ ಕಾನೂನು ತನ್ನಿ ಮಕ್ಕಳಿಗೆ ಮನೆಗೆ ಹೋಗಿ ಪಾಠ ಮಾಡಿ ಎಂದೆಲ್ಲ ಸಲಹೆ ಬರತೊಡಗಿದಾಗ ನಮ್ಮ ಶಿಕ್ಷಣ ತಜ್ಞರು ಸಹನೆ ಕಳೆದುಕೊಂಡರು ಇವೆಲ್ಲವನ್ನೂ ಮಾಡಿದರೂ ನಮ್ಮಲ್ಲಿ ಶಾಲೆ ಬಿಡುವವರು ಇದ್ದೆ ಇದ್ದಾರೆ. ಶಾಲೆಗೆ ಬರದವರು ಒಂದೆಡೆಯಾದರೆ ಬಂದ ನಂತರ ಬಿಡುವವರು ಇನ್ನೊಂದೆಡೆ ನಾವೆಲ್ಲ ಇಲ್ಲಿ ಸೇರಿ ಸಭೆ

ಾಡಿ ಚರ್ಚಿಸುತ್ತಿದ್ದೇವೆ ಹೊರತು ನಿಜವಾಗಿ ಏನು ಮಾಡಬೇಕೆಂಬ ನಿಖರ ಉತ್ತರ ಸಿಗುತ್ತಿಲ್ಲ ನೀವು ೇಳುವ ಎಲ್ಲ ಕಾರ್ಯವನ್ನು ಮಾಡಿದರೂ ಶಾಲೆಗೆ ಕರೆತರಲು ಯಾವುದಾದರೂ ಮಾರ್ಗವಿದ್ದರೆ ಹೇಳಿ ಂದರು. ಶಿಕ್ಷಣ ವಾರ್ತೆ ಜನೆವರಿ 2010 ರ ಸಂಚಿಕೆಯಲ್ಲಿ ಶಿಕ್ಷಣ ಕುರಿತು ಶ್ರೀ ಹರ್ಬರ್ಟ್ ರೀಡ್ ಈ ೀತಿ ಹೇಳುತ್ತಾರೆ ಸಾಂಪ್ರದಾಯಿಕ ಶಿಕ್ಷಣದಡಿಯಲ್ಲಿ ಅಭ್ಯಾಸ ಮಾಡುವದರಿಂದ ಸಮಕಾಲಿನ ಪ್ರಜ್ಞೆ ಹಾಗೂ ೃಜನಶೀಲ ವ್ಯಕ್ತಿತ್ವಕ್ಕೆ ಹೊಡೆತ ಬೀಳುತ್ತದೆ ಹಾಗೂ ಮಗುವಿನ ಅಂತರ್ಯದ ಭಾವನೆಗಳನ್ನು ವ್ಯಕ್ತಗೊಳಿಸಲು ಿತ್ರಕಲೆಯು ಅಗತ್ಯ ಎಂಬುದನ್ನೂ ಹರ್ಬರ್ಟರೀಡ್ ತನ್ನ ಬರಹಗಳ ಮೂಲಕ ಪ್ರಸ್ತುತ ಪಡಿಸಿದರು. 930ರ ವೇಳೆಗೆ ಮಗುವಿನ ಕಲಿಕೆಯಲ್ಲಿ ಸೃಜನಶೀಲತೆಯ ಕೇಂದ್ರಿಕೃತವಾಗಿರಬೇಕು. ಕಲೆಯು ಮಾನವನ ್ರಗತಿಗೆ ಅಡಿಗಲ್ಲಾಗುತ್ತದೆ ಎಂದು ಪ್ರತಿಪಾದಿಸಿದ ಎಬ್ನೆಜರ ಕುಕ್ ಹಾಗೂ ಸೆಜೆಕ್ ರವರ ವಿಚಾರಧಾರೆಯೂ ವರ ವಿಚಾರ ಧಾರೆಗೆ ಪೂರಕವಾಯಿತು.

ಅಂದಿನ ದಿನಗಳಲ್ಲಿ ಇಂಗ್ಲೆಂಡನಲ್ಲಿ ಕಲಿಸುತ್ತಿದ್ದ ಸಾಂಪ್ರದಾಯಿಕ ಕಲಾ ಶಿಕ್ಷಣ 50 ವರ್ಷಗಳಷ್ಟು ಳೆಯದಾಗಿದ್ದು, ಅದೇ ಗಟ್ಟಿಗೊಂಡಿತ್ತು. ಇದರ ಪೂರ್ಣ ಜವಾಬ್ದಾರಿ ನ್ಯಾಷನಲ್ ಸೋಸೈಟಿ ಆಪ್ ಆರ್ಟ ಾಸ್ಟರ್ಸ ಹೊತ್ತಿತ್ತು. ಕಲಾ ಶಿಕ್ಷಣದ ಗುಣಮಟ್ಟ ಪಠ್ಯಕ್ರಮ ಕಲಾ ಶಿಕ್ಷಕರ ತರಬೇತಿ ಹಾಗೂ ಅಭಿವೃದ್ಧಿಯ ವಾಬ್ದಾರಿ ಪೂರ್ಣವಾಗಿ NSAM ಮೇಲಿತ್ತು. ಈ ಸಂಸ್ಥೆಯು ಚಿತ್ರಕಲೆಯನ್ನೂ ಶಿಕ್ಷಣದಲ್ಲಿ ಅಳವಡಿಸಿ ದನ್ನೂ ಕಾಯ್ದುಕೊಂಡು ಬಂದಿಲ್ಲದೆ ವಿಕ್ಟೋರಿಯನ್ ಶೈಲಿಯಲ್ಲಿ ಕಾಯ್ದುಕೊಳ್ಳುವುದು ಮತ್ತು ಾಸ್ತ್ರಿಯತೆಯನ್ನು ಕಾಯ್ದುಕೊಳ್ಳುತ್ತಾ ಯಥಾ ನಕಲು ನೆರಳು ಬೆಳಕಿನ (Shad and Night) ಅಧ್ಯಯನ ಾಗೂ ತದ್ರೂಪ್ ಕಲೆಗೆ ಹೆಚ್ಚಿನ ಆದ್ಯತೆ ನೀಡಿತ್ತು. ಇದಕ್ಕೆ ತದ್ವಿರುದ್ಧವಾಗಿ ಆರ್ಟ ಟೀಚರ್ಸ ಗೆಲ್ಡ್ (ATG) ುಕ್ಕಳಲ್ಲಿ ಶಾಸ್ತ್ರೀಯ ಸಿದ್ಧತೆ ಹಾಗೂ ಕಲಿಕೆಗೆ ತಕ್ಕ ವಯಸ್ಸಿರುವುದಿಲ್ಲ ಮತ್ತು ತದ್ರೂಪಿ ಕಲಿಕೆಯಿಂದ ಿರ್ಮಾನೆಗಳ ವಸ್ತು ತಯಾರಿಕೆಗೆ ಅನುಕೂಲವಾಗಬಹುದೇ ಹೊರತು ಅದು ಮಗುವಿಗೆ ಮನ:ಶಾಸ್ತ್ರೀಯ ಟ್ಟಿನಲ್ಲಿ ಸೃಜನಶೀಲತೆಯನ್ನು ಕಟ್ಟಿಕೊಡುವುದಿಲ್ಲ ಎಂದು ಪ್ರತಿಪಾದಿಸಿದ ಇದು ಅಂದಿನ ನವ್ಯ ಶೈಲಿಯ ಲಾವಿದರ ಹೊಸ ಚಿಂತನೆಗೆ ಪೂರಕವಾಗಿದ್ದು ರೀಡ್ ಅಂತಹವರ ಆಯೋಜನೆಗಳಿಗೆ ಬಲ ತಂದಿತ್ತು. ಈ ದಲಾವಣೆಯಿಂದ ಹೊಸ ಯೋಜನೆಗಳು ಮಗುವಿನ ಕಲಿಕೆಯಲ್ಲಿ ಕಲೆಯು ಸ್ವತಂತ್ರ ಅಭಿವ್ಯಕ್ತಿಗೆ ಅವಕಾಶ ೀಡಿ ಸಹಜವಾಗಿ ಮಕ್ಕಳ ಕಲಿಕೆಯಲ್ಲಿ ಹೊಸ ಅಧ್ಯಯ ಆರಂಭವಾಯಿತು.

1948ರಲ್ಲಿ ರೀಡ್‌ರವರು ಈ ವಿಚಾರಗಳನ್ನು ಅಧ್ಯಯನಕ್ಕೊಳ ಪಡಿಸಿದವರು ಶ್ರೀಮತಿ ಮರಿನ್ ಿಚರ್ಡಸನ್ ಅವರು ಮಕ್ಕಳ ಮೇಲೆ ನಡೆಸಿದ ಅಸಂಖ್ಯೆ ಪ್ರಯೋಗಗಳು ಮಕ್ಕಳಲ್ಲಿ ಸ್ವಂತ ಆಲೋಚನೆ ೊಸ ಹೊಸ ಆವಿಷ್ಕಾರಗಳು ವೃತ್ತಿಪರ ಅಭಿಯೊಕ್ತಿಯೊಂದಿಗೆ ಮಕ್ಕಳಲ್ಲಿ ಸುಪ್ತವಾಗಿರುವ ೃಜನಶೀಲತೆಯನ್ನು ಹುರಿದುಂಬಿಸಿದರೆ ಅವರ ಆಲೋಚನೆಗಳು ಮತ್ತು ಯೋಜನೆಗಳು ತಮಗಿಷ್ಟ ಬಂದಂತೆ ೆಳೆಯುತ್ತದೆ. ಎಂಬುದನ್ನು ಈ ಪ್ರಯೋಗ ಸಾಬಿತುಪಡಿಸಿತು. ಹಾಗಾಗಿ ಸಾಲಪ್ರಧಾಯಿಕತೆಯಿಂದ ೊರಬಂದು ಮಗುವಿನಲ್ಲಿ ಆಗಲೇ ಸುಪ್ತವಾಗಿರುವ ಭಾವನೆಗಳನ್ನು ವ್ಯಕ್ತಗೊಳಿಸುವ ಸ್ವಾತಂತ್ರ್ಯ ಸೂಕ್ಷ್ಮ ಿಕೆಯಿಂದ ಅವರು ಸಮಾಜದ ಮುಂಚೂಣಿಯಲ್ಲಿರುತ್ತಾರೆ ಎಂಬುದನ್ನೂ ಸಾಬೀತು ಮಾಡಿದರು.

ರೀಡ್‌ರವರು ತಮ್ಮ ಕಲಾಕೇಂದ್ರಿತ ಬರಹಗಳಲ್ಲಿ ಮಗುವಿನ ಚಿತ್ರಗಳಲ್ಲಿ ಕಲೆಯು ಮೊದಲು ಪರಿಧಿಯಾಗಿ ಆ ಮಗುವಿನ ಆಂತರ್ಯದ ಒಳನೋಟಗಳನ್ನು ವ್ಯಾಖ್ಯಾನಿಸುತ್ತದೆ. ಹಾಗೂ ಆತನನ್ನೂ ಸಮಾಜದ ಅಗ್ರ ಸ್ಥಾನದಲ್ಲಿರಿಸುತ್ತದೆ ಎಂದು ತಿಳಿಸುತ್ತಾರೆ.

ಮಗುವಿನ ಚಿತ್ರಗಳಲ್ಲಿ ಅದರ ಮೂಲ ಪ್ರವೃತ್ತಿ ಹಾಗೂ ಪರಿಸರದ ಗಾಢ ಪ್ರಭಾವವಿರುತ್ತದೆ. ಅದು ತನ್ನ ವ್ಯಕ್ತಿತ್ವದ ಅಭಿವ್ಯಕ್ತಿಯ ತಾಲೀಮು ನಡೆಸಿರುತ್ತದೆ ಎನ್ನುತ್ತಾರೆ. ರೀಡ್ ಸಾಂಪ್ರಾದಾಯಿಕ ಕಲಿಕೆಯಲ್ಲಿ ಅನುಕರಣೆಯಿದ್ದರೆ ಮುಕ್ತ ಅಭಿವ್ಯಕ್ತಿಯಲ್ಲಿ ಅದು ತನ್ನ ಪರಿಸರದ ನೈಜತೆಯನ್ನು ತನ್ನದೇ ಶೈಲಿಯಲ್ಲಿ ಚಿತ್ರಿಸುತ್ತದೆ. ಹಾಗಾಗಿ ಈ ತಾಲೀಮು ಪ್ರಕೃತಿ ಅಂಚಿನ ಪ್ರಾರಂಭಿಕ ಕಲಿಕೆಯಾಗಿ ಮಾರ್ಪಡುತ್ತದೆ. ತನ್ನ ಜಾಣ್ಣರಿಕೆಯ ಪರಿಧಿಯನ್ನು ವಿಸ್ತಿರಿಸಿಕೊಳ್ಳುತ್ತಾ ಸಮಾಜದಲ್ಲಿ ಅಗ್ರ ಸ್ಥಾನ ನಿಲ್ಲುತ್ತದೆ ಎಂದು ರೀಡ್ ಹೇಳುತ್ತಾರೆ. ರೀಡ್ ತನ್ನ Art and Society ಯಲ್ಲಿ ಹೇಳುವಂತೆ ಒಂದು ಸಮಾಜದ ನಾಗರೀಕ ಹಾಗೂ ಸಾಂಸ್ಕೃತಿಕವಾಗಿ ಮುಂದೆ ಬರಬೇಕೆಂದರೆ ಇಂತಹ ಸೃಜನಶೀಲ ಜನಾಂಗದ ಅಗತ್ಯವಿದೆ ಇವರೇ ಆ ದೇಶದ ಭದ್ರವಾದ ಆಧಾರ ಸ್ತಂಭಗಳಾಗುತ್ತಾರೆಂದು ತಿಳಿಸಿದರು.

ಇಂಥ ಮಹತ್ವದ ಆಶಯಗಳೊಂದಿಗೆ ಕಲೆಯನ್ನು ಕಲಿಯಲು ಮತ್ತು ಶಿಕ್ಷಣದಲ್ಲಿ ಅಳವಡಿಸಲು ರೀಡ್ ಸೂಚಿಸುತ್ತಾರೆ. ಇದು ಬಹುದೊಡ್ಡ ನಿಧಿಯಾಗಿ ನಾಳಿನ ಸಮಾಜಕ್ಕೆ ಸರಿಯಾದ ನ್ಯಾಯ ಒದಗಿಸಬಲ್ಲದು ಹಾಗಾಗಿ ನಾಳಿನ ನಾಡಿಗೆ ಚಿತ್ರಕಲಾಕಾರರು, ಶಿಲ್ಪಿಗಳು, ಡ್ರಾಫ್ಟಮನ್‌ಗಳು, ಆಭರಣ, ವಸ್ತ್ರ, ಕಮ್ಮಾರಿಕೆ, ಕರಕುಶಲ, ಇಂಜಿನಿಯರ, ವೈದ್ಯ ಮುಂತಾದ ಇಡೀ ಸಮಾಜದ ಅಗತ್ಯಗಳನ್ನೂ ಪೊರೈಸುವ ಸೃಜನಶೀಲ ಜನಾಂಗವೊಂದರ ಸೃಷ್ಟಿ ಸಾರ್ವಜನಿಕ ಶಿಕ್ಷಣದಲ್ಲಿ ಚಿತ್ರಕಲೆಯನ್ನು ಕಡ್ಡಾಯ ಮಾಡಿದಾಗ ಮಾತ್ರ ಸಾಧ್ಯ ಎಂದು ರೀಡ್ ಸಾರಿದರು. ಚಿತ್ರಕಲಾ ಶಿಕ್ಷಕರ ಗುರುತರವಾದ ಜವಾಬ್ದಾರಿಯೆಂದರೆ ಸೃಜನಶೀಲ ಪ್ರತಿಭೆಗಳನ್ನು ಬೆಳೆಸಿ ಪ್ರಸಿದ್ಧಿಗೆ ತರುವುದು ಹಾಗೂ ಕಲಾಭಿರುಚಿಯನ್ನು ಬೆಳೆಸುತ್ತಾ ಪರಸ್ಪರ ಮೆಚ್ಚಿ ಕೊಳ್ಳುವಿಕೆ ಸೌಂದರ್ಯಭಿವ್ಯಕ್ತಿ, ಸ್ವಚ್ಛತೆ ಹಾಗೂ ಸೂಕ್ಷ್ಮಾವಲೋಕನದಂತಹ ವಿಶೇಷಗಳನ್ನು ಕಲೆಯ ಮೂಲಕ ಮಕ್ಕಳಿಗೆ ತಿಳಿಸಬೇಕಾಗಿದೆ ಎಂದು ಹೇಳಿದರು. ಪ್ರತಿ ಮಗುವು ತನ್ನದೆ ಆದ ವಿಶೇಷ ಆಭಿವ್ಯಕ್ತಿ ಮಾಧ್ಯಮವನ್ನು ಹೊಂದಿರುತ್ತದೆಯಲ್ಲದೆ ಎಲ್ಲಾ ಮಕ್ಕಳು ಹುಟ್ಟುವಾಗಲೆ ಸೃಜನಶೀಲರಾಗಿರುತ್ತಾರೆ. ಆದರೆ ಅದಕ್ಕೆ ಪ್ರೋತ್ಸಾಹ ನೀಡಿ ಬೆಳೆಸುವ ವಾತಾವರಣ ನಿರ್ಮಾಣವಾಗಬೇಕು. ಆಗ ಮಾತ್ರ ಸುಸಂಸ್ಕೃತ ಸಮಾಜ ಅಥವಾ ಜನಾಂಗ ಸೃಷ್ಟಿಯಾಗಲು ಸಾಧ್ಯ ಹಾಗೂ ಸಮಾಜದ ಸಮಗ್ರ ಬೆಳವಣಿಗೆ ಹಾಗೂ ಹಿತಕ್ಕೆ ಇದು ಸಹಕಾರಿಯಾಗುತ್ತದೆಯೆಂದು ಸಾರಿದ ರೀಡ್ 19 ಮತ್ತು 20 ನೇ ಶತಮಾನದ ಕಲಾ ಶಿಕ್ಷಣಕ್ಕೆ ಮುನ್ನುಡಿ ಬರೆದರು.

ಹರ್ಬರ್ಟ ರೀಡ್ ಇನ್ನು ಮುಂದೆ ಹೋಗಿ ಮಕ್ಕಳ ಚಿತ್ರ ಸಂಗ್ರಹಿಸಿ ಚಿತ್ರ ಕಲಾ ಪ್ರದರ್ಶನ ಏರ್ಪಡಿಸಿ ಅಲ್ಲಿ ಮಕ್ಕಳ ಚಿತ್ರಗಳನ್ನು ಮನೋ ವೈಜ್ಞಾನಿಕವಾಗಿ ವಿಶ್ಲೇಷಿದರು. 1943 ರಲ್ಲಿ ನಡೆಸಿದ ಇಂತಹ ಒಂದು ಪ್ರದರ್ಶನದಲ್ಲಿ ಐದು ವರ್ಷದ ಬಾಲಕಿಯೊಬ್ಬಳು ಭೂಮಿಯ ಸುತ್ತ ಸುತ್ತಿಕೊಂಡು ಹೆಬ್ಬಾವು ಹಾಗೂ ದೋಣಿಯ ಚಿತ್ರದ ಬಗ್ಗೆ ಬರೆಯುತ್ತಾ ಇದೊಂದು ಮಂಡಲದ ಚಿತ್ರ ಇದು ಮನುಕುಲದ ಮಾನಸಿಕ ಕಟ್ಟಿನ ಸಂಕೇತವಾಗಿ ಚಿತ್ರಿಸಲಾಗಿದೆ ಮನುಕುಲದ ಅತ್ಯಂತ ಹಳೆಯ ಸಾಂಕೇತಿಕ ಚಿತ್ರವನ್ನು ಹೋಲುತ್ತದೆ.

ಆದಿಮ ಸಂಸ್ಕೃತಿಯ ಮೂಲ ರೂಪದಲ್ಲಿದೆ ಎಂದು ವಿಶ್ಲೇಷಿಸಿದರು. ಮಗುವಿಗೆ ತಾನೇನು ಚಿತ್ರಿಸಿದೆ ಎಂಬುದರ ಬಗ್ಗೆ ಅರಿವಿರುವುದಿಲ್ಲ. ಆದರೆ ಅದು ಸಂಪೂರ್ಣವಾಗಿ ಪುರಾತನ ಕಾಲದ ಮನುಷ್ಯ ಚಿತ್ರಗಳ ಹೋಲಿಕೆಯಾಗಿರುತ್ತದೆ ಎಂದು ಸೂಚಿಸಿದರು ಇಂತಹ ಪ್ರಯೋಗಗಳಿರುತ್ತವೆ ಎಂದು ಸೂಚಿಸಿದರು. ಇಂತಹ ಪ್ರಯೋಗಗಳಿಂದ ಅನೇಕ ವಿದ್ವಾಂಸರು ಪ್ರಭಾವಿತಗೊಂಡು ಕೆಲವರು ಇಂತಹ ಅಧ್ಯಯನಗಳನ್ನು ಗಂಭೀರವಾಗಿ ಕೈಗೊಂಡರು ಅವರಲ್ಲಿ ಪ್ರಮುಖರಾದರು ಕಾರ್ಲ ಗು ಸ್ರೋವ್ ಜಂಗ ಈತ ತನ್ನ ಅಧ್ಯಯನ ಕಾಲದಲ್ಲಿ ಮಕ್ಕಳ ಚಿತ್ರಗಳಲ್ಲಿ ಅದ್ಭುತವಾದ ಸಂಕೇತಗಳಿರುತ್ತದೆ. ಎಂಬುದನ್ನು ಮನಗಂಡರು.

ಕಲೆಯು ಶಿಕ್ಷಣದ (Education through Art) ಅವಿಭಾಜ್ಯ ಅಂಗವಾಗಬೇಕೆಂದು ಸಾರಿದ ಹರ್ಬರ್ಟ ರೀಡ್ ಮಕ್ಕಳ ವಿನೋವಿಕಾಸ ಮತ್ತು ಕಲೆಗೆ ಹಾಗೂ ಸಮಾಜದ ಬಳಕೆಗೆ ಸೇತುವೆ ಕಟ್ಟಿ ಪ್ರಾತ:ಸ್ಮರಣೀಯರಾಗಿದ್ದಾರೆ ಇಂದಿಗೂ ಹರ್ಬರ್ಟನ ರೀಡ್ ಅವರ ಆಲೋಚನೆ ಹಾಗೂ ಅಭಿಪ್ರಾಯಗಳು ಪ್ರಸ್ತುತವಾಗುತ್ತವೆ.

ಒಟ್ಟಿನಲ್ಲಿ ಬೀದರ ಜಿಲ್ಲೆಯಲ್ಲಿನ ಐದು ತಾಲ್ಲೂಕುಗಳಲ್ಲಿನ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಕರ ಪಾಠ ಬೋಧನೆ, ಶಿಕ್ಷಕರ ಹಾಜರಾತಿ, ಪಾಠ ಬೊಧನೆ, ಪಾಠೋಪಕರಣಗಳ ಬಳಕೆ ನಲಿ-ಕಲಿ ಆಧಾರಿತ ಪಾಠ ಬೋಧನೆ ಮಕ್ಕಳ ದಾಖಲಾತಿ, ಹಾಜರಾತಿ, ಮಕ್ಕಳ ಕಲಿಕೆ ಶಾಲೆಗಳಲ್ಲಿನ ಮೂಲಭೂತ ಸೌಲಭ್ಯ ಸರ್ಕಾರದಿಂದ ಬಂದ ಅನುದಾನದ ಬಳಕೆ SDMC ಯವರ ಸಹಕಾರ, ಪಾಲಕರು ತಮ್ಮ ಮಕ್ಕಳ ಬಗ್ಗೆ ಆಸಕ್ತಿ, ಸಾರ್ವಜನಿಕರ ಸಹಕಾರ ಇಲಾಖೆಯಿಂದ ಸಿಗುತ್ತಿರುವ ಸೌಲಭ್ಯಗಳಲ್ಲಿ ಮಧ್ಯಾಹ್ನ ಬಿಸಿಯೂಟ, ಪಠ್ಯಪುಸ್ತಕ ವಿತರಣೆ ಶಿಷ್ಯವೇತನ, ನೋಟಬುಕ್, ಬ್ಯಾಗ್ ಹಂಚಿಕೆ ಇತ್ಯಾದಿ ವಿಷಯಗಳು ಸಮಗ್ರವಾದ ಮಾಹಿತಿ ಸಂಗ್ರಹಿಸಿ ಬರೆಯಲಾಗಿದೆ. ಹಾಗೂ ಶಾಲೆಗೆ ದಾಖಲಾದ ಮಕ್ಕಳು ಗೈರು ಹಾಜರೀರಲು ಕಾರಣ, ಪಾಲಕರ ಬೇಜವಾಬ್ದಾರಿತನ ಪಾಲಕರ ಸಮಸ್ಯೆ, ಬಡತನ ಇತ್ಯಾದಿ ವಿಷಯಗಳು ಸಂಗ್ರಹಿಸಿ ಬರೆಯಲಾಗಿದೆ.

ಸರ್ಕಾರದಿಂದ ಸಿಗುತ್ತಿರುವ ಸೌಲಭ್ಯಗಳ ಬಳಕೆ ಮಾಡುವುದು, ಶಿಕ್ಷಕರು ಆಕರ್ಷಕ ಪಾಠ ಬೋಧನೆ ಮಾಡಿ ಗುಣಮಟ್ಟ ಶಿಕ್ಷಣ ನೀಡುವುದು, ಗೈರು ಹಾಜರಿರುವ ಮಕ್ಕಳಿಗೆ ಮುಖ್ಯವಾಹಿನಿಗೆ ತರುವುದು, ಶಾಲೆ ಆಕರ್ಷಣೆಯಾಗಿದ್ದು ಮಕ್ಕಳು ಶಾಲೆಗೆ ಖುಷಿಯಿಂದ ನಗುತ ಬರುವಂತೆ, ಆಕರ್ಷಣೆಯಾಗಿರಲು ಸಲಹೆ ಶಿಕ್ಷಣ ತಜ್ಞರ, ಸಾಹಿತಿಗಳ ನುಡಿಮುತ್ತುಗಳೊಂದಿಗೆ ಸಂಗ್ರಹಿಸಿ ಬರೆಯಲಾಗಿದೆ.

ಹೀಗೆ ಬೀದರ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಶೈಕ್ಷಣಿಕ ಗುಣಮಟ್ಟ ಒಂದು ಅಧ್ಯಯನದಲ್ಲಿ ಈ ಮೇಲಿನಂತೆ ಸುಧಾರಣೆಗಾಗಿ ಸಮಗ್ರವಾದ ಮಾಹಿತಿ ಸಂಗ್ರಹಿಸಿ ಶೈಕ್ಷಣಿಕವಾಗಿ ಬೀದರ ಜಿಲ್ಲೆಯ ಐದು ತಾಲ್ಲೂಕುಗಳು ಸುಧಾರಿಸಲು ಪ್ರಾಮಾಣಿಕ ಪ್ರಯತ್ನವಿದೆ ಎಂದು ಭಾವಿಸಿದ್ದೇನೆ.

## ಆಧಾರ ಗ್ರಂಥಗಳು


ಎನ್ ಹೆಚ್ ನಾಗೂರ : ಬೀದರಿನ ಐತಿಹಾಸಿಕ ಬೆಡಗು ಹಾಗೂ ಬೀದರ ಜಿಲ್ಲೆಯ ಶೈಕ್ಷಣಿಕ ಅಂಕಿ ಅಂಶಗಳು

ಎಸ್.ಎಂ.ಜನವಾಡಕರ್ : ಗುಣಮಟ್ಟ ಶಿಕ್ಷಣದ ಅರ್ಥ

ಚಂದ್ರಪ್ಪಾ ಹೆಬ್ಬಾಳಕರ್ : ನೋಡಬನ್ನಿ ಬೀದರ ಜಿಲ್ಲೆ

ಎಸ್.ಬಿ.ಕುಚುಬಾಳ : ಸರ್ವ ಶಿಕ್ಷಣ ಅಭಿಯಾನ ಜಿಲ್ಲೆಗೆ ಒಂದು ವರದಾನ

ವೀನೋದ ಕ್ಷಿನ್ : ಶಿಕ್ಷಣ ಮಸೂದೆ 2008

ಬಿ.ಗಂಗಾಧಾರ ಮೂರ್ತಿ : ಮಕ್ಕಳ ಮೂಲಭೂತ ಹಕ್ಕುಗಳು

ಹರ್ಷ ಗುಪ್ತಾ ಮಾನ್ಯ ಜಿಲ್ಲಾಧಿಕಾರಿಗಳು : ಬಾಲಕಾರ್ಮಿಕ ಪದ್ಧತಿ ನಿಲ್ಲಿಸಿ ಮಕ್ಕಳನ್ನು ಶಾಲೆಗೆ ಕಳುಹಿಸಿ ಹಾಗೂ ಅಸರ ರಿಪೋರ್ಟ

ಅರವಿಂದ ಚೊಕ್ಕಾಡಿ : ಮಕ್ಕಳಿಗೆ ಮೌಲ್ಯ ಶಿಕ್ಷಣ ಹೇಗೆ ರೂಢಿಸಿಕೊಂಡೇನು

ಡಾ: ನಿರಂಜನಾರಾಧ್ಯ ವಿ.ಪಿ. ಸಂಶೋಧನಾಕಾರಿ : ಗುಣಾತ್ಮಕ

. ಸಿ.ವಿ.ಮ್ಯಾಗೇರಿ : ಶೈಕ್ಷಣಿಕ ನಿರ್ವಹಣೆ

ಹಮೀದ ಮಂಜೇಶ್ವರ : ದಾರಿ ಬುತ್ತಿ

. ಅರ್ಜುನದೇವ : ಭಾರತದಲ್ಲಿ ಶಿಕ್ಷಣ ನೀತಿ

. ಆಯ್.ಎಸ್.ಬಿದರಿಯವರ : ಪ್ರಾಚೀನ ಭಾರತದ ಶಿಕ್ಷಣದ ಕೃತಿ

. ಕೆ. ಗುರುರಾವ : ಶಾಲೆ ಮತ್ತು ಸಮುದಾಯ

. ವಸಂತ ಕುಷ್ಟಗಿ : ಮುಕ್ತ ಶಿಕ್ಷಣ

. ಚಿದ್ರಿ ಶಂಕರಯ್ಯಾ ಸ್ವಾಮಿ : ಈಶಾನ್ಯ ವಲಯದ ಸಾಧನೆಯ ನೋಟ

. ಡಾ: ಜಿ.ಬಿ.ವಿಸಾಜಿ : ಬೆಳ್ಳಿ ಚುಕ್ಕಿ

. ಹೆಚ್.ಸಿ.ಖಡ್ಕೆ : ಬೀದರ ಜಿಲ್ಲೆಯ ಕನ್ನಡ ಸಾಹಿತ್ಯ

. ಹರ್ಡೆಕರ ಮಂಜಪ್ಪ : ಶಿಕ್ಷಣವೆಂದರೆ ಮನಸ್ಸು, ದೇಹ, ಬುದ್ಧಿಗಳಿಗೆ ದೊರೆಯುವ ಸಂಸ್ಕಾರ

). ಡಾ: ರಾಧಾ ಕೃಷ್ಣನ್ : ಪುಸ್ತಕ ಹಾಗೂ ಶಿಕ್ಷಣ

| | |
|---|---|
| ಮ.ಘ.ಚ.ಡಾ: ಚನ್ನಬಸವ ಪಟ್ಟದೇವರು | : ಶಾಲೆ ಹೊರಗೆ ಉರ್ದು ಬೊರ್ಡ ಹಾಕಿ ಕನ್ನಡ ಕಲಿಸಿದರು |
| ಬಿ.ಆರ್.ಅಂಬೇಡ್ಕರ್ | : ಶಿಕ್ಷಣ ಹುಲಿಯ ಹಾಲು ಇದ್ದಂತೆ |
| ಬಸವಲಿಂಗ ಪಟ್ಟದೇವರು | : ಶಿಕ್ಷಕ ಶಿಲ್ಪಿ |
| ಎಸ್.ಎಸ್.ಹಿರೇಮಠ | : ಜನೋಪಯುಕ್ತ ಕಾರ್ಯಕ್ರಮ |
| ಡಿ. ಜಗನ್ನಾಥರಾವ | : ಈಶಾನ್ಯವಲಯಕ್ಕೆ ಸರ್ಕಾರದಿಂದ ಬಂದ ಅನುದಾನ ಹಾಗೂ ಚಿಣ್ಣರ ಅಂಗಳ, ಕೇಳಿ ಕಲಿ ಕಾರ್ಯಕ್ರಮ |
| ಟಿ.ಜಿ.ಹಾದಿಮನಿ | : ಕಲಿಕಾ ಗೋಪುರ |
| ರತ್ನಮ್ಮಾ ಲಾಖೆ | : ಮಾನವ ಶಿಕ್ಷಣ ನಡೆದು ಬಂದ ದಾರಿ |
| ಸಿದ್ರಾಮ ವ್ಹಿ. ಗಡವಂತಿ | : ಶಿಕ್ಷಕ ಮತ್ತು ಸಮಾಜ |
| ಎಸ್.ಎಸ್.ಮಠ | : ಶಾಲೆಗಳಲ್ಲಿ ಹಾಜರಾತಿ ಉತ್ತಮ ಪಡಿಸುವ ಕುರಿತು |
| ಬಿ.ಆರ್.ಕೊಂಡಾ | : ಬೀದರ ಜಿಲ್ಲೆ ಶಿಕ್ಷಣಾಭಿವೃದ್ಧಿ ಒಂದು ನೋಟ |
| ಸಿ.ಹೆಚ್. ಕೃಷ್ಣಾಶಾಸ್ತ್ರಿ | : ಗುಣಮಟ್ಟದ ಶಿಕ್ಷಣ ಕುರಿತು |
| ಎಸ್.ಎಸ್.ದೊರೆಸ್ವಾಮಿ | : ಶಿಕ್ಷಣದ ಬಗೆಗೆ ಗಾಂಧೀಜಿ |
| ಎಚ್.ಬಿ.ಚಂದ್ರಶೇಖರ್ | : ಸರ್ವರಿಗೂ ಶಿಕ್ಷಣದ ಗುರಿ ಸಾಧನೆ ಗಗನ ಕುಸುಮವಲ್ಲ |
| ಎಸ್.ಆರ್.ಭಟಕರ್ಕಿ | : ಶಿಕ್ಷಣ ಸುಧಾರಣೆ ಹೇಗಿರಬೇಕು |
| ಹರ್ಬರ್ಟರೀಡ್ | : ಸಾಂಪ್ರಾದಾಯಿಕ ಶಿಕ್ಷಣ |
| ಶಶಿಕಾಂತ ಮರ್ತುಳೆ | : ಶಿಕ್ಷಕರು, ಮಕ್ಕಳು ಹಾಗೂ ಪಾಲಕರ ಪಾತ್ರ |
| ಬಿ.ವೆಂಕಟಸಿಂಗ | : ಗುಣಮಟ್ಟ ಶಿಕ್ಷಣ ನೀಡಲು ಶಿಕ್ಷಕರಲ್ಲಿ ಬದ್ಧತೆಯ ಕೊರತೆ |

# ಪ್ರಶ್ನಾವಳಿ

**ಸೂಚನೆ:-**

ಮಾನ್ಯ, ಶಿಕ್ಷಕ ಬಂಧುಗಳೇ ನಾನು ನನ್ನ (ಪಿ.ಎಚ್‌ಡಿ.) ಸಂಶೋಧನೆಯನ್ನು ಪೂರ್ಣಗೊಳಿಸಲು ಅವಶ್ಯಕವಾಗಿರುವ ಪ್ರಬಂಧವನ್ನು ಪೂರ್ಣಗೊಳಿಸಲು ತಮ್ಮ ಶಾಲೆಗೆ ಸಂಬಂಧಿಸಿದಂತೆ ಕೆಲವು ಮಾಹಿತಿಯನ್ನು ಸಂಗ್ರಹಿಸಲು ಬಂದಿದ್ದೇನೆ. ಈ ಮಾಹಿತಿಯು ತಮ್ಮನ್ನಾಗಲಿ ಅಥವಾ ತಮ್ಮ ಶಾಲೆಗೆ ಆಗಲಿ ಯಾವುದೇ ರೀತಿಯ ತೊಂದರೆಯನ್ನುಂಟು ಮಾಡಲಾರದು. ಆದ್ದರಿಂದ ಕೆಳಗೆ ಸೂಚಿಸಿದ ತಪಶೀಲು ಪಟ್ಟಿಯಲ್ಲಿರುವ ಪ್ರತಿ ಪ್ರಶ್ನೆಗಳಿಗೆ ಸೂಕ್ತವೆನಿಸಿದ ಉತ್ತರಕ್ಕೆ ಸರಿ ಚಿನ್ಹೆಯ ಮೂಲಕ ಹಾಕಿ ಗುರುತಿಸಿ ಮಾಹಿತಿ ನೀಡಬೇಕೆಂದು ಕೋರುತ್ತೇನೆ.

1. ಶಾಲೆಯ ಹೆಸರು:
2. ಸರ್ಕಾರಿ: ಖಾಸಗಿ ಪ್ರಾಥಮಿಕ ಶಾಲೆ:
3. ವಿವರ ನೀಡುವವರ ಹೆಸರು ಮತ್ತು ಪದನಾಮ:
4. ದಿನಾಂಕ:

**1. ಶೈಕ್ಷಣಿಕ ಸೌಲಭ್ಯಗಳು**

1. ನಿಮ್ಮ ಶಾಲೆಯಲ್ಲಿ ಎಷ್ಟು ಮಕ್ಕಳಿಗೆ ಶಿಷ್ಯವೇತನ ನಿಡುತ್ತೀರಿ?
   - ಅ) ಎಲ್ಲಾ ಮಕ್ಕಳಿಗೆ ( )
   - ಆ) ಬಡಮಕ್ಕಳಿಗೆ ಮಾತ್ರ ( )
   - ಇ) ವಿದ್ಯಾವಂತ ಮಕ್ಕಳಿಗೆ ( )
   - ಈ) ಯಾರಿಗೂ ಇಲ್ಲ ( )
2. ನಿಮ್ಮ ಶಾಲೆಯ ಮಕ್ಕಳಿಗೆ ಹಾಸ್ಟೆಲ್ ಸೌಲಭ್ಯ ಹೊಂದಿದೆಯೇ?
   - ಅ) ಸಂಪೂರ್ಣ ಹೊಂದಿದೆ ( )
   - ಆ) ಕೇವಲ ವಸತಿ ಮತ್ತು ಊಟದ ಸೌಲಭ್ಯ. ( )
   - ಇ) ಕೇವಲ ಊಟದ ಸೌಲಭ್ಯ ( )
   - ಈ) ಹೊಂದಿಲ್ಲ ( )
3. ನಿಮ್ಮ ಶಾಲೆಗೆ ಬರುವ ಮಕ್ಕಳಿಗೆ ಶಾಲೆಗೆ ಕಟ್ಟುವ ಫೀ ಪಡೆಯುವ ರೀತಿ ಹೇಗಿದೆ?
   - ಅ) ಯಾವುದೇ ಫೀಯನ್ನು ಪಡೆಯುವುದಿಲ್ಲ. ( )
   - ಆ) ಕೇವಲ ಟ್ಯೂಷನ್ ಫೀಯನ್ನು ಮಾತ್ರ ಪಡೆಯುತ್ತೇವೆ ( )
   - ಇ) ಟ್ಯೂಷೆನ ಫೀ ಹಾಗೂ ಪರೀಕ್ಷಾ ಫೀಯನ್ನು ಕೂಡಾ ಪಡೆಯುತ್ತೇವೆ. ( )
   - ಈ) ಸಾಧ್ಯವಾದ ಎಲ್ಲಾ ಫೀಗಳ ಜತೆಗೆ ಡೊನೆಷನ್ ಕೂಡಾ ಪಡೆಯುತ್ತೇವೆ( )

4. ನಿಮ್ಮ ವಿದ್ಯಾರ್ಥಿಗಳಿಗೆ ನೀಡುವ ಮಧ್ಯಾಹ್ನದ ಉಪಹಾರದ ಬಗ್ಗೆ?

ಅ) ಉತ್ತಮವಾಗಿದ್ದು ಎಲ್ಲಾ ಮಕ್ಕಳಿಗೆ ನೀಡಲಾಗುವುದು. ( )

ಆ) ಬಡವಿದ್ಯಾರ್ಥಿಗಳಿಗೆ ಮಾತ್ರ ನೀಡಲಾಗುವುದು. ( )

ಇ) ಸಾಧಾರಣವಾಗಿದೆ ( )

ಈ) ನೀಡುವುದಿಲ್ಲ. ( )

5. ನಿಮ್ಮ ವಿದ್ಯಾರ್ಥಿಗಳಿಗೆ ಬಟ್ಟೆಗಳನ್ನು ನೀಡುವ ಸೌಲಭ್ಯ

ಅ) ಎಲ್ಲಾ ಮಕ್ಕಳಿಗೂ ನೀಡುತ್ತೇವೆ ( )

ಆ) ಕೇವಲ ಬಡ ಮಕ್ಕಳಿಗೆ ನೀಡುತ್ತೇವೆ ( )

ಇ) ಸಾಧಾರಣವಾಗಿದೆ ( )

ಈ) ನೀಡುವುದಿಲ್ಲ ( )

**2. ಶಿಕ್ಷಕರ ಸಂಪನ್ಮೂಲ**

6. ನಿಮ್ಮ ಶಾಲೆಯಲ್ಲಿ ಇರುವ ಶಿಕ್ಷಕ ವಿವರ

ಅ) ಪ್ರತಿ ವಿಷಯಕ್ಕೆ ನಾಲ್ಕು ಜನ. ( )

ಆ) ಪ್ರತಿ ವಿಷಯಕ್ಕೆ ಒಬ್ಬರು ಮಾತ್ರ ( )

ಇ) ಕೇವಲ ಕೆಲವೇ ಮಾತ್ರ ( )

ಈ) ಇಲ್ಲವೇ ಇಲ್ಲ ( )

7. ನಿಮ್ಮ ಶಾಲೆಯಲ್ಲಿ ಶಿಕ್ಷಕರ ಸಂಬಳ

ಅ) ಪ್ರತಿ ತಿಂಗಳಿಗೆ ಸರಿಯಾಗಿ ಸರ್ಕಾರಿ ನಿಯಮದಂತೆ ( )

ಆ) ಪ್ರತಿ ತಿಂಗಳಿಗೆ ಸರಿಯಾಗಿ ಸರ್ಕಾರಿ ನಿಯಮದಂತಲ್ಲ ( )

ಇ) ಪ್ರತಿ ತಿಂಗಳಿಗೆ ಸರಿಯಾಗಿ ನೀಡುವುದಿಲ್ಲ ( )

ಈ) ಅತ್ಯಲ್ಪ ಪ್ರಮಾಣದಲ್ಲಿ ನೀಡಲಾಗುವುದು ( )

8. ನಿಮ್ಮ ಶಾಲೆಯಲ್ಲಿ ಬೋಧಕೇತನ ಸಂಖ್ಯೆ

ಅ) ತೃಪ್ತಿಯಿದೆ ( )

ಆ) ಕೇವಲ ಒಬ್ಬನೇ ಒಬ್ಬ ( )

ಇ) ಅವಶ್ಯಕತೆಗೆ ಅನುಗುಣವಾಗಿ ( )

ಈ) ಇಲ್ಲವೇ ಇಲ್ಲ ( )

9. ನಿಮ್ಮ ಶಾಲೆಯಲ್ಲಿ ಶಿಕ್ಷಕರು ನೀಡುವ ಸೇವೆಯು

ಅ) ಸಂಪೂರ್ಣ ನಮ್ಮ ಸ್ಕೂಲಿಗೆ ಮಾತ್ರ ( )

ಆ) ಇತರ ಶಾಲೆಯಲ್ಲಿ ಕೂಡಾ ಕಾರ್ಯನಿರ್ವಹಿಸುತ್ತಾರೆ ( )

ಇ) ಅವಶ್ಯಕತೆ ಕಂಡು ಬಂದಾಗ ಮಾತ್ರ ಬರುತ್ತಾರೆ ( )

ಈ) ತೃಪ್ತಿಕರವಾಗಿಲ್ಲ ( )

